ಅಂತರ ಭಾರತೀಯ ಪುಸ್ತಕಮಾಲೆ

# ಪಂಜಾಬಿ ಕಥೆಗಳು

ಸಂಪಾದಕ :

ಹರಭಜನ್ ಸಿಂಗ್

ಅನುವಾದ :

ಗೌರೀಶ ಕಾಯ್ಕಿಣಿ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಮೊದಲ ಮುದ್ರಣ: 1972 (ಶಕ 1894)
ದ್ವಿತೀಯ ಮುದ್ರಣ: 1990 (ಶಕ 1912)

ರೂ. **16.00**

*Original Title in Punjabi* : KATHA PUNJAB

***Compiled by*** Harbhajan Singh

***Kannada*** *Translation* : PANJABI KATHEGALU

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ 110 016,
ಇವರಿಂದ ಪ್ರಕಟಿತ

# ಮುನ್ನುಡಿ

ಪಂಜಾಬಿ ಕಥೆಯ ಉದಯ ಪಂಜಾಬಿ ಸಾಹಿತ್ಯದೊಡನೆಯೇ ಆಯಿತು. ಪಂಜಾಬಿ ಸಾಹಿತ್ಯಕ್ಕೆ ತನ್ನದೇ ಆದ ವೈಶಿಷ್ಟ್ಯ ಇದ್ದೇ ಇದೆ. ಆದರೂ ಪಂಜಾಬಿ ಸಾಹಿತ್ಯದ ಪ್ರವಾಹದ ದಿಶೆ ಸಮಗ್ರ ಭಾರತೀಯ ಸಾಹಿತ್ಯಕ್ಕೆ, ವಿಶೇಷವಾಗಿ ಉತ್ತರ ಭಾರತದ ಸಾಹಿತ್ಯಕ್ಕೆ, ಅನುರೂಪವೇ ಆಗಿದೆ. ಹಿಂದಿ ಭಾಷೆಯಲ್ಲಿ 'ರಾಸೋ' ಸಾಹಿತ್ಯ ರಚಿತವಾಗುತ್ತಿದ್ದ ಕಾಲದಲ್ಲಿ ಮತ್ತು ಮರಾಠಿ ಭಾಷೆಯಲ್ಲಿ 'ಪೋವಾಡಾ' ಸಾಹಿತ್ಯ ಹುಟ್ಟುತ್ತಿದ್ದ ಸಮಯದಲ್ಲೇ ಪಂಜಾಬಿ ಭಾಷೆಯಲ್ಲಿ 'ವಾರಾ' ಕೃತಿಗಳು ಉದಯವಾಗುತ್ತಲಿದ್ದವು. 'ವಾರಾ' ಪಂಜಾಬಿನ ವೀರ ಕಥೆಗಳನ್ನು ಕಾವ್ಯರೂಪ ದಲ್ಲಿ ಹೇಳುತ್ತವೆ. ಕಥೆ ಈ ಕಾವ್ಯರೂಪದ ಅಭಿನ್ನ ಅಂಗವಾಗಿದೆ. ಈ 'ವಾರೆ' ಗಳ ನಾಯಕರು ಸಾಮಾನ್ಯವಾಗಿ ಜನನಾಯಕರಾಗಿದ್ದರು ಮತ್ತು ಜನಸಾಮಾನ್ಯರ ಮುಂದೆ ಇವುಗಳನ್ನು ಹಾಡಲಾಗುತ್ತಿತ್ತು. ಪಂಜಾಬಿನಲ್ಲಿ ಪಂಜಾಬಿಗಳ ಸ್ವಂತದ ರಾಜ್ಯವಿದ್ದಿಲ್ಲ. ವಾಯುವ್ಯ ಸರಹದ್ದಿನಿಂದ ದಾಳಿಕಾರರ ಪರಂಪರೆ ಯಾವಾಗಲೂ ನಡೆದುಬಂದಿತ್ತು.

ಪಂಜಾಬಿನ ಹಳ್ಳಿಗಳು ತಮ್ಮ ರಕ್ಷಣೆ ತಾವೇ ಮಾಡಿಕೊಳ್ಳಬೇಕಾಗಿತ್ತು. ವಿದೇಶೀ ದಂಡುಗಳು ಏರಿಬಂದಾಗ, ಜನರು ತಮ್ಮ ಜೀವ ಮತ್ತು ಮರ್ಯಾದೆಯ ರಕ್ಷಣೆಗಾಗಿ ಹೋರಾಡಬೇಕಾಗುತ್ತಿತ್ತು. ದಾಳಿಗಳ ಜೋರು ಕಡಿಮೆ ಆದಾಗ, ತಮ್ಮ ಯುದ್ಧವೀರರ 'ವಾರೆ'ಗಳನ್ನು ಜನ ಹಾಡುತ್ತಿದ್ದರು. ಈ ವಾರಾ ಕೃತಿಗಳು ಪಂಜಾಬಿ ಪರಾಕ್ರಮದ ರಕ್ತವನ್ನು ಬಿಸಿಯಾಗಿ ಇಡುತ್ತಿದ್ದುವು ಮತ್ತು ಮುಂದೆ ಬರಬಹುದಾದ ಸಂಕಟಗಳಿಗಾಗಿ ಸನ್ನದ್ಧರಾಗಿರುವಂತೆ ಮಾಡುತ್ತಿದ್ದುವು. ಈ ಯುದ್ಧ ಕಥೆಗಳ ನಾಯಕರು ಪಂಜಾಬಿನ ಭೂಮಿಯಲ್ಲಿ ಹುಟ್ಟಿಬೆಳೆದವರೂ, ಅಲ್ಲಿಯ ಜನರ ಆಪ್ತ ಸಂಬಂಧಿಗಳೂ ಗುರುತು-ಪರಿಚಯದವರೂ ಆಗಿರುತ್ತಿದ್ದರು. ಸುಳ್ಳು ಅಥವಾ ಹೇಡಿತನದ ಸಂಭವವೇನೂ ಇರುತ್ತಿದ್ದಿಲ್ಲ. ಈ ವಾರೆಗಳನ್ನು ಜನಸಾಮಾನ್ಯರ ಮುಂದೆ ಹಾಡುತ್ತಿದ್ದರು. ಆದ್ದರಿಂದ ಇವುಗಳಲ್ಲಿ ಯಾವದೇ ಸುಳ್ಳು ಪ್ರಶಂಸೆಗೆ ಆಸ್ಪದವಿರುತ್ತಿದ್ದಿಲ್ಲ. ಯಾವುದೇ ಕಾಳಗದಲ್ಲಿ ಸೋತ ನಾಯಕನ ಬಗೆಗೆ 'ವಾರೆ' ರಚಿಸಲಾಗುತ್ತಿದ್ದಿಲ್ಲ. ಜನ-ನಾಯಕ, ಜನ-ಗಾಯಕ, ಜನ-ಶ್ರಾವಕ—ಪಂಜಾಬಿ ಕಥೆಯ ಈ ಆರಂಭದ ರೂಪವೇ ಪಂಜಾಬಿ ಸಾಹಿತ್ಯದ ನೈಜ ವೈಶಿಷ್ಟ್ಯವನ್ನೂ ಶಾಶ್ವತವಾಗಿ ನಿರ್ಧರಿಸಿತು.

ಇತ್ತೀಚೆಗೆ ಈ 'ವಾರಾ' ಕೃತಿಗಳು ಕಾಣಬರುತ್ತಿಲ್ಲ. ಆದರೆ ಇಂದಿಗೂ ಅವುಗಳ ನಿಶ್ಚಿತವಾದ ಸಂಕೇತಗಳು ಗುರುಗ್ರಂಥದಲ್ಲಿ ಭದ್ರವಾಗಿವೆ. ಗುರುಗ್ರಂಥ

ಪಂಜಾಬಿ ಭಾಷೆಯ ಎಲ್ಲಕ್ಕೂ ಪುರಾತನ ಮತ್ತು ಪ್ರಾಮಾಣಿಕ ಗ್ರಂಥವಾಗಿದೆ. ಈ ಗ್ರಂಥದ ಒಂದು ಅಕ್ಷರವನ್ನೂ ಬದಲಿಸಲಿಕ್ಕೆ ಯಾರಿಗೂ ಅಜ್ಞೆ ಇಲ್ಲ. ಆದ್ದರಿಂದ ಈ ಗ್ರಂಥದಲ್ಲಿ ಸುರಕ್ಷಿತವಾಗಿರುವ ಸಂಕೇತಗಳು ನಮಗೆ ಅತ್ಯಂತ ಪ್ರಿಯವಾಗಿವೆ. ಮಲ್ಲಿಕ್‌ಮುರೀದ್, ಚಂದ್ರಹಡ್ಡಾ ಸೋಹಿಯಾ, ರಾಯಕಮಾಲ್, ಟುಂಡಾ ಅಸರಾಜ, ಲಲ್ಲಾ ಬಹಲೀಮಾ, ಜೋಧಾ ವೀರಾ ಪುರ್‌ಬಾನಿ, ರಾಯ್ ಮಹಿಮಾ ಹಸನೀ ಮೂಸಾ ಮುಂತಾದ ಅನೇಕ ಹೆಸರುಗಳೊಂದಿಗೆ ಸಂಬಂಧಿಸಿದ 'ವಾರಾ' ಅಥವಾ ವೀರ-ಗಾಥೆಗಳ ಸಂಕೇತಗಳು ಗುರುಗ್ರಂಥದಲ್ಲಿ ದೊರೆಯುತ್ತವೆ.

ಆದರೆ ಈ ಕಥೆಗಳು ಲಯ, ಛಂದಸ್ಸು ಮತ್ತು ಪ್ರಾಸಗಳಲ್ಲಿ ಬರೆದವು. ಆ ಯುಗದಲ್ಲಿ ಕಥೆ ಕವಿತೆಯ ಅಂಗವಾಗಿತ್ತು. ಅದಕ್ಕೆ ಒಂದು ಸ್ವತಂತ್ರ ಸ್ವರೂಪ ವಿದ್ದಿಲ್ಲ. ಸ್ವತಂತ್ರ ಕಥಾರೂಪದ ಉದ್ಭವ ಗುರು ನಾನಕರ ಸಮಯದಲ್ಲಿ ಆಯಿತು. ಗುರು ನಾನಕರು ಪಂಜಾಬಿನ ಭೂಮಿಯ ವಿರಾಟಪುರುಷರಾಗಿದ್ದರು. ಅವರ ಬಹು ಮುಖ ಪ್ರತಿಭೆಯು ಪಂಜಾಬೀ ಜೀವನದ ಅನೇಕ ಅಂಗಗಳನ್ನು ಪ್ರಕಾಶಿತವಾಗಿ ಮಾಡಿದೆ. ಪಂಜಾಬನ್ನು ಐದು ನದಿಗಳ ನಾಡೆನ್ನುತ್ತಾರೆ. ಗುರು ನಾನಕರನ್ನು ಪಂಜಾಬಿನ ಆರನೆಯ ನದಿಯೆಂದು ಕರೆದರೆ ಉಚಿತವೇ ಆಗುವದು. ಪಂಜಾಬಿನ ಐದೂ ನದಿಗಳು ಪಂಜಾಬಿನ ಮಣ್ಣನ್ನು ತೋಯಿಸುವಂತೆಯೇ ಗುರು ನಾನಕರು ಪಂಜಾಬಿನ ಜನ ಮನೋಭೂಮಿಗೆ ನೀರೆರೆದಿದ್ದಾರೆ. "ಪಂಜಾಬಿನ ಹಿಂದೂ, ನಮುಸಲಮಾನ, ಪಂಜಾಬಿ ಜಿಂದಾ ಗುರು ದೇ ನಾಮತೆ"—(ಪಂಜಾಬ ಹಿಂದುವೂ ಅಲ್ಲ, ಮುಸಲಮಾನವೂ ಅಲ್ಲ. ಪಂಜಾಬ ಗುರುವಿನ ನಾಮದಿಂದ ಬದುಕಿದೆ). ಪಂಜಾಬಿ ಗದ್ಯ ಸಾಹಿತ್ಯದ ಉದಯವೂ ಗುರು ನಾನಕರ ಹೆಸರಿನೊಂದಿಗೆ ಸಂಲಗ್ನವಿದೆ ಮತ್ತು ಪಂಜಾಬಿ ಗದ್ಯದಲ್ಲಿ ಬರೆದಕಥೆಯೂ ಗುರುನಾನಕರ ಹೆಸರಿನ ಸುತ್ತ ವಿಕಾಸಗೊಂಡಿದೆ. ಈ ಕಥೆಗೆ 'ಸಾಖಿ' ಎನ್ನುತ್ತಾರೆ. ಈ 'ಸಾಖಿ'ಗಳ ನಾಯಕ ಪಂಜಾಬದ ಜನ-ನಾಯಕ ಗುರು ನಾನಕರೇ. ಇಂದು ನಾವು ಈ ಸಾಖಿಗಳನ್ನು ಧಾರ್ಮಿಕ ಕಥೆಗಳೆಂದು ಕರೆಯುತ್ತೇವೆ. ಆದರೂ ಅವುಗಳಲ್ಲಿ ಆಧುನಿಕ ಗದ್ಯಕಥೆಯ ಬೀಜಗಳಿರುತ್ತವೆ. ಗುರುನಾನಕರ ಧರ್ಮಭಾವನೆ ಸಾಂಪ್ರದಾಯಿಕ ದೃಷ್ಟಿಯಿಂದ ಮುಕ್ತವಾಗಿತ್ತು. 'ಸಾಖೀ'ಕಾರರ ಧರ್ಮಭಾವನೆಯೂ ಸಾಂಪ್ರದಾಯಿಕ ಕಥೆಯಿಂದ ಹೊರತಾಗಿತ್ತು. ಈ ಕಥೆಗಳು ಸಾಂಪ್ರದಾಯಿಕ ಕಥೆಯಿಂದ ಮಾತ್ರವಲ್ಲ, ಪ್ರಾದೇಶಿಕ ಸಂಕುಚಿತತೆಯಿಂದಲೂ ಮುಕ್ತವಾಗಿವೆ. ಗುರು ನಾನಕರು ಭಾರತದ ನಾಲ್ಕೂ ಮೂಲೆಗಳ ಯಾತ್ರೆ ಮಾಡಿದ್ದರು; ಭಾರತದ ಹೊರಗಿನ ದೇಶಗಳಲ್ಲಿಯೂ ಭ್ರಮಣಮಾಡಿದ್ದರು. ಈ 'ಸಾಖಿ'ಗಳು ಅನೇಕಪ್ರಕಾರದ ಜೀವ-ಜಂತು, ಭೂಮಿ, ಖುತುಮಾನ ಮತ್ತು ಜನರೊಂದಿಗೆ ಸಂಬಂಧಿಸಿರುತ್ತವೆ. ಇವುಗಳಲ್ಲಿ ಅರಸರೂ ಆಳುಕಾಳುಗಳೂ, ಬಡವಬಲ್ಲಿದರೂ ಇರುತ್ತಾರೆ. ಧರ್ಮ-ಕರ್ಮದಲ್ಲಿ

ತೊಡಗಿದ ಸೂಫೀ ಸಂತ-ಫಕೀರರೂ ಇರುತ್ತಾರೆ. ಎಲ್ಲ ಬಗೆಯ ಧಾರ್ಮಿಕತೆ ಯಿಂದ ಉದಾಸೀನರಾದ ಕೊಲೆಗಡುಕ, ಕಳ್ಳ, ಠಕ್ಕ, ಹಾದಿಹೋಕರು ಮಾತ್ರವಲ್ಲ ರಾಕ್ಷಸರೂ ಇದ್ದಾರೆ. ಗುರು ನಾನಕರಿಗೆ ಸಂಬಂಧಿಸಿದ್ದರೂ ಒಂದೊಂದು ಕಥೆಯೂ ಜೀವನದ ಹೊಸ ದರ್ಶನವನ್ನು ಮಾಡಿಕೊಡುತ್ತದೆ. ಮತ್ತು ಬಾಳಿನ ವಿವಿಧ ನೋಟಗಳನ್ನು ರೂಪಿಸುತ್ತದೆ. ಇವುಗಳಲ್ಲಿ ಜೀವನದ ಬಹುಮುಖ ವೈವಿಧ್ಯ ಹಾಗೂ ಗಂಭೀರತೆಯೂ ಇದೆ. ರೂಪದ ದೃಷ್ಟಿಯಿಂದ ಈ 'ಸಾಖಿ'ಗಳು ಇಂದಿನ ಲಘು ಕಥೆಗೆ ಬಹಳ ಸಮೀಪ. ಎಲ್ಲಕ್ಕೂ ರೋಚಕವಾದ ತಥ್ಯವೆಂದರೆ ಸಾಖಿ ಸಾಹಿತ್ಯವು ಕಥೆಯನ್ನು ಆಖ್ಯಾನ ವೃತ್ತಿಯಿಂದ ಬಿಡುಗಡೆಮಾಡಿರುವುದು. ಈ ಸಾಖಿಗಳು ಧಾರ್ಮಿಕ ಆಖ್ಯಾನಗಳಂತೆ ಉದ್ದವಾಗಿರುವುದೂ ಇಲ್ಲ, ಅಥವಾ ದೇವ ದೇವತೆಗಳ ಅಸಾಧಾರಣ ಮಹಿಮೆಗಳ ಬಗ್ಗೆ ಓದುಗರನ್ನು ಚಕಿತಗೊಳಿಸುವುದೂ ಇಲ್ಲ. ಲೋಕ ಕಥೆಗಳಂತೆ ಮನೋರಂಜನೆ ಇವುಗಳ ಉದ್ದೇಶವಲ್ಲ. ಇವುಗಳ ರೂಪ ಸಂಕ್ಷಿಪ್ತ ವಾಗಿದ್ದು, ಇವು ಉದ್ದೇಶಪೂರ್ಣವಾಗಿರುತ್ತವೆ. ಮಾನವೀಯ ಅನುಭವದಂತೆಯೇ ಇವು ಸಂಕ್ಷಿಪ್ತ ಮತ್ತು ಸಾರ್ಥಕವಾಗಿರುತ್ತವೆ.

ಈ ಜನ್ಮಸಾಖಿಗಳು ಎರಡು-ಎರಡೂವರೆ ನೂರು ವರ್ಷಗಳವರೆಗೂ ರಚಿಸಲ್ಪಡುತ್ತ ಬಂದುವು. ಇವು ಪಂಜಾಬಿ ವಾಚಕರಲ್ಲಿ ಮತ್ತು ಶ್ರೋತೃಗಳಲ್ಲಿ ಒಂದು ಹೊಸ ಬಗೆಯ ಸಾಹಿತ್ಯಾಭಿರುಚಿಯ ತಳಪಾಯ ಹಾಕಿದುವು. ಈ ಗದ್ಯರೂಪದ ಪ್ರಭಾವ ಪಂಜಾಬಿ ಪದ್ಯಸಾಹಿತ್ಯದ ಮೇಲೂ ಬಿತ್ತು ಮತ್ತು ಛಂದೋಬದ್ಧ ಭಾವಾಶೈಲಿ ಯಲ್ಲಿ ಲಘುಕಥೆಗಳು ಬರೆಯಲ್ಪಟ್ಟವು. ಬಾಯೀಗುರುದಾಸರು ಗೀತ ಶೈಲಿಯಲ್ಲಿ ಸುಮಾರು ಇಪ್ಪತ್ತೊಂಬ್ಮರು ಸಣ್ಣ ಕಥೆಗಳನ್ನು ಬರೆದರು. ಇವುಗಳಲ್ಲಿ ಯಾವುದಾದ ರೊಂದನ್ನು ಗದ್ಯರೂಪಕ್ಕೆ ಬದಲಿಸಿದಲ್ಲಿ ಆಗ ಅವುಗಳಲ್ಲಿರುವ ಆಧುನಿಕ ಸಣ್ಣಕಥೆಗಳ ಗುಣಗಳು ಕಾಣಿಸಿಕೊಳ್ಳುತ್ತವೆ. ಭೇದವಿಷ್ಟೇ, ಈ ಕಥೆಗಳ ಆಧಾರ ವ್ಯಕ್ತಿಗತ ಅನುಭವವಲ್ಲ. ಆದರೆ ಅವು ಬಳಕೆಯಲ್ಲಿರುವ ನಡೆ-ನುಡಿಗಳನ್ನು ಆಧರಿಸಿರುತ್ತವೆ. ಈ ರಚನೆಗಳನ್ನು ಓದುವುದರಿಂದ ಕಥೆ ಮತ್ತು ಸಣ್ಣ ಕಥೆಗಳ ನಡುವೆ ಇರುವ ವ್ಯತ್ಯಾಸ ಸುಲಭವಾಗಿ ಸ್ಪಷ್ಟವಾಗುವದು.

ಮಧ್ಯಯುಗದಲ್ಲಿ ಪಂಜಾಬಿ ಕಥೆಗಳಿಗೆ ಎರಡು ಮೂಲಗಳಿದ್ದುವು. ಪಂಜಾಬಿ ಐತಿಹ್ಯ (ಪಂಜಾಬಿ ಕಿಸ್ಸಾ) ಮತ್ತು ದಶಮಗ್ರಂಥದ ತ್ರಿಯಾಚರಿತ್ರ ಅಥವಾ ಚರಿತ್ರೋಪಾಖ್ಯಾನ ಈ ರಚನೆಗಳನ್ನು ಓದಿದರೆ ಮಧ್ಯಯುಗದಲ್ಲಿಯೇ ಪಂಜಾಬಿ ಸಾಹಿತ್ಯವು ಆಧುನಿಕತೆಯನ್ನು ಸ್ವೀಕರಿಸಹತ್ತಿತೋ ಎಂದು ಭಾಸವಾಗುತ್ತದೆ. ವ್ಯಕ್ತಿತ್ವದ ಉದಯವು ಆಧುನಿಕತೆಯ ದೊಡ್ಡ ವೈಶಿಷ್ಟ್ಯ. ನಮ್ಮ ಪ್ರಾಚೀನ ಹಾಗೂ ಮಧ್ಯಯುಗದಲ್ಲಿ ಮನುಷ್ಯನು ಕೇವಲ ಜೀವಿಯಾಗಿದ್ದ. ಅವನಿಗೊಂದು ವ್ಯಕ್ತಿತ್ವ ಇರಲಿಲ್ಲ. ಒಂದು ಜೀವವನ್ನು ಇನ್ನೊಂದು ಜೀವದಿಂದ ಬೇರೆಯಾಗಿ ಗುರುತಿಸುವದು

ಕಾರಣವಾಗಿತ್ತು. ಏಕೆಂದರೆ ಒಂದೊಂದು ಜೀವಕ್ಕೂ ಒಂದೊಂದು ಸಾರ್ವಜನಿಕ ಆದರ್ಶವಿತ್ತು. ಆ ಆದರ್ಶವನ್ನು ಪ್ರತಿಪಾದಿಸುವುದರಲ್ಲೇ ಆ ಜೀವದ ಇಡೀ ಬದುಕು ಕಳೆಯುತ್ತಿತ್ತು. ಈ ಜೀವಗಳು ಕಥೆ-ಆಖ್ಯಾನಗಳ ಸ್ಥಿರ ಪಾತ್ರಗಳಾಗಿದ್ದುವು. ಅವುಗಳ ವಿಕಾಸ ಸಾಧ್ಯವಿಲ್ಲವೆನ್ನಬಹುದಾಗಿತ್ತು. ಉತ್ತಮ ಇಲ್ಲವೇ ವೀರಪಾತ್ರಗಳು ಸರಳ ಸಮತಲ (ಸಪಾಟು) ಮತ್ತು ಸ್ಥಿರವಾಗಿರುತ್ತಿದ್ದುವು. ಅವುಗಳಿಗೆ ತಮ್ಮ ಸ್ವತಂತ್ರ ಇಚ್ಛಾಶಕ್ತಿಯ ಪರಿಚಯವೂ ಇದ್ದಿಲ್ಲ. ತಮ್ಮ ಅದ್ಭುತ ವಿಲಕ್ಷಣ ವೈಶಿಷ್ಟ್ಯಗಳನ್ನು ಪ್ರಕಟಗೊಳಿಸುವ ಇಚ್ಛೆಯೂ ಇದ್ದಿಲ್ಲ. ಮನುಷ್ಯ ಧರ್ಮ ದೊಂದಿಗೆ, ಪ್ರಪಂಚದೊಂದಿಗೆ ಸ್ಥಿರವಾದ ದೃಢವಾದ ಸಂಬಂಧಗಳಿಂದ ಬದ್ಧನಾಗಿರು ತ್ತಿದ್ದ. ಈ ಸಂಬಂಧ ಬಂಧನಗಳಲ್ಲಿ ಏನೇ ಬದಲಾವಣೆಯ ಶಕ್ಯತೆಯೂ ಇದ್ದಿಲ್ಲ. ಸಾಂಸಾರಿಕ ಬಂಧನಗಳಲ್ಲಿ ಮನುಷ್ಯ ಪ್ರಜೆಯಾಗಿದ್ದ ಮತ್ತು ಧಾರ್ಮಿಕ ಬಂಧನಗಳಲ್ಲಿ ಆತ ದೇವರ ದಾಸ, ಗುಲಾಮನಾಗಿದ್ದ ಸತ್ಯ ಸಂಗತಿ ಏನೆಂದರೆ ಪ್ರಾಚೀನ ಹಾಗೂ ಮಧ್ಯಯುಗದ ಸಮಗ್ರ ಸಮಾಜ ವ್ಯವಸ್ಥೆಯ ತಳಪಾಯವೇ 'ದಾಸ್ಯ'ವಾಗಿತ್ತು. ಪಂಜಾಬಿ 'ಕಿಸ್ಸಾ' ಮತ್ತು 'ತ್ರಿಯಾ-ಚರಿತ್ರ' ಈ ದಾಸ್ಯದ ವಿರುದ್ಧ ಬಂಡಾಯದ ದನಿಯಾಗಿದ್ದು ಅದು ಹೀಗೆ ಅನಿಸುತ್ತದೆ. ದಾಸನು ಸಹಜವಾಗಿಯೇ ತಲೆ ಎತ್ತಿ ನೇರ ನಿಂತಿದ್ದಾನೆ. ಕುತ್ತಿಗೆ ಸೆಟೆದುಕೊಂಡು ಅನ್ನುತ್ತಾನೆ, "ಸಾಕು, ಈ ತನಕ ಏನಾಯಿತೋ ಆಯಿತು. ಇನ್ನು ಮುಂದೆ ಈ ಬಗೆಯ ದಾಸ್ಯ ನಡೆಯಲಾರದು." ಪಂಜಾಬದ ಈ 'ಕಿಸ್ಸೆ'ಗಳಲ್ಲಿ ಮಧ್ಯ ಯುಗದ ಜೀವನ ಮೂಲ್ಯಗಳು ಕಡಿದುಕೋದಂತೆ ಕಾಣುತ್ತದೆ. ಹುಡುಗಿಯರು ತಾಯ್ತಂದೆಗಳ ದಾಸ್ಯವನ್ನು ಒಪ್ಪಿಕೊಳ್ಳಲು ನಿರಾಕರಿಸಿದರು. ಅಂತರ್ದೇಶೀಯ ಮತ್ತು ಅಂತರ್ಧರ್ಮೀ ಪ್ರಣಯದ (ಸಸ್ಸೀ-ಪುನ್ನೂ ಮತ್ತು ಸೋಹನೀ-ಮಹೀಪಾಲ) ಉದಯವಾಯಿತು. ವರ್ಜ್ಯ ಸಂಬಂಧಿಕರೊಳಗೂ ಪ್ರೀತಿಗೆ ಮನ್ನಣೆ ಸಿಕ್ಕಿತು. ಸ್ತ್ರೀವರ್ಗದಲ್ಲಿಯೂ ಬಂಡೇಳುವ ಸಾಹಸ ಜಾಗೃತವಾಯಿತು. ಬರೀ ಜೀವವಾಗಿದ್ದ ಮನುಷ್ಯ ಈಗ ವ್ಯಕ್ತಿಯಾಗುತ್ತಿದ್ದ. ಮನುಷ್ಯ ತನ್ನ ಸ್ವತಂತ್ರ ಇಚ್ಛಾಶಕ್ತಿಯನ್ನು ಘೋಷಿಸಹತ್ತಿದ್ದ. ತ್ರಿಯಾ-ಚರಿತ್ರಗಳಲ್ಲಿ ಹೆಣ್ಣಿನ ಇಂಥ ಸ್ವತಂತ್ರ ಇಚ್ಛಾಶಕ್ತಿಯು ಸೇಡು ತೀರಿಸುವ ತೀರ್ಮಾನವನ್ನೇ ಮಾಡಿದಂತಿತ್ತು. ಶತಮಾನಗಳ ದಾಸ್ಯದ ಪ್ರತೀಕವೆಂದರೆ—ಹೆಣ್ಣು. ಒಂದು ಕಡೆಗೆ ಗುರು ಗೋವಿಂದಸಿಂಗ್‌ರಂಥಹ ಜನ ನಾಯಕರು ದಮಿತ-ದಲಿತ ಪ್ರಜೆಯನ್ನು ಸುಲ್ತಾನರ ಬಾದಶಹರ ಗುಲಾಮಗಿರಿ ಯಿಂದ ವಿಮೋಚನೆಮಾಡುವ ಪ್ರತಿಜ್ಞೆ ಕೈಗೊಂಡರು. ಮತ್ತು ಅತ್ತ ಸಾಹಿತ್ಯದಲ್ಲಿ ಮುಕ್ತಿಯ ಭಾವನೆ ಮೈಮುರಿದು ಏಳುತ್ತಿತ್ತು. ಸಾಹಿತ್ಯ ಸಂಗ್ರಾಮವು ಜೀವನ ಸಂಗ್ರಾಮಕ್ಕೆ ಸಮಾಂತರವಾಗಿ ಸಾಗಿತ್ತು. ಪ್ರೇಮ 'ಕಿಸ್ಸೆ'ಗಳ ಹೀರ, ಸೋಹನೀ, ಸಸ್ಸೀ ಮತ್ತು ಚರಿತ್ರೋಪಾಖ್ಯಾನದ ನಾರಿಯರು ದಾಸ ಭಾವನೆಯ ಮೇಲೆ ನಿಂತ

ಮಾನವೀಯ ಸಂಬಂಧಗಳನ್ನು ಪ್ರತಿಭಟಿಸಲು ಪ್ರಾರಂಭಿಸಿದರು. ಈ ಪ್ರತಿಭಟನೆಯನ್ನು ಕಥೆಯ ಮಾಧ್ಯಮದಲ್ಲಿ ಎಷ್ಟು ಸುಂದರವಾಗಿ ಸಾದರಪಡಿಸಲು ಸಾಧ್ಯವೋ ಅಷ್ಟು ಸುಂದರವಾಗಿ ಬೇರೆ ಯಾವುದೇ ಸಾಹಿತ್ಯಿಕ ವಿಧಾನದ ಮಾಧ್ಯಮದಿಂದ ಸಾಧ್ಯವಿದ್ದಿಲ್ಲ. ಈ 'ಕಿಸ್ಸೆ' ಆಖ್ಯಾನಗಳು ಕೇವಲ ತಮ್ಮ ಬಂಡುಗಾರ ಭಾವನೆಯಿಂದಾಗಿಯೇ ಪಂಜಾಬಿ ಜನಜೀವನದಲ್ಲಿ ಬಹಳ ಆಳಕ್ಕೆ ಇಳಿದು ಕೂತಿವೆ. ಪಂಜಾಬಿ ಬಂಡುಗಾರಿಕೆ ಪುರಾತನ ಮೂಲ್ಯಗಳ ವಿಧ್ವಂಸದೊಂದಿಗೆ ನೂತನ ಮೂಲ್ಯಗಳ ಸ್ಥಾಪನೆಯನ್ನು ಮಾಡುತ್ತದೆ. 'ತ್ರಿಯಾ ಚರಿತ್ರ'ದಲ್ಲಿ ಹಳೆಯ ಮಾನ್ಯಗಳೂ ಜೀವನ ಮೂಲ್ಯಗಳೂ ಧ್ವಂಸವಾಗುತ್ತವೆ. ಮತ್ತು ಪ್ರೇಮ ಗಾಥೆಗಳ ಹೊಸ ಅಧಿಕಾರಗಳ ಸ್ಥಾಪನೆಯ ಪ್ರಯತ್ನವೂ ಇದೆ. ಆಧುನಿಕ ಯುಗದ ಉದಯಕ್ಕಿಂತ ಮುಂಚೆಯೇ ಪಂಜಾಬಿ ಸಾಹಿತ್ಯಕಾರರಿಗೆ ಜರ್ಜರ ಜೀವನ ಮೂಲ್ಯಗಳನ್ನು ಧ್ವಂಸಮಾಡುವ ಮತ್ತು ಹೊಸ ಮೂಲ್ಯಗಳನ್ನು ಸ್ಥಾಪಿಸುವ ಹಕ್ಕು ದೊರೆಯಿತು. ಇವುಗಳಲ್ಲಿಯ ಮಾನವಭಾವನೆ ಮತ್ತು ಮಾತೃಭೂಮಿ ಭಾವನೆ ಈ ಕಥೆಗಳ ಒಂದು ದೊಡ್ಡ ವೈಶಿಷ್ಟ್ಯ. ಕಷ್ಟದಲ್ಲಿದ್ದಾಗ ಭಗವಂತನ ಧ್ಯಾನಮಾಡಿದಾಗ್ಯೂ ಭಗವಂತನು ಅವತಾರಪುರುಷನೆಂಬ 'ಅವತಾರ ಭಾವನೆ'ಯು ವಿಕಾಸಗೊಳ್ಳಲು ಪಂಜಾಬಿನಲ್ಲಿ ಸಾಧ್ಯವಾಗಲಿಲ್ಲ. ಮನುಷ್ಯ ತನ್ನ ಸಂಕಟ ದೂರ ಮಾಡಿಕೊಳ್ಳಲು ತಾನೇ ಪ್ರಯತ್ನಮಾಡಬೇಕಾಗಿದೆ. ಅವತಾರಪುರುಷನ ಕಥೆಯ ಕೊನೆ ನಿಶ್ಚಯವಾಗಿಯೂ ಗೆಲುವಿನಲ್ಲಿ ಆಗುತ್ತದೆ. ಆದರೆ ಮನುಷ್ಯನ ಕಥೆಯ ಕೊನೆಯು ಗೆಲುವು ಇಲ್ಲವೇ ಸೋಲು ಎರಡೂ ಬಗೆಯಲ್ಲಿ ಆಗಬಲ್ಲದು. ಇದರ ಫಲವಾಗಿ ಕಥೆಯಲ್ಲಿ ವೈವಿಧ್ಯವೂ ಬರುತ್ತದೆ, ಗಾಂಭೀರ್ಯವೂ ಬರುತ್ತದೆ. ಮನುಷ್ಯನ ಬಗೆಗೆ ಅವಿಚ್ಛಿನ್ನ ಆಸ್ಥೆಯ ಮೂಲಕವೆ ಪಂಜಾಬಿ ಕಥೆ ಮಧ್ಯಯುಗದಲ್ಲಿಯೂ ಆಧುನಿಕ ಪ್ರವೃತ್ತಿಯುಳ್ಳದ್ದಾಗಿ ಅನಿಸಿತು.

ವೀರ್‌ಸಿಂಗ್ ಆಧುನಿಕ ಪಂಜಾಬಿ ಸಾಹಿತ್ಯದ ಪ್ರವರ್ತಕನೆಂದು ಎಣಿಸಲಾಗುತ್ತದೆ. ಪಂಜಾಬಿ ಭಾಷೆಯಲ್ಲಿ ವೀರ್‌ಸಿಂಗನೇ ಎಲ್ಲಕ್ಕೂ ಮೊದಲು ಕಾದಂಬರಿಯನ್ನು ಬರೆದನು. ಈ ಕಾದಂಬರಿಗಳು ಸುದೀರ್ಘಕಥೆಗಳು. ಈ ಕಥೆಗಳು ಪಂಜಾಬಿ ಸ್ವಭಾವ ಮತ್ತು ಪರಂಪರಾಗತ ಸಂಪತ್ತಿಗೆ ನಿಷ್ಠೆಯನ್ನು ತಾಳಿವೆ. "ಸುಂದರಿ" ಮತ್ತು "ಸತವಂತ ಕೌರ" ಇವು ಆಳವಾದ ಧಾರ್ಮಿಕ ಬಣ್ಣದ ಕೃತಿಗಳಾಗಿವೆ. ಆದರೆ ಇವುಗಳಲ್ಲಿ ಕಥೆಯು ವ್ಯಕ್ತಿಯ ಸಹಾಯದಿಂದ ಮುಂದುವರಿಯುತ್ತದೆ ಮತ್ತು ತನ್ನ ಕಾಲನ್ನು ನೆಲದಿಂದ ಕೀಳಲು ಕೊಡುವುದಿಲ್ಲ. ಘೋರ ಸಂಕಟ ಮತ್ತು ನಿರ್ಭಯ ಬಂಡುಗಾರಿಕೆ ಈ ಕಥೆಗಳ ನರ-ನಾಡಿಗಳಲ್ಲಿ ತುಂಬಿವೆ. ಪಂಜಾಬಿಯಲ್ಲಿ ಆಧುನಿಕ ಹಾಗೂ ಲಘುಕಥೆಯ ಉದಯವು ನಾನಕ್ ಸಿಂಗ್‌ನಿಂದಲೇ ಎಣಿಸಬೇಕಾಗುತ್ತದೆ. ನಾನಕ್‌ಸಿಂಗ್‌ನ ಸಮಯಕ್ಕೆ ಮಧ್ಯಮ ವರ್ಗದ ಉದಯವಾಗಿತ್ತು. ಮಧ್ಯಮ

ವರ್ಗದ ಚರಿತ್ರೆಯ ದೊಡ್ಡ ಸ್ವಾರಸ್ಯ ಅದರ ಪುಣಿಬಲ್ಲತನ. ಅದರ ಯಾವುದೇ ಆಸ್ಥೆ-ಆಸಕ್ತಿ ಅಂತಿಮವಲ್ಲ. ನಿಶ್ಚಿತವಲ್ಲ. ನಾನಕಸಿಂಗ್‌ನ ಗಮನ ಪಟ್ಟಣದ ಕಡೆಗೆ ಇತ್ತು. ಪಟ್ಟಣದ ಬದುಕಿನಂತೆಯೇ ಅವರ ಕಥೆಯಲ್ಲಿ ವೈವಿಧ್ಯತೆ ಇದೆ. ಅನಿಶ್ಚಿತತೆ ಇದೆ. ಇದು ಸ್ಥಿರವಾದ ಮಾನವೀಯ ಬಾಂಧವ್ಯ ಮತ್ತು ಬಲಿಷ್ಠ ರೂಢಿಗಳ ಕಥೆಯಲ್ಲ, ಪ್ರತಿಕ್ಷಣದಲ್ಲಿ ಒದಗುವ ಮಾನವೀಯ ಅನುಭವಗಳ ಕಥೆ. ಇದರಲ್ಲಿ ಹಳೆಯ ಬಂಡುಗಾರಿಕೆಯೂ ಇಲ್ಲ, ಹಳೆಯ ಭಾವಿಕ ಪ್ರೇಮವೂ ಇಲ್ಲ. ಈ ಕೃತಿಗಳ ಮುಖ ಸಂಕಟದ ಕಡೆಗೂ ಇಲ್ಲ, ಧರ್ಮದ ಕಡೆಗೂ ಇಲ್ಲ, ಶುದ್ಧ ಶಾರೀರಿಕ ಅವಶ್ಯಕತೆಗಳ ಕಡೆಗೂ ಇಲ್ಲ. ನಾನಕಸಿಂಗ್‌ನ ಬಳಿಗೆ ಒಂದು ಆಳವಾದ ಜೀವನ-ದರ್ಶನವೂ ಇರುವದಿಲ್ಲ. ಅವರ ಸಾರ್ಥಕತೆ ಅವರ ಸಹಜ ಮಧ್ಯಮ ವರ್ಗೀಯ-ಭಾವನೆಯ ಮೇಲೇ ಆಧರಿಸಿದೆ. ಅರಿವಿಲ್ಲದೆಯೇ ಅವರು ಪಂಜಾಬಿ ಸಾಹಿತ್ಯ ದೃಷ್ಟಿಯನ್ನು ಅನೇಕ ಒತ್ತಾಯಗಳಿಂದ ಬಿಡುಗಡೆ ಮಾಡಿದ್ದಾರೆ. ಈ ಸಂಗ್ರಹದಲ್ಲಿನ "ಇಸ್ಪೀಟಿನ ಚಟ" ಶುದ್ಧ ಮಧ್ಯಮವರ್ಗೀಯ ಜೀವನ ಪದ್ಧತಿಯ ಮೇಲೆ ಬರೆದ ಕಥೆ ಆಗಿದೆ. ಈ ಜೀವನ ಪದ್ಧತಿಯೇ ನಾನಕಸಿಂಗ್‌ನ ಕಲೆಯ ಅರ್ಥ, ಹಾಗೂ ಅಂತ್ಯವಾಗಿದೆ. ಪಂಜಾಬಿ ಆಧುನಿಕತೆಯ ಆರಂಭ ಈ ಮಧ್ಯ ಬಿಂದುವಿನಿಂದಲೇ ಪ್ರಾರಂಭವಾಗುತ್ತದೆ.

ನಾನಕಸಿಂಗ್‌ನ ನಂತರ ಪಂಜಾಬಿ ಕಥಾಪ್ರಪಂಚದಲ್ಲಿ ಪ್ರಮುಖ ಹೆಸರು ಗುರುಭಕ್ಷಸಿಂಗ್‌ರದು. ಗುರುಭಕ್ಷಸಿಂಗ್‌ರು ಪಂಜಾಬೀ ಕಥೆಯನ್ನು ಇನ್ನೂ ಮುಂದಕ್ಕೇ ಒಯ್ಯುತ್ತಾರೆ. ಮತ್ತು ತುಸು ಹಿಂದಕ್ಕೂ ಒಯ್ಯುತ್ತಾರೆ. ಅವರು ಕಥೆಗೆ ಜೀವನ ದರ್ಶನ ಜೋಡಿಸಿ ಹೊಸ ಮರ್ಯಾದೆಯನ್ನು ನೀಡಿದರು. ಆದರೆ ಅವರ ಮಧ್ಯಮವರ್ಗೀಯ ಭಾವನೆ ನಾನಕಸಿಂಗ್‌ರದಂತೆ ಸಹಜವಾಗಿಲ್ಲ. ಅವರ ಗಮನ ಭಾವಿಕ ಆದರ್ಶದ ಕಡೆ ಇದೆ. ಸಹಜ ಯಥಾರ್ಥತೆಯ ಮೇಲೆ ಇಲ್ಲ. ಮಧ್ಯಮವರ್ಗೀಯ ಜೀವನವು ಯಥಾರ್ಥತೆ ಮತ್ತು ಆದರ್ಶ ಇವುಗಳ ನಡುವಿನ ಬಿಗಿತದ ಜೀವನವಾಗಿದೆ. ಕಥೆ ಸಾಮಾನ್ಯವಾಗಿ ಬಿಗಿತದಿಂದ ಆರಂಭವಾಗಿ ಬಿಗಿತದಲ್ಲಿಯೇ ಮುಕ್ತಾಯಗೊಳ್ಳುತ್ತದೆ. ನಾನಕಸಿಂಗ್‌ರ ಕೃತಿಗಳಲ್ಲಿ ಆ ಬಿಗಿತದ ಮುಖ ದೈನಂದಿನ ಯಥಾರ್ಥತೆಯ ಕಡೆಗೆ ಇರುತ್ತದೆ. ಗುರುಭಕ್ಷಸಿಂಗ್‌ರ ಬಿಗಿತದ ಮುಖ ಆದರ್ಶದ ಕಡೆಗೆ ಇರುತ್ತದೆ. ಮಧ್ಯಮವರ್ಗದ ಮನುಷ್ಯ ಯಾವ ಆಕಾಂಕ್ಷೆಗಳನ್ನು ಭೋಗಿಸಲು ಸಂಕೋಚಪಡುತ್ತಾನೋ ಅವುಗಳ ವ್ಯಾಖ್ಯೆಯನ್ನು ಗುರುಬಕ್ಷಸಿಂಗ್ ಆದರ್ಶಮಯವಾಗಿ ಮಾಡುತ್ತಾರೆ. ಈ ವ್ಯಾಖ್ಯೆಯ ಬೀಸು 'ಸಹಜ ಪ್ರೀತಿ'ಯಿಂದ ಹಿಡಿದು 'ಭೌತಿಕವಾದ'ದ ತನಕ ನಿಲುಕುತ್ತದೆ. ಆದರೆ ಅವರು ಪ್ರೀತಿಯ ಶಾರೀರಿಕ ಅಂಗವನ್ನೂ ಒಪ್ಪಿಕೊಂಡಿಲ್ಲ. ಭೌತಿಕವಾದದ ಅನಾತ್ಮ ದೃಷ್ಟಿಯನ್ನೂ ಒಪ್ಪಿಲ್ಲ. ಅವರ ಕಥೆಗಳ ಸಂಬಂಧ ವ್ಯಕ್ತಿಗಳ ಸ್ಥಿತಿಗಿಂತ ಅವರ

ಭಾವನೆಗಳೊಂದಿಗೇ ಹೆಚ್ಚು ಇರುತ್ತದೆ. ನಾನಕಸಿಂಗ್ ಮತ್ತು ಗುರುಭಕ್ಷಸಿಂಗ್ ಇವರಿಬ್ಬರ ಪ್ರಯತ್ನ ಪಂಜಾಬಿ ಕಥೆಗೆ ಆಧಾರನೀಡಿದೆ. ತಥ್ಯ ಮತ್ತು ಸತ್ಯ, ಸ್ಥಿತಿ ಮತ್ತು ಭಾವ, ಸಹಜ ಮತ್ತು ಸಂಕೇತ ದೃಶ್ಯ ಮತ್ತು ದೃಷ್ಟಿಯತನಕವೂ ಕಥೆಯು ಚಾಚಿದ್ದು ಕಂಡುಬರುತ್ತದೆ.

ಸೇಖೋ ಮತ್ತು ದುಗ್ಗಲ್ ಇವರು ಪಂಜಾಬೀ ಕಥೆಗೆ ಪ್ರೌಢಿಮೆಯನ್ನು ತಂದುಕೊಟ್ಟರು. ಭಾವುಕನಾಗದೆ ಭಾವಪೂರ್ಣ ಕಥೆಯನ್ನು ಹೇಳುವದರಲ್ಲಿ ಸೇಖೋ ಅದ್ವಿತೀಯರು. 'ಪೇಮಿದೇನ್ಯಾಣಿ' ಮತ್ತು 'ಮೂಢ ವಿಧವಾ' ಅವರ ಅದ್ವಿತೀಯ ಕಥೆಗಳು. ಸೇಖೋ ಮಾರ್ಕ್ಸವಾದೀ ವಿದ್ವಾಸರೆಂದು ಪ್ರಸಿದ್ಧರು. ಪಂಜಾಬಿ ವಿಮರ್ಶೆಗೆ ಬೌದ್ಧಿಕ ದೃಷ್ಟಿಯ ಭದ್ರವಾದ ಆಧಾರವನ್ನು ನೀಡುವದರಲ್ಲಿ ಸೇಖೋ ಅವರ ಕೈವಾಡ ಪ್ರಬಲವಾಗಿದೆ. ಆದರೆ ಕಥೆ ಹೇಳುವಾಗ ಅವರ ಬೌದ್ಧಿಕತೆ ಪ್ರತ್ಯಕ್ಷ ಕೈವಾಡ ತೋರಿಸುವುದಿಲ್ಲ. ಇನ್ನು ಅಜಾಗೃತ ಮತ್ತು ಅಪ್ರತ್ಯಕ್ಷ ರೂಪದಲ್ಲಿ ಅದು ಕಥೆಯ ಸಮಗ್ರ ವಾತಾವರಣದಲ್ಲಿಯೇ ಅನಿವಾರ್ಯವಾಗಿ ತುಂಬಿರುತ್ತದೆ. ಅದರ ಪರಿಣಾಮವಾಗಿ ಕಥೆಗೆ ಬೌದ್ಧಿಕ ಪ್ರೌಢಿಮೆಯ ಆಧಾರವೂ ದೊರೆಯುತ್ತದೆ. ಮತ್ತು ಅದರ ಸಹಜ ಪ್ರವಾಹಿತ್ವವೂ ಸ್ಥಾಯಿಯಾಗಿರುತ್ತದೆ.

ಕರ್ತಾರಸಿಂಗ್ ದುಗ್ಗಲ್ ಪಂಜಾಬೀ ಭಾಷೆಯ ಅಗ್ರಕೋಟಿಯ ಕಥಾಗಾರರು. ಅವರು ಕಾದಂಬರಿಯನ್ನೂ ನಾಟಕವನ್ನೂ ಬರೆದಿದ್ದಾರೆ. ಕವಿತೆಯಲ್ಲಿಯೂ ಕೈ ಹಿಡಿತವಿಟ್ಟುಕೊಂಡಿದ್ದಾರೆ. ಮತ್ತು ಒಮ್ಮೊಮ್ಮೆ ಲೇಖಣಿಯ ರುಚಿ ಬದಲಿಸಲಿಕ್ಕೆ ವಿಮರ್ಶೆಯ ಪ್ರಪಂಚದಲ್ಲಿಯೂ ಪ್ರವೇಶಿಸಿದ್ದಾರೆ. ಆದರೂ ಅವರನ್ನು ಕಥಾಗಾರನ ರೂಪದಲ್ಲಿಯೇ ನೆನಪಿಡಲಾಗುತ್ತದೆ. ಪಂಜಾಬಿ ಭಾಷೆಯಲ್ಲಿ ಒಂದೇ ಸಮನೆ ಅವ್ಯಾಹತವಾಗಿ ಕಥಾ ಸಾಧನೆಯನ್ನು ದುಗ್ಗಲರೇ ಮಾಡಿದ್ದು. ಕಳೆದ ಮೂವತ್ತು ವರ್ಷಗಳ ಪಂಜಾಬಿ ಭಾವನೆಗಳ ಇತಿಹಾಸ ದುಗ್ಗಲರ ಕಥೆಗಳಲ್ಲಿ ಅಂಕಿತವಾಗಿದೆ. ಆದರೆ ಅದು ಪರೋಕ್ಷ ರೂಪದಲ್ಲಿ. ಏಕೆಂದರೆ ದುಗ್ಗಲರ ಪ್ರಥಮ ಲೇಖನ ಕಥೆಯ ರೂಪಕವಾಗಿದೆಯೇ ಹೊರತು ಯಾವುದೇ ಚಳವಳಿ ಇಲ್ಲವೇ ವಿಚಾರ ವಿಮರ್ಶೆಯಲ್ಲ. 1947 ಕ್ಕಿಂತ ಮೊದಲಿನ ಗುಲಾಮ ದೇಶ, ಎರಡನೆಯ ಮಹಾಯುದ್ಧ 1947 ರ ಭೀಕರ ಪರಿಸ್ಥಿತಿ, ಹಿಂದುಸ್ತಾನ ಪಾಕಿಸ್ತಾನಗಳ ಭಾವಾತ್ಮಕ ಐಕ್ಯತೆ ಮತ್ತು ವಿಂಗಡಣೆ, ಸಾಹಿತ್ಯಿಕ ಪ್ರಗತಿಶೀಲತೆ, ಭಾರತ-ಪಾಕೀಸ್ತಾನಗಳ ಯುದ್ಧ ಇವೆಲ್ಲವುಗಳ ಭಾವನಾತ್ಮಕ ಪ್ರತಿಕ್ರಿಯೆ ದುಗ್ಗಲರ ಕಥೆಯಲ್ಲಿ ಸಿಗುತ್ತದೆ. ಅವರ ಕಥೆಗಳಲ್ಲಿ ಗಂಭೀರ ವಿಷಯಗಳ ಅಭಿವ್ಯಕ್ತಿ ಸುಗಮ ಸುಬೋಧ ರೀತಿಯಲ್ಲಿವೆ. ಸಮಗ್ರ ಜೀವನಕ್ಕೇ ನಿಷ್ಠಾವಂತನಾಗಿದ್ದ ಕಾರಣ ಅವರ ಕಥೆಗಳಲ್ಲಿ ಏಕಾಂಗಿತನ ಅಥವಾ ಅತಿರಂಜಿತ ಯೌನ (ಲೈಂಗಿಕ) ವೃತ್ತಿಗಳ ಯಾವ ಚಿಹ್ನೆಯೂ ಕಾಣಸಿಗುವದಿಲ್ಲ. ಅವರು ಮನೋವಿಶ್ಲೇಷಣ ಮತ್ತು ಮಾರ್ಕ್ಸವಾದ ಇವೆರಡೂ ಕಡೆಯಿಂದ

ಲಾಭಪಡೆದಿದ್ದಾರೆ. ಕೆಲವು ಸಲ ಅವರು ಸಾಮಾನ್ಯ ಆಚರಣಕ್ಕೆ ಹೊಂದಿಕೆ ಆಗಲಾರ ದಂಥ ಕೆಲವು ಮಾತುಗಳನ್ನು ಆಡಿಬಿಡುತ್ತಾರೆ. ಸಾಹಸ ಮತ್ತು ಸಂಯಮ ಇವೆರಡರ ಸುಂದರ ಸಮನ್ವಯವು ದುಗ್ಗಲರ ಕಥೆಗಳಲ್ಲಿ ಸಿಗುವದು. ಒಟ್ಟಾರೆ ದುಗ್ಗಲರ ಕಥೆಗಳಲ್ಲಿ ಇಂದಿನ ಪ್ರಪಂಚವನ್ನು ಕುರಿತು ಒಬ್ಬ ಸಂಪೂರ್ಣ ವ್ಯಕ್ತಿಯ ಪ್ರತಿಕ್ರಿಯೆ ಕಂಡುಬರುತ್ತದೆ.

1947 ರ ದೇಶ ವಿಭಜನೆಯು ಪಂಜಾಬೀ ಕಥೆಯ ಮೇಲೆ ವಿಶೇಷ ಪ್ರಭಾವ ವನ್ನು ಬೀರಿತು. ಈ ವಿಭಜನೆಯು ಪಂಜಾಬೀ ಹೃದಯವನ್ನು ಬಹಳ ಕೆಟ್ಟ ರೀತಿಯಲ್ಲಿ ಕದಡಿಬಿಟ್ಟಿತು. ಕೆಲವು ಕಥೆಗಾರರು (ಮುಸಾಫಿರ್, ದುಗ್ಗಲ್, ವಿರ್ಕ, ಸರನಾ, ಸತ್ಯಾರ್ಥಿ, ಭಕ್ಷಿ) ತಾವೇ ಪಶ್ಚಿಮ ಪಂಜಾಬಿನಿಂದ ಇಲ್ಲಿಗೆ ಬಂದಿದ್ದರು. ವ್ಯಕ್ತಿಗತ ರೂಪದಲ್ಲಿ ಕ್ಷತ-ವಿಕ್ಷತರಾಗಿದ್ದರೂ ಈ ಲೇಖಕರ ಕಥೆಗಳಲ್ಲಿ ಅದ್ಭುತ ಸಮತೋಲ ವಿದೆ. ಈ ಕಥೆಗಳಲ್ಲಿ ಐತಿಹಾಸಿಕ ಕಹಿ ಮಾಯವಾಗಿದೆ. ಈ ಕಥೆಗಳು ಒಂದು ಕ್ಷಣದ ಕಥೆಗಳು. ಆದರೆ ಇವುಗಳಲ್ಲಿಯೂ ಸಮಗ್ರ ಪಂಜಾಬಿನ ಚಾರಿತ್ರ ಸಮತೋಲ ರೂಪದಲ್ಲಿ ಪ್ರಸ್ತುತವಾಗಿದೆ. ಈ ಸಂಗ್ರಹದಲ್ಲಿಯ ನಾಲ್ಕು ಕಥೆಗಳು 'ಖಿನ', 'ಖಬ್ಬಲ', 'ಥವಿಯೊಂಕಾ ಮೌಸಮ' ಮತ್ತು 'ಮೋತೀ' ಇವುಗಳ ಸಂಬಂಧ ದೇಶದ ವಿಭಜನೆಯೊಂದಿಗೆ ಇದೆ. ಆದರೆ ಇವೆಲ್ಲ ಕಥೆಗಳು ಸಮಯ ಸ್ಥಾನ ಮತ್ತು ಘಟನೆಗಳ ಪೂರ್ವ ಗ್ರಹಿಕೆಗಳಿಂದ ಮುಕ್ತವಾಗಿವೆ. ಈ ಕಥೆಗಳಲ್ಲಿ ಕಹಿಯ ಲೇಪ ದಟ್ಟವಾಗಿಲ್ಲ. ಅಲ್ಲದೆ ಇವುಗಳಲ್ಲಿ ಇದ್ದ ಕಹಿಯೂ ತನ್ನ ಹತ್ತಿರದ ಅಂದಿನ ವರ್ತಮಾನ ಚರಿತ್ರೆಯನ್ನು ಕುರಿತದ್ದಾಗಿದೆ. ಈ ವಿಧ್ವಂಸದ ಎಲ್ಲ ಹೊಣೆಗಾರಿಕೆ ಯಾವುದೊಂದು ಪಕ್ಷದ ತಲೆಗೆ ಹೇರುವ ಪ್ರವೃತ್ತಿ ಈ ಕಥೆಗಳಲ್ಲಿ ಕಂಡುಬರುವದಿಲ್ಲ. ಇದುವೆ ಸ್ವಾಸ್ಥ್ಯಪೂರ್ಣ ಪಂಜಾಬಕ್ಕೆ ಪ್ರಮಾಣ. ಇದರ ಮೂಲಕವೇ ಪಂಜಾಬಿ ಕಥೆ ಪಂಜಾಬಕ್ಕೆ ಸಂಬಂಧಿಸಿದ್ದರೂ ಸಮಗ್ರ ಮಾನವತೆಯೊಂದಿಗೆ ಸಂಬಂಧ ಜೋಡಿಸು ತ್ತಿರುವದರ ಪ್ರತೀತಿ ನಮಗೆ ಬರುತ್ತದೆ.

ಹರಭಜನ್ ಸಿಂಗ್

# ವಿಷಯಸೂಚಿ

# ಇಸ್ಪೀಟಿನ ಚಟ

"ರಹೀಮ!"

ಸಬ್‌ಇನ್ಸ್‌ಪೆಕ್ಟರ್ ಶೇಖ ಅಬ್ದುಲ್ ಹಮೀದರು ಮನೆಯಲ್ಲಿ ಕಾಲಿಟ್ಟೊಡನೆ ಕೆಲಸದಾಳಿಗೆ ಕೂಗಿ ಹೇಳಿದರು—"ಬಶೀರನನ್ನು ನನ್ನ ಕೊಠಡಿಯಲ್ಲಿ ಸ್ವಲ್ಪ ಕಳುಹಿಸು." ಮತ್ತು ದಿಗ್ಗನೆ ತಮ್ಮ ಖಾಸಗಿ ಕೋಣೆಯೊಳಗೆ ಹೋಗಿ ಕೋಟು ಫೇಟಾ ಕಳಚಿ ಗೂಟಕ್ಕೆ ತೂಗುಹಾಕಿ, ಮೇಜಿನ ಇದುರಿಗೆ ಹೋಗಿ ಕುಳಿತರು. ಮೇಜಿನ ಮೇಲೆ ಹಲವಾರು ವಸ್ತುಗಳು ಹರಡಿ ಬಿದ್ದಿದ್ದವು. ಒಂದು ಮೂಲೆಯಲ್ಲಿ ದಪ್ಪನೆಯ, ತೆಳ್ಳಗಿನ ಕಾನೂನಿನ, ಕಾನೂನೇತರ ಪುಸ್ತಕಗಳೂ, ಕಾಗದ ಪತ್ರಗಳಿಂದ ತುಂಬಿದ ಫೈಲುಗಳೂ ಬಿದ್ದಿದ್ದವು. ನಡುಮಧ್ಯದಲ್ಲಿ ಶಾಯಿಕುಡಿಕೆ ಲೆಕ್ಕಣಿಕೆಗಳ ಸ್ಟ್ಯಾಂಡು ಮತ್ತು ಬಳಿಯಲ್ಲಿಯೇ ಆ ಹೊತ್ತಿನ ಟಪಾಲು ಬಿದ್ದಿತ್ತು. ಟಪಾಲಿನ ರಾಶಿಯಲ್ಲಿ ಐದಾರು ಲಕೋಟೆ, ಎರಡು ಮೂರು ಕಾರ್ಡು ಮತ್ತು ಒಂದೆರಡು ಪತ್ರಿಕೆಗಳೂ ಇದ್ದವು. ಅಲ್ಲಲ್ಲಿ ಪಿನ್‌ಕುಶನ್, ಒತ್ತುಕರಡೆ, ಪೇಪರವೇಟ, ಬ್ಯಾಗುಗಳ ಗೊಂಚಲು ಮತ್ತು ಇವೇ ತರಹದ ಸಣ್ಣ ಪುಟ್ಟ ವಸ್ತುಗಳು ಬಿದ್ದಿದ್ದವು.

ಶೇಖ್‌ಸಾಹೇಬರು ಕೂತ ಕೂಡಲೇ ದೂರ ದೃಷ್ಟಿಯ ಕನ್ನಡಕವನ್ನು ಇಳಿಸಿ ಮೇಜಿನ ಮೇಲೆ ಮುಂದಿನ ತಕ್ಕಮಟ್ಟಿಗೆ ತೆರವಿದ್ದ ಸ್ಥಳದಲ್ಲಿ ಇಟ್ಟು, ಓದಲು ನೆರವಾಗುವ ಕನ್ನಡಕವನ್ನು ಏರಿಸಿಕೊಂಡು ಟಪಾಲು ನೋಡಹತ್ತಿದರು.

ಅವರು ಇನ್ನೂ ಎರಡು ಲಕೋಟೆಗಳನ್ನು ಮಾತ್ರ ತೆರೆದಿದ್ದರು. ಅಷ್ಟರಲ್ಲಿ ಐದು ವರ್ಷದ ಹುಡುಗ ಒಳಗೆ ಬರುತ್ತಿದ್ದುದು ಕಂಡು ಬಂತು.

ಹುಡುಗ ನೋಡಲು ಒಳ್ಳೇ ಚತುರ—ಚೂಟಿಯಾಗಿದ್ದ. ಮೈಕಟ್ಟಿನಲ್ಲಿಯೂ ಸುಟಿಯಾಗಿದ್ದ. ಅಲ್ಲದೆ ತುಂಟನಾಗಿ ತೋರುತ್ತಿದ್ದ. ಆದರೂ ತಂದೆಯ ಕೋಣೆಗೆ ಪ್ರವೇಶಿಸಿದೊಡನೇ ಅವನ ಆ ಸ್ವಭಾವ ಒಮ್ಮೆಲೆ ಬದಲಾಯಿತು. ಅವನ ಚಂಚಲ ಸ್ಫೂರ್ತಿಯ ಕಣ್ಣುಗಳು ತಗ್ಗಿದವು. ಮೈಯಲ್ಲಿ ಉಸಿರಿನ ಜೋರೇ ಉಳಿದಿದ್ದಿಲ್ಲ.

"ಆ ಮುಂದಿನ ಕುರ್ಚಿಯ ಮೇಲೆ ಕೂತುಕೋ"—ಒಂದು ಉದ್ದ ಪತ್ರವನ್ನು ಓದುತ್ತ ಶೇಖಸಾಹೇಬರು ಅಪ್ಪಣೆ ಕೊಡಿಸಿದರು.

ಹುಡುಗ ಅಂಜುತ್ತ ಅಳುಕುತ್ತ ಮುಂದೆ ಕುಳಿತನು.

"ನನ್ನ ಕಡೆಗೆ ನೋಡು" ಪತ್ರದಿಂದ ಗಮನವೆತ್ತಿ ಶೇಖಸಾಹೇಬರು ಗರ್ಜಿಸಿದರು: "ಇಂದು ನೀನು ಇಸ್ಪೇಟು ಆಡುತ್ತಿದ್ದಿಯೆಂದು ಕೇಳಿದೆ, ನಿಜವೇ?"

"ಇಲ್ಲ ಅಬ್ಬಾಜೀ" ಹುಡುಗ ಹೆದರಿ ಹೆದರಿ ಅಂದನು.

ಶೇಖಸಾಹೇಬರು ತಮ್ಮ ವಾಡಿಕೆಯ ವಿರುದ್ಧವೇ ಅಂದರು, " ಹೆದರಬೇಡ, ನಿಜ ಸಂಗತಿ—ಇದ್ದ ಸಂಗತಿ ಹೇಳು, ನಾನು ಏನೂ ಅನ್ನುವದಿಲ್ಲ. ನಾನೇ ಪ್ರತ್ಯಕ್ಷ ನಿನ್ನನ್ನು ನೋಡಿದ್ದೆ. ಅಬ್ದುಲ್ಲಾನ ಮಗನೊಂದಿಗೆ ಅವರ ಅಂಗಳದಲ್ಲಿ ನೀನು ಇಸ್ಪೇಟು ಆಡುತ್ತಿದ್ದಿ. ಹೇಳು, ಆಡುತ್ತಿದ್ದಿಯೋ ಇಲ್ಲವೋ ?"

ಹುಡುಗ ಏನೂ ಹೇಳದೆ ತಲೆ ಅಲ್ಲಾಡಿಸಿ ಆಡಿದ್ದಿಲ್ಲವೆಂದು ಆಶ್ವಾಸನವಿತ್ತನು.

"ಶಾಭಾಸ್ !" ಶೇಖಸಾಹೇಬರು ಮೃದುವಾಗಿ ಮಾತಾಡಿದರು. "ನೀನು ಕೊನೆಗೂ ನಿಜಸಂಗತಿ ನಿಜವಾಗಿ ಹೇಳಿದಿ. ಅದಕ್ಕಾಗಿ ನನಗೆ ಬಹಳ ಖುಷಿ, ಬಶೀರ. ಇದ್ದ ಸಂಗತಿ ಏನೆಂದರೆ ನೀನು ಆಡುತ್ತಿದ್ದುದು ನಾನು ಪ್ರತ್ಯಕ್ಷ ನೋಡಿಯೇ ಇದ್ದಿಲ್ಲ. ಯಾರಿಂದಲೋ ಕೇಳಿದ್ದೆ. ಇದು ನಿನ್ನಿಂದ ನಿಜ ತಿಳಿಯಲು ಹೂಡಿದ ಒಂದು ಆಟ. ನಾವು ಅನೇಕ ಅಪರಾಧಿಗಳನ್ನು ಇದೇ ರೀತಿಯಾಗಿ ಬಾಯ್ಬಿಡಿಸುತ್ತೇವೆ. ಒಳ್ಳೇದು ಇಂದು ನಿನಗೆ ಕೆಲವು ಅಗತ್ಯದ ಮಾತುಗಳನ್ನು ನಾನು ಹೇಳಬೇಕಾಗಿದೆ. ಸ್ವಲ್ಪ ಲಕ್ಷ್ಯವಿಟ್ಟು ಕೇಳು !"

'ಲಕ್ಷ್ಯವಿಟ್ಟು ಕೇಳು' ಎಂದೊಡನೆ ಅವರು ಬಶೀರನತ್ತ ನೋಡಿದರು. ಆತ ತಂದೆಯ ಕನ್ನಡಕ ಎತ್ತಿಕೊಂಡು ಅದರ ಕಡ್ಡಿಗಳನ್ನು ಕೆಳಗೆ ಮಣಿಸ ಹತ್ತಿದ್ದನು.

ಅವನ ಕೈಯಿಂದ ಕನ್ನಡಕವನ್ನು ಸೆಳೆದುಕೊಂಡು ಜತೆಗಿದ್ದ ಫೈಲಿನೊಳಗಿಂದ ವಾರಂಟುಗಳನ್ನು ಮನಸ್ಸಿನೊಳಗೇ ಓದುತ್ತ ಶೇಖಸಾಹೇಬರು ಅಂದರು—

"ನಿನಗೆ ಗೊತ್ತಾಗಬೇಕು, ಈ ಅಪರಾಧವು ಬಹಳಷ್ಟು ಅಪರಾಧಗಳ ಉಗಮವಾಗಿದೆ. ಇದರ ಜೀವಂತ ಉದಾಹರಣೆ ಇದೇ—ಇಸ್ಪೇಟು ಆಡಿದ್ದನ್ನು ಬಚ್ಚಿಡಲಿಕ್ಕೆ ನೀನು ಸುಳ್ಳು ಆಡಬೇಕಾಗಿ ಬಂತು. ಅಂದರೆ ಒಂದರ ಬದಲು ನೀನು ಎರಡು ಅಪರಾಧಗಳನ್ನು ಮಾಡಿದಿ."

ವಾರಂಟ ಒಂದನ್ನು ತಿರುಗಿ ಫೈಲಿನೊಳಗೆ ಜೋಡಿಸಿಡುತ್ತ ಶೇಖಸಾಹೇಬರು ಮಗನ ಕಡೆಗೆ ನೋಡಿದರು. ಬಶೀರ ಪಿನ್‌ಕುಶನ್ನಿನಿಂದ ಪಿನ್ನುಗಳನ್ನು ಕಿತ್ತುಕೊಂಡು ಮೇಜಿನಮೇಲೆ ಹಾಸಿದ್ದ ಒಟ್ಟಿಗೆ ಚುಚ್ಚುತ್ತಿದ್ದ.

"ನನ್ನ ಮಾತಿನ ಕಡೆಗೆ ಲಕ್ಷ್ಯಕೊಡು", ಶೇಖಸಾಹೇಬರು ಅವನ ಕೈಯೊಳಗಿಂದ ಪಿನ್ನು ಕಸಿದುಕೊಂಡು ಒಂದು ಪತ್ರಿಕೆಯ ಪುಟ ತಿರುವಿ ಹಾಕುತ್ತ ಅಂದರು, "ಇಸ್ಪೇಟೂ ಒಂದು ಬಗೆಯ ಜೂಜಾಟವೇ—ಹೌದು, ಜೂಜೇ ಸರಿ. ಇದರಿಂದಲೇ ಬೆಳೆದು ಬೆಳೆದು ಮನುಷ್ಯನಿಗೆ ಜೂಜಾಟದ ಚಟ ಬಿದ್ದುಹೋಗುತ್ತದೆ, ಕೇಳಿದಿಯಾ ? ಮತ್ತು ಈ ಚಟ ಕೇವಲ ತನ್ನ ಮಟ್ಟಿಗೇ ಇರುವುದಿಲ್ಲ. ತಿರುಗಿ ಅದು ಒಬ್ಬನಿಂದ ಇನ್ನೊಬ್ಬನಿಗೆ, ಅವನಿಂದ ಮತ್ತೊಬ್ಬನಿಗೆ ತಾಗಿಯೇ ತಾಗುತ್ತದೆ.

ಶಾಯಿ ಕುಡುಕೆಯಿಂದ ಬೆರಳಿಗೆ ಮಸಿ ಹಚ್ಚಿಕೊಂಡು ಬಶೀರ ಒಂದು ಖಾಲಿ ಹಾಳೆಯ ಮೇಲೆ ಹದ್ದು-ಕುದುರೆಗಳನ್ನು ಬರೆಯಹತ್ತಿದ್ದನು.

"ಬಶೀರ!" ಮಗನ ಮುಂದಿನಿಂದ ದೌತಿಯನ್ನೆತ್ತಿ ಒಂದು ಬದಿಗೆ ಇಡುತ್ತ ಶೇಖಸಾಹೇಬರು ಅಂದರು, "ನನ್ನ ಮಾತು ಲಕ್ಷ್ಯಗೊಟ್ಟು ಕೇಳು!" ಅವರು ಇಷ್ಟೇ ಅಂದಿದ್ದರು, ಅಷ್ಟರಲ್ಲಿ ಟೆಲಿಫೋನ ಗಂಟೆ ಮೊಳಗಿತು. ಶೇಖಸಾಹೇಬರು ಎದ್ದು ನಿಂತು ರಿಸೀವರ್ ಎತ್ತಿಕೊಂಡರು. "ಹಲೋ! ಎಲ್ಲಿಂದ ಮಾತಾಡುತ್ತಿದ್ದೀರಿ?...ಬಾಬೂ ಪುರುಷೋತ್ತಮ ದಾಸ...ನಮಸ್ಕಾರ ಸ್ವಾಮಿ...ಹೇಳಿರಿ ಏನಪ್ಪಣೆ? ಲಾಟರಿಯ ತಿಕೀಟು?...ಈ ಹೊತ್ತು ಸಂಜೆಗೆ ನಾನು ತುಂಬಿ ಕಳಿಸುತ್ತೇನೆ...ಎಷ್ಟು ರೂಪಾಯಿ?...ಐದು ರೂಪಾಯಿ ತಿಕೀಟಿಗೆ...ಐವತ್ತು... ಬೇಷ್! ಆದರೆ ಈ ಹೊತ್ತಿನವರೆಗೆ ತಾವು ಒಂದಾದರೂ ಬಹುಮಾನ ಗಳಿಸಿದ್ದಿದೆಯೋ?...ಗೊತ್ತೇ ಆಗವೊಲ್ಲದು, ದೈವ ಎಂದು ಎಚ್ಚರವಾಗುತ್ತದೋ?... ನಮಸ್ಕಾರ!"

ರಿಸೀವರ ಕೆಳಗಿಟ್ಟು ತನ್ನ ಸ್ಥಳದಲ್ಲಿ ಕುಳಿತು ಅವರು ಅಂದರು, "ನೋಡು, ತುಂಟತನ ಮಾಡಬೇಡ, ಪೇಪರ ವೇಟ ನೆಲಕ್ಕೆ ಬಿದ್ದು ಡೂರಾದೀತು. ಅದನ್ನು ಅಲ್ಲಿ ಇಡು. ಲಕ್ಷ್ಯಕೊಟ್ಟು ನನ್ನ ಮಾತು ಕೇಳು."

"ಹಾಂ, ನಾನೇನು ಹೇಳುತ್ತಿದ್ದೆ?" ಇನ್ನೊಂದು ಫೈಲಿನ ಟೇಪು ಬಿಚ್ಚುತ್ತ ಶೇಖಸಾಹೇಬರು ಅಂದರು, "ಇಸ್ಪೀಟಿನ ಕೇಡಿನ ಬಗ್ಗೆ ಹೇಳುತ್ತಿದ್ದೆ. ಇಸ್ಪೀಟಿನಿಂದ ಜೂಜು, ಜೂಜಿನಿಂದ ಕಳ್ಳತನ, ಕಳ್ಳತನದ ನಂತರ—ಗೊತ್ತಿದೆಯೇನು ಯಾವ ಪರಿಣಾಮವೆಂಬುದು? ಬಶೀರನ ಕಡೆಗೆ ದಿಟ್ಟಿಸುತ್ತ ಅವರು ಅಂದರು, "ಜೈಲು, ಅರ್ಥಾತ್ ಕೈದಿಯ ಶಿಕ್ಷೆ!"

ಒಂದು ಫೈಲಿನೊಳಗಿಂದ ಹೊರಗೆ ಇಣಕಿದ ಹಳದಿ ಬಣ್ಣದ ಕಾಗದದಲ್ಲಿ ಬಶೀರ ಲೆಕ್ಕಣಿಕೆಯ ಮೊನೆಯಿಂದ ತೂತು ಮಾಡುತ್ತಿದ್ದನು.

"ಅಯೋಗ್ಯ, ಪೋಲಿ" ಶೇಖಸಾಹೇಬರು ಅವನ ಕೈಯಿಂದ ಆ ಲೆಕ್ಕಣಿಕೆಯನ್ನು ಸೆಳೆದುಕೊಳ್ಳುತ್ತ ಅಂದರು, "ಈ ಕೆಲಸಗಳನ್ನು ಬಿಡು. ನನ್ನ ಮಾತು ಕಿವಿಗೊಟ್ಟು ಕೇಳು. ಪ್ರತಿ ದಿವಸ ನಾವು ಎಷ್ಟು ಮಂದಿ ಕಳ್ಳರನ್ನು ಸೆರೆಹಿಡಿಯಬೇಕಾಗುವದೆಂದು ನಿನಗೆ ಗೊತ್ತೇ? ಮತ್ತು ಅವರೆಲ್ಲ ಇಸ್ಪೀಟು ಆಡಿ ಆಡಿಯೇ ಕಳವು ಮಾಡಲಿಕ್ಕೆ ಕಲಿತರು. ಅವರ ತಲೆಯಮೇಲೆ ಈ ಕಾನೂನಿನ ದೊಣ್ಣೆ ಇಲ್ಲದಿದ್ದರೆ ಯಾರಿಗೆ ಗೊತ್ತು ಅವರು ಯಾವ ಪ್ರಳಯ ಎಬ್ಬಿಸಿಬಿಡುತ್ತಿದ್ದರೋ!" ಶೇಖಸಾಹೇಬರು ಮೇಜಿನ ಒಂದು ಮೂಲೆಯಲ್ಲಿ ಬಿದ್ದಿದ್ದ ಭಾರತದ ಇತಿಹಾಸ ಪುಸ್ತಕದತ್ತ ಕೈ ಮಾಡಿದರು. ಆದರೆ ಬಶೀರನ ಲಕ್ಷ್ಯ ಬೇರೆಯೇ ಒಂದು ಪುಸ್ತಕದತ್ತ ಹರಿದಿತ್ತು. ಅದರ ಸಂಪುಟದ ಮೇಲಿನ ಅರಿವೆಯ ಪದರು ಕೊಂಚ ಕಿತ್ತು ಹೋಗಿತ್ತು. ಅದನ್ನು ಎಳೆದೆಳೆದು ಬಶೀರ ಆ ಪುಸ್ತಕದ ಅರೆವಾಸಿ ಹೊದಿಕೆ ಕಳಚಿ ಬತ್ತಲೆ ಮಾಡಿಬಿಟ್ಟಿದ್ದನು.

"ಮೂರ್ಖ, ಮುಟ್ಠಾಳ, ಕತ್ತೆ!" ಬಶೀರನ ಹತ್ತಿರದಿಂದ ಆ ಪುಸ್ತಕವನ್ನು ಎತ್ತಿ ದೂರವಿಡುತ್ತ ಶೇಖಸಾಹೇಬರು ಅಂದರು, "ನಿನಗಿಲ್ಲಿ ಕರೆದದ್ದು ಪುಸ್ತಕ ಸಂಪುಟಗಳ ಬೈಂಡು ಕೀಳಲಿಕ್ಕೋ? ನನ್ನ ಮಾತು ಸರಿಯಾಗಿ ಕೇಳು." ಮತ್ತೆ ಕೆಲವು ಆಜ್ಞಾಪತ್ರಗಳ (ಸಮನ್ಸ) ಮೇಲೆ ಸಹಿ ಗೀರಿ ಅವರು ತಿರುಗಿ ತನ್ನ ಮಾತಿನ ಸುರುಳಿ ಬಿಚ್ಚಿದರು. ಕಡಿದುಹೋದ ಎಳೆಯನ್ನು ಜೋಡಿಸಿಕೊಂಡರು. "ನಮಗೆ ಪೋಲೀಸ ಆಫೀಸರುಗಳಿಗೆ ಸರಕಾರ ಇಷ್ಟೆಲ್ಲ ಸಂಬಳ ಪೆನಶನ್ ಕೊಡುತ್ತದೆ—ಅದೇಕೆ? ಕೇವಲ ಇದಕ್ಕೇ.—ಈ ದೇಶದಿಂದ ಅಪರಾಧವೆಂಬುದನ್ನು ಪೂರ್ತಿ ನಾಶ ಮಾಡಲಿಕ್ಕೆ. ಆದರೆ ನಮ್ಮ ಮಕ್ಕಳೇ ಇಸ್ಪೀಟು ಮತ್ತು ಜೂಜು ಆಡಲು ಪ್ರಾರಂಭಿಸಿದರೆ ಆಗ ಲೋಕವೇನು ಅಂದೀತು? ಮತ್ತು ನಾವು ಉಂಡ ಉಪ್ಪಿನ ಋಣ ಹೇಗೆ ತೀರಿ..."

ಮಾತು ಮಧ್ಯಕ್ಕೇ ಇತ್ತು. ಅಷ್ಟರಲ್ಲಿ ಹಿಂದುಗಡೆಯ ಬಾಗಿಲು ತೆರೆದು ಶೇಖಸಾಹೇಬರ ಒಬ್ಬ ಉದ್ದ ಎತ್ತರದ ಜವಾನ ಒಳಗೆ ಬಂದ. ಅವನೊಬ್ಬ ಸಿಪಾಯಿ. ಶೇಖಸಾಹೇಬರು ಇದೇ ರೀತಿ ಇಬ್ಬರು ಮೂವರು ಪೋಲೀಸ ಪೇದೆಗಳನ್ನು ಮನೆಯಲ್ಲಿ ಇಟ್ಟುಕೊಳ್ಳುವದು ವಾಡಿಕೆ. ಅವರಲ್ಲಿ ಒಬ್ಬ ದನಗಳಿಗೆ ಮೇವು ಕೊಡಲಿಕ್ಕೆ, ಎಮ್ಮೆಯ ಹಾಲು ಹಿಂಡಲಿಕ್ಕೆ ಇದ್ದನು. ಇನ್ನೊಬ್ಬನು ಅಡಿಗೆಯ ಕೆಲಸಕ್ಕೆ ನೆರವಾಗಲು ಹಾಗೂ ಇದೀಗ ಮನೆಯೊಳಗಿನಿಂದ ಕೋಣೆಯೊಳಗೆ ಬಂದವನು ಸಾಹೇಬರ 'ಕುಳ'ಗಳಿಂದ ರಕಮು ವಸೂಲಿ ಮಾಡಲಿಕ್ಕೆ ಇದ್ದನು. ಆತ ತಲೆಬಾಗಿ ಸಲಾಂ ಮಾಡಿ ಅಂದನು, "ರಾಯರೇ, ಅವರು ಬಂದು ಕೂತಿದ್ದಾರೆ."

"ಯಾರು?"

"ಅವರೇ ಆ ಬುದ್ಧೀ, ಬದಮಾಶನ ಆಸಾಮಿ. ದಸರೆಯ ಜಾತ್ರೆಯಲ್ಲಿ ಜೂಜಿನ ಅಡ್ಡೆ ಇಡಲಿಕ್ಕೆ ಅರ್ಜಿ ಮಾಡಿದವರು."

"ನೀನೇ ಸ್ವತಃ ಅವರೊಂದಿಗೆ ಮಾತಾಡಬಹುದಿತ್ತು."

"ನಾನು ಅವರಿಗೆ ಹೇಳಿಯೇ ಬಿಟ್ಟಿದ್ದೆ—ಸಾಹೇಬರು ಎರಡೂವರೆ ಸಾವಿರಕ್ಕೂ ಕಡಿಮೆಗೆ ಕಬೂಲ ಆಗಲಾರರೆಂದು. ಆದರೆ...."

"ಹಾಗಾದರೆ ಅವರೇನು ಅನ್ನುತ್ತಾರೆ?"

"ಅವರೆನ್ನುತ್ತಾರೆ, ನಾವೇ ಒಮ್ಮೆ ಶೇಖಸಾಹೇಬರ ಪಾದಮುಟ್ಟಿ ನೋಡುತ್ತೇವೆ. ಆದ್ದರಿಂದ ತಮಗೆ ತೊಂದರೆ ಇಲ್ಲದಿದ್ದರೆ ಒಂದೆರಡು ಮಿನೀಟುಗಳಿಗಾಗಿ ಒಮ್ಮೆ ಬಂದುಬಿಡಿ. ಆ ಜನ ಬಹಳ ಹೊತ್ತಿನಿಂದ ಕಾದು ಕೂತಿದ್ದಾರೆ."

"ಅಚ್ಛಾ ನಡೆ," ಎಂದು ಶೇಖಸಾಹೇಬರು ಏಳುತ್ತಾ ಬಶೀರನ ಕಡೆಗೆ ನೋಡಿದರು. ಅವನು ಕೂತಲ್ಲಿಯೇ ತೂಕಡಿಸುತ್ತಿದ್ದ. ಶೇಖಸಾಹೇಬರು ಅವನನ್ನು ಕೂಡಲೇ ಗದರಿಸಿ ಎಬ್ಬಿಸದಿದ್ದರೆ ಅವನ ತಲೆ ಮೇಜಿಗೆ ಜಪ್ಪುತ್ತಿತ್ತು."

"ನಡೆ ಹೋಗು, ಹೋಗಿ ವಿಶ್ರಮಿಸಿಕೋ." ಶೇಖಸಾಹೇಬರು ಕೋಟು, ಫೇಟಾ ಸರಿಪಡಿಸಿಕೊಳ್ಳುತ್ತ ಅಂದರು, "ಉಳಿದ ಉಪದೇಶ ನಿನಗೆ ಸಂಜೆ ಕೊಡುವೆ. ಇನ್ನು ಎಂದೆಂದಿಗೂ ಇಸ್ಪೀಟು ಆಡಬೇಡ."

ಶೇಖಸಾಹೇಬರು ಹೊರಗೆ ಹೊರಟುಹೋದರು. ಹುಡುಗ ಎದ್ದುನಿಂತು ಒಂದೆರಡು ಸಲ ಮೈ ಮುರಿದುಕೊಂಡ. ದೊಡ್ಡ ಆಕಳಿಕೆ ತೆಗೆದ, ಕಣ್ಣುಜ್ಜಿಕೊಂಡ ಮತ್ತು ಜಿಗಿಯುತ್ತ ಹಾರುತ್ತ ಹೊರಹೊರಟನು.

# ಮೈನಾ ಅತ್ತಿಗೆ

ನಗರದ ಕೇರಿಯ ಇದುರಿಗೆ ಎರಡು ಮನೆಗಳ ನಡುವೆ ಹೆಚ್ಚೆಂದರೆ ಮೂರು-ಮೂರುವರೆ ಮಾರಿನ ಅಂತರವಿರಬಹುದು. ಕೆಳಗಿನ ಅಂತಸ್ತಿನ ಎರಡು ಕಿಟಕಿಗಳು ಒಂದಕ್ಕೊಂದು ಇದಿರಾಗಿ ತೆರೆದಿರುತ್ತಿದ್ದವು. ಒಂದು ಕಿಟಕಿಯೊಳಗಿಂದ ಇದಿರಿನ ಗೋಡೆಯ ಮೇಲೆ ತೂಗುವ ದೊಡ್ಡ ಕನ್ನಡಿಯು ಕಂಡುಬರುತ್ತಿತ್ತು. ಆ ಕೋಣೆಯಲ್ಲಿ ಇತರ ವಸ್ತುಗಳೂ ಬಹಳ ಕಡಿಮೆ ಇದ್ದವು. ಒಂದು ಮಂಚ ಒಂದು ಕಾಲ್ಮಣೆ (ಪೀಠ), ಒಂದು ಶೆಲ್ಫಿನಲ್ಲಿ ಮೂರು-ನಾಲ್ಕು ಪುಸ್ತಕಗಳು, ಹಣಿಗೆ ಎಣ್ಣೆ ಮತ್ತು ಗೋಡೆಯ ಮೇಲೆ ಒಂದೆರಡು ಫೋಟೋ, ಬುಟ್ಟಿಯಲ್ಲಿ ನಾಲ್ಕೈದು ಬಟ್ಟೆಗಳು.

ಒಂದು ಸಣ್ಣ ಕೋಣೆ. ಅದರಲ್ಲಿ ಒಬ್ಬ ಹೆಂಗಸಿನ ಹೊರತು ಬೇರೆ ಯಾವ ಮೋರೆಯೂ ಕಂಡುಬಂದದ್ದೇ ಕಡಿಮೆ. ಅವಳು ಒಮ್ಮೊಮ್ಮೆ ಕಸೂತಿ ತೆಗೆಯುತ್ತಿದ್ದಳು, ಒಮ್ಮೊಮ್ಮೆ ಪುಸ್ತಕ ಓದುತ್ತಿದ್ದಳು. ಒಮ್ಮೊಮ್ಮೆ ತಲೆತಗ್ಗಿಸಿ ಕೂತಿರುತ್ತಿದ್ದಳು. ಮತ್ತು ಒಮ್ಮೊಮ್ಮೆ ಕನ್ನಡಿಯ ಮುಂದೆ ನಿಂತು ಬಹಳ ಹೊತ್ತಿನವರೆಗೆ ತಲೆ ಬಾಚಿಕೊಳ್ಳುತ್ತಿದ್ದಳು. ಅವಳು ದಿನದಲ್ಲಿ ಹಲವುಸಲ ತಲೆ ಬಾಚಿಕೊಳ್ಳುತ್ತಿದ್ದಳು. ಅವಳಿಗೆ ಬಾಚಣಿಕೆಯದೇ ಹುಚ್ಚು ಹಿಡಿದಿದೆಯೆಂದು ಮನೆಯವರ ಮನವರಿಕೆ ಆಗಿತ್ತು.

ಅವಳ ಕೂದಲು ತುಂಬ ಉದ್ದವಾಗಿದ್ದವು. ಅವಳು ಹಿಂದಕ್ಕೆ ಹೊರಳಿ ತನ್ನ ಕೂದಲ ಉದ್ದವನ್ನು ನೋಡುವಾಗ ಅವು ಹಿಮ್ಮಡಿಯನ್ನು ಮುಟ್ಟುವದು ಕಾಣುತ್ತಿತ್ತು ಮತ್ತು ಎಲ್ಲಾದರೂ ಹೊಳಪು ಕಂಡರೆ ಅದೂ ಅವಳಿಗೆ ಗೊತ್ತಾಗುತ್ತಿತ್ತು. ಅವಳಿಗೆ ತನ್ನ ಕೂದಲಿನ ಬಗೆಗೆ ಭಾರಿ ಬಿಂಕವಿತ್ತು ಎಂಬುದರ ಬಗ್ಗೆ ಸಂದೇಹವೇ ಇದ್ದಿಲ್ಲ. ಅವಳು ಸುಂದರಿಯೂ, ಎತ್ತರವಾಗಿಯೂ ಇದ್ದ ತರುಣಿಯಾಗಿದ್ದಳು. ಇದಿರಿನ ಕಿಟಕಿಯೊಳಗಿಂದ ಅವಳ ಕಣ್ಣಿನ ಬಣ್ಣ ಕಂಡು ಬರುತ್ತಿದ್ದಿಲ್ಲ. ಆದರೆ ಅವಳ ಚರ್ಯೆ ತುಂಬ ಮಧುರವಾಗಿತ್ತು, ಮತ್ತು ಖಿನ್ನತೆಯಿಂದ ತುಂಬಿತ್ತು.

ಅವಳು ಅದೆಷ್ಟೋ ಹೊತ್ತು ಕಿಟಕಿಯ ಚೌಕಟ್ಟಿನಲ್ಲಿ ಕಣ್ಣೀರು ಹರಿಸುತ್ತ ಕೂತಿರುತ್ತಿದ್ದಳು. ಆದರೆ ಎಂದೂ ಅವಳು ಕಿಟಕಿಯಿಂದ ತಲೆ ಹೊರಗೆ ಹಾಕಿ ಯಾವದೇ ನಿಟ್ಟಿನಲ್ಲಿ ನೋಡುತ್ತಿದ್ದಿಲ್ಲ. ಆದರೆ ಕೇರಿಯ ಹೆಂಗಸರಿಗೆ ಅವಳು ಅಲ್ಲಿ ಕೂತಿರುವದರ ಅರಿವಿರುತ್ತಿತ್ತು. ಆ ಮಾರ್ಗದಲ್ಲಿ ಅವರಾರಾದರೂ ಹಾಯ್ದು ಹೋದರೆ ಅವಳನ್ನು ಕೂಗಿ ಕರೆದು ಮಾತನಾಡಿಸುತ್ತಿದ್ದರು.

ಅವಳು ಬಹಳ ಸವಿಯಾದ ಶಬ್ದಗಳಲ್ಲಿ ತುಸು ಬಾಗಿ ಉತ್ತರ ಕೊಡುತ್ತಿದ್ದಳು.

ಅವಳು ಕೋಣೆಯಲ್ಲಿ ಇಲ್ಲದಿದ್ದಾಗ ಕಿಟಕಿಯು ಮುಚ್ಚಿರುತ್ತಿತ್ತು. ಆದರೆ ಚಳಿಗಾಲದಲ್ಲಿ ಮೂರನೆಯ ಪ್ರಹರಕ್ಕೆ, ಬೇಸಿಗೆಯಲ್ಲಿ ಸುಮಾರು ಹನ್ನೆರಡು ಘಂಟೆಗೆ ಅವಳ ಕೋಣೆಯ ಕಿಟಕಿಯು ಅಗತ್ಯ ತೆರೆದಿರುತ್ತಿತ್ತು. ಮತ್ತು ಕಿಟಕಿಯ ಇದುರಿಗೆ ಬೆನ್ನು ಹಿಂದೆಮಾಡಿ ಅವಳು ಕೂತಿರುತ್ತಿದ್ದಳು; ಮತ್ತು ಒಮ್ಮೊಮ್ಮೆ ಕೇರಿಯಲ್ಲಿ ಇಣಕಿ ನೋಡುತ್ತಿದ್ದಳು.

ಒಬ್ಬ ಹುಡುಗ ನೋಡಲು ಚಿಕ್ಕ ಬಾಲಕನಂತೆ ಕಾಣುವವನು, ಪಾಟಿ ಪುಸ್ತಕಗಳ ಚೀಲ ಹಿಡಿದುಕೊಂಡು ಕೇರಿಯ ಮುರುವಿನಿಂದ ಬರುತ್ತಿರುವದು ಕಂಡು ಬರುತ್ತಿತ್ತು. ಆಗ ಅವಳು ಕೆಲಸ ಬಿಟ್ಟು ಕಿಟಕಿಯ ಸರಳುಗಳ ಸಂದಿನೊಳಗಿಂದ ಅವನ ಕಡೆಗೆ ನಿಟ್ಟಿಸುತ್ತ ಇರುತ್ತಿದ್ದಳು. ಆ ಹುಡುಗನೂ ಒಮ್ಮೊಮ್ಮೆ ಮೇಲೆ ನೋಡುತ್ತಿದ್ದ ಮತ್ತು ತನ್ನ ಮನೆ ಸೇರುತ್ತಿದ್ದ. ಹುಡುಗ ಪಾವಟಿಗೆಗಳನ್ನು ಏರುವ ಖಟ-ಖಟ ಸಪ್ಪಳ ಆ ಹೆಂಗಸಿನ ಕಿವಿಗೆ ಕೇಳಿಸುತ್ತಿತ್ತು. ಅವಳು ಎಂದೂ ಆ ಹುಡುಗನ ಮನೆಗೆ ಹೋಗಿದ್ದಿಲ್ಲ. ಆದರೆ ಅವಳಿಗೆ ಆ ಹುಡುಗನ ಮನೆಯ ಪಾವಟಿಗೆಗಳ ಲೆಕ್ಕ ನೆನಪಿತ್ತು. ಒಂದೊಂದು ಪಾವಟಿಗೆಯ ಮೇಲೆ ಬೀಳುವ ಹೆಜ್ಜೆಯ ಸಪ್ಪಳ ಕೇಳಿ ಅವಳು ಹಲವು ಸಲ ತನ್ನ ಎದೆಯನ್ನು ಬಿಗಿದೊತ್ತಿ ಹಿಡಿದಿದ್ದಳು.

ಎರಡನೆಯ ಮನೆಯಲ್ಲಿ ಒಂದು ಬಾಗಿಲು ತೆರೆಯುತ್ತಿತ್ತು. ಆಗ ಅವಳಿಗೆ ನೋಡದೆಯೂ ಗೊತ್ತು, ಇದುರಿನ ಕೋಣೆಯಲ್ಲಿ ಯಾರೋ ಬಂದಿದ್ದಾರೆಂದು.

ಪಾಟಿ-ಚೀಲ ಒಂದು ಬದಿಗೆ ಇಟ್ಟು ಆ ಹುಡುಗ ಸ್ವಲ್ಪ ಹೊತ್ತು ತನ್ನ ಕಿಟಕಿಯನ್ನು ತೆರೆದು ಇದುರಿನ ಕಿಟಕಿಯ ಕಡೆಗೆ ನೋಡುತ್ತಿದ್ದ. ಹೆಂಗಸು ಅತ್ತ ನೋಡುತ್ತಿದ್ದಿಲ್ಲ. ಆದರೆ ಅವಳಿಗೆ ಗೊತ್ತಾಗುತ್ತಿತ್ತು. ಆ ಕಣ್ಣುಗಳು ತನ್ನ ಕಡೆಗೆ ನೆಟ್ಟಿರುವವೆಂದು. ಅವನ ಹಾದಿ ಅವಳು ದಿನ ನಿತ್ಯ ನೋಡುತ್ತಿದ್ದಳು. ಮತ್ತು ಯಾವದೇ ದಿನ ಶಾಲೆಯಿಂದ ಬರಲು ಅವನಿಗೆ ತಡವಾದರೆ ಅವಳು ಬರಹೋಗುವ ಹುಡುಗರಿಗೆ ಕೇಳಲು ಬಯಸುತ್ತಿದ್ದಳು,—"ಕಾಕಾ ಯಾಕೆ ಬರಲಿಲ್ಲ?" ಆದರೆ ಅವಳು ಎಂದೂ ಹಾಗೆ ಚೌಕಶಿ ಮಾಡಿದ್ದಿಲ್ಲ.

ಕಾಕಾ ಕೋಣೆಯ ಬಾಗಿಲು ಮುಚ್ಚಿಕೊಂಡು ಮೇಲೆ ಉಪ್ಪರಿಗೆಗೆ ಹೋಗಿ ಬಿಡುತ್ತಿದ್ದ.

ಹೀಗೆಯೇ ಬಹಳ ಕಾಲ ಕಳೆಯಿತು. ಕಾಕಾನಿಗೆ ಈಗ ಹದಿಮೂರನೇ ವರ್ಷ ನಡೆಯುತ್ತಿತ್ತು. ಇದುರಿನ ಕಿಟಕಿಯೊಳಗಿನಿಂದ ಅವನಿಗೆ ಈಗ ತನ್ನ ಸ್ವಾರಸ್ಯದಲ್ಲಿ ಹೆಚ್ಚಿನ ಸ್ವಾದ ಅನಿಸಹತ್ತಿತ್ತು. ಒಂದು ದಿನ ಅವನು ತನ್ನ ತಾಯಿಗೆ ಕೇಳಿದನು.

"ನಮ್ಮ ಮನೆಗೆ ಎಲ್ಲರೂ ಬರುತ್ತಾರೆ, ಆದರೆ ಇದುರಿನ ಮನೆಯಿಂದ ಯಾರೂ ಯಾಕೆ ಬರುವದಿಲ್ಲ?"

"ಕಾಕಾ, ನಮ್ಮ ಕೇರಿಯಲ್ಲಿ ಅದೊಂದೇ ಜೈನರ ಮನೆ. ಅವರು ಮಾಂಸವನ್ನು ಬಹಳ ನಿಷೇಧ ಮಾಡುತ್ತಾರೆ, ಆದ್ದರಿಂದ ಸಿಖ್ಖರೊಂದಿಗೆ ಈ ಮಂದಿ ಸೇರುವುದು ಕಡಿಮೆ."

"ಆದರೆ ಅಮ್ಮಾ, ನಾವೇನು ಮಾಂಸ ತಿನ್ನುವುದಿಲ್ಲ."

"ಅವರು ಭಾವಿಸುತ್ತಾರೆ—ಸಿಖ್ಖರೆಲ್ಲ ಮಾಂಸ ತಿನ್ನುತ್ತಾರೆಂದು !"

"ಹಾಗಾದರೆ ಆ ಮಂದಿ ಮನೆಯಿಂದ ಹೊರಗೆ ಬರೋದೇ ಇಲ್ಲವೇ ?"

"ಹೊರಡುತ್ತಾರೆ. ಆದರೆ ಇದು ದುಃಖದ ಮನೆ, ನಾನು ಈ ಮನೆಯನ್ನು ಹಾಳುಮಾಡಿದೆ. ಒಬ್ಬನೇ ಮಗ ಉಳಿದಿದ್ದ. ಅವನ ಮದುವೆ ಮಾಡಿದರು. ಎರಡು ವರ್ಷಗಳಲ್ಲಿ ಅವನೂ ತೀರಿಹೋದ. ಅವನು ಸತ್ತಮೇಲೆ ಒಂದು ಗಂಡುಮಗು ಹುಟ್ಟಿತು. ಅದೂ ಒಂದು ವರ್ಷದತನಕ ಬದುಕಿ ಉಳಿಯಲಿಲ್ಲ. ಈಗ ಮೂವರು ವಿಧವೆಯರು ಅಳಲಿಕ್ಕೆ ಗೋಳಿಡಲಿಕ್ಕೆ ಬದುಕಿ ಉಳಿದಿದ್ದಾರೆ."

"ಗಂಡುಮಗು ಯಾರದಿತ್ತು ?"

"ಮೈನಾಳದು—ಬಹಳಸಾರೆ ನೀನು ಕಿಟಕಿಯಲ್ಲಿ ಕೂತದ್ದು ನೋಡುತ್ತೀಯಲ್ಲ, ಅವಳದೇ."

"ಅಮ್ಮಾ, ಅವಳು ಹಾಗೆ ಪ್ರತಿಸಲ ಕಿಟಕಿಯಲ್ಲಿ ಯಾಕೆ ಕೂತಿರುತ್ತಾಳೆ ?"

"ಆ ಮಂದಿ ಪ್ರಾಯದ ವಿಧವೆ ಸೊಸೆಯಂದಿರನ್ನು ಭಾರೀ ಕಾವಲಲ್ಲಿ ಇಡುತ್ತಾರೆ—ಮತ್ತು ಮನೆಯಲ್ಲಿ ಹೆಚ್ಚು ಕೆಲಸವೂ ಇಲ್ಲ."

"ಕಾವಲು ಯಾತಕ್ಕೆ ?"

"ಬರಿದೆ ಸುಮ್ಮನೆ, ಮನೆಯ ಸುದ್ದಿ ಏನಾದರೂ ಹೊರಗೆ ಯಾರೊಂದಿಗಾದರೂ ಹೇಳಿಬಿಡಬಹುದು!—ಅವಳಿಗೆ ಸುಖವೆಂಬುದೇ ಇಲ್ಲ ನೋಡು."

"ಅಮ್ಮಾ, . . . ನಮ್ಮಲ್ಲಿ ಎಷ್ಟೆಲ್ಲ ಹೆಂಗಸರಿದ್ದಾರೆ. . . . ನೀನು ಹೇಳುತ್ತೀ. . . . ಇವಳಿಗೆ ಚಿಕ್ಕಮ್ಮನೆಂದು ಕರೆ, ಇವಳಿಗೆ ಅಬಚಿ ಎನ್ನು, ಇವಳಿಗೆ ಅಕ್ಕ ಅನ್ನು. . . . ಇನ್ನು ಇವಳು ನನಗೆ ಭೆಟ್ಟಿಯಾದರೆ ಇವಳಿಗೆ ಏನೆಂದು ಕರೆಯಲಿ ?"

"ಯಾರಿಗೆ ?. . .ಮೈನಾಳಿಗೋ ?"

"ಹೌದಮ್ಮಾ. . . ಕಿಟಕಿಯಲ್ಲಿ ಕುಳಿತಿರುತ್ತಾಳಲ್ಲ, ಅವಳಿಗೆ. . ."

"ಅವಳು ನಿನಗೆ ಅತ್ತಿಗೆ. ಇವಳ ಯಜಮಾನ ಈ ಕೇರಿಯ ಸಂಬಂಧದಲ್ಲಿ ನಿನಗೆ ಅಣ್ಣನಂತಿದ್ದ. ಭಾರೀ ಒಳ್ಳೇ ಹುಡುಗನಾಗಿದ್ದ."

"ಈ ಮೈನಾ ಎಂಥ ರೂಪದ ಹೆಸರು ?"

"ನಿನಗೆ ಸೇರಲಿಲ್ಲವೇ ?"

"ಇಲ್ಲ ತುಂಬ ಸೇರುತ್ತದೆ, ಆದರೆ ಈ ಮೊದಲು ಇಂಥ ಹೆಸರು ನಾನು ಕೇಳಿದ್ದಿಲ್ಲ.

ಮೈನಾ ಅದೇ ಅಲ್ಲವೇ—ನಮ್ಮ ಮಾಮಾನ ಮನೆಯಲ್ಲಿ ಪಂಜರದಲ್ಲಿ ಕೂತು ತುಂಬ ಮುದ್ದುಮುದ್ದಾಗಿ ಮಾತಾಡುತ್ತದೆ? ಗಿಳಿ ಅಷ್ಟು ಚೆನ್ನಾಗಿರೋದಿಲ್ಲ."

"ಹೂಂ, ಅದೇ."

"ಅಮ್ಮಾ, ನನಗೊಂದು ಮೈನಾ ಕೊಡಿಸುತ್ತೀಯಾ?"

"ಕಾಕಾ, ನೀನು ಮಾಮಾನಿಗೇ ಹೇಳು."

ಕೆಲವು ದಿನಗಳ ಮೇಲೆ ಕಾಕಾ ಕೂಡ್ರುವ ಕೋಣೆಯಲ್ಲಿ ಒಂದು ಪಂಜರ ತೂಗುತ್ತಿತ್ತು. ಅವನು ಮಾಳಿಗೆ ಏರಿ ಹೋಗುವಾಗ ಆ ಪಂಜರವನ್ನು ಸಂಗಡ ಒಯ್ಯುತ್ತಿದ್ದನು.

ಕಾಕಾ ತನ್ನ ಮೈನಾಳಿಗೆ ಕಲಿಸಿದ, "ಅತ್ತಿಗೆ ಮೈನಾ ಕಿಟಕಿಯಲ್ಲಿ ಕೂತಿದ್ದಾಳೆ." ಕಿಟಕಿಯಲ್ಲಿ ಕೂಡ್ರುವ ಮೈನಾ ಕಾಕಾನೊಂದಿಗೆ ಇನ್ನೂ ಮಾತಾಡಿದ್ದಿಲ್ಲ. ಆದರೆ ಅವಳಿಗೆ "ಅತ್ತಿಗೆ ಮೈನಾ ಕಿಟಕಿಯಲ್ಲಿ ಕೂತಿದ್ದಾಳೆ." ಎನ್ನುವ ಈ ಮೈನಾಳ ಮಾತು ಬಹಳ ಸೊಗಸಾಗಿ ಕೇಳುತ್ತಿದ್ದವು.

ಚಳಿಯ ದಿನಗಳಲ್ಲಿ ಮೈನಾ ತನ್ನ ಕೋಣೆಯಲ್ಲಿಯೇ ಮಲಗುತ್ತಿದ್ದಳು. ಪರೀಕ್ಷೆ ಸಮೀಪಿಸಿದ ಕಾರಣ ಕಾಕಾನೂ ಕೆಲವು ದಿನಗಳಿಂದ ತನ್ನ ಕೋಣೆಯಲ್ಲಿಯೇ ಮಲಗುತ್ತಿದ್ದ. ಅತ್ತಿಗೆ ಮೈನಾಳು ಮಲಗಿದ್ದಾಗ ಹಲವು ಸಲ ಕಾಕಾನ ಉಸಿರಿನ ಸದ್ದು ಕೇಳಿಬರುತ್ತಿತ್ತು. ಅವಳು ಮಂಚದಿಂದ ಎದ್ದು ಬಹಳ ಹೊತ್ತಿನವರೆಗೆ ಆ ಸದ್ದನ್ನು ಕೇಳುತ್ತ ಇರುತ್ತಿದ್ದಳು.

ಅವಳ ಪ್ರಾಯ ಈಗ ಇಪ್ಪತ್ತೈದು ವರ್ಷ ತುಂಬುತ್ತಿತ್ತು. ಕಾಕಾನಿಗೆ ಇನ್ನೂ ಹದಿಮೂರು ತುಂಬಿದಿಲ್ಲ. ಅವಳು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತಿದ್ದಳು. "ಹಾ! ನನಗೆ ಎಂದಾದರೂ ಈ ಹುಡುಗನೊಡನೆ ಆಡಲು ಸ್ವಾತಂತ್ರ್ಯವಿದ್ದರೆ! ಇವನು ಶಾಲೆಯಿಂದ ಮನೆಗೆ ಮರಳುವಾಗ, ಕಿಟಕಿಯಿಂದ ತಲೆ ಹೊರಗೆ ಹಾಕಿ ಅವನನ್ನು ನೋಡುವಂತೆ ಆದರೆ, ಅವನೊಡನೆ ಮಾತಾಡುವಂತೆ ಆದರೆ, ಅವನು ಕಾಯಿಲೆ ಬಿದ್ದಾಗ ಅವನ ಮನೆಗೆ ಹೋಗಿ ಅವನ ಮಂಚದ ಮೇಲೆ ಕೂಡ್ರುವಂತೆ ಆದರೆ . . . ಜ್ವರ ಬಂದಾಗ ಯಾವ ಕೇಡಿನ ಭಯವೂ ಇಲ್ಲವಷ್ಟೆ?"

ಮತ್ತೆ ಅವಳು ತಾನೇ ಅಂದುಕೊಳ್ಳುವಳು. "ನನಗೆ ಯಾರು ಸ್ವಾತಂತ್ರ್ಯ ಕೊಡುವರು? ನಾನಂತೂ ಇದೇ ಕೋಣೆಯಲ್ಲಿ ಒದುಕುತ್ತ ಮುದುಕಿ ಆಗುವೆ. ನನ್ನ ಕೂದಲು ನಮ್ಮ ಅತ್ತೆಯ ಕೂದಲಿನಂತೆ ನರೆ-ನರೆ ಆಗಿಬಿಡುವವು. ಕಾಕಾನ ಮದುವೆ ಆಗುವುದು. ಈ ಕಿಟಕಿ ಮತ್ತೆ ಹೀಗೆ ತೆರೆದಿರಲಿಕ್ಕಿಲ್ಲ. ಮತ್ತೆ ನಾನು ಯಾವ ನಿರೀಕ್ಷೆಯಲ್ಲಿ ಈ ಕತ್ತಲೆಯ ಬದುಕಿನ ದೀರ್ಘಹಗಲು ದೀರ್ಘರಾತ್ರಿ ಕಳೆಯ ಬಲ್ಲೆ?"

ಈ ರೀತಿ ಚಿಂತಿಸುತ್ತಲೇ ಅವಳ ದಿನ ಮುಳುಗುತ್ತಿತ್ತು. ಅವಳು ಹಾಸಿಗೆಯಿಂದೆದ್ದು ಕಿಟಕಿಯ ಬಳಿಗೆ ಹೋದಳು. ಬೆಳದಿಂಗಳ ರಾತ್ರೆ ಆಗಿತ್ತು. ತೆರೆದ ಕಿಟಕಿ

ಯಲ್ಲಿ ಅಲ್ಪ ಸ್ವಲ್ಪ ಬೆಳದಿಂಗಳು ಕಾಕಾನ ಮೋರೆಯ ಮೇಲೆ ಬೀಳುತ್ತಿತ್ತು. ಕಾಕಾ ಆಳವಾದ ನಿದ್ದೆಯಲ್ಲಿದ್ದ. ಅವನು ಉದ್ದುದ್ದ ಶ್ವಾಸ ತೆಗೆಯುತ್ತಿದ್ದ. ಮೈನಾಳ ಮನಸ್ಸಿನಲ್ಲಿ ಒಂದು ಉಮ್ಮಳವೆದ್ದಿತು. ಅವಳಿಗೆ ಅನಿಸಿತು, ಎರಡೂ ಮನೆಗಳ ನಡುವಿನ ಅಂತರ ತೀರ ಕಡಿಮೆ ಇದೆ. ಎರಡೂ ಕಿಟಕಿಗಳ ನಡುವೆ ಮಂಚವನ್ನೇ ಹಾಕಿ ಸಂಕ ಕಟ್ಟಿದರೆ ಎಷ್ಟು ಚೆನ್ನಾದೀತು ? ಓ ! ನಾನು ಕಾಕಾನ ಹತ್ತಿರಕ್ಕೆ ಹೋಗಿ ಮುಟ್ಟ ಬಹುದು. ನಾನು ಅವನನ್ನು ಎಬ್ಬಿಸುವದಿಲ್ಲ ದೂರದಿಂದಲೇ ಅವನ ಮೋರೆಯನ್ನು ಮುದ್ದಿಟ್ಟು ನನ್ನ ಕೋಣೆಗೆ ಬಂದುಬಿಡಬಹುದು.

ಆದರೆ ಆ ಅಂತರ ಅಷ್ಟು ಕಡಿಮೆ ಇದ್ದಿಲ್ಲ.

ಅವಳ ಮನಸ್ಸಿನಲ್ಲಿ ರುಚಿ ಇದ್ದಷ್ಟು ಸಾಹಸವಿದ್ದಿಲ್ಲ. ಅವಳು ಒಂದು ಮಂಚದ ಮೇಲೆ ಅಡ್ಡಾದಳು. ಕೆಲಹೊತ್ತಿನ ಮೇಲೆ ಕಾಕಾನ ಕೋಣೆಯಿಂದ ದನಿ ಬಂದಿತು, "ಅತ್ತಿಗೆ ಮೈನಾ. ." ಅವಳು ದಿಗಿಲು ಬಿದ್ದು ಎದ್ದಳು. ಆದರೆ ಇದು ಪಂಜರ ದೊಳಗಿನ ಮೈನಾಳ ದನಿ, ಕಾಕಾ ಅದೇ ರೀತಿ ನಿದ್ದೆಯಲ್ಲಿ ಮಲಗಿದ್ದ.

ಇದೇ ಹೊತ್ತಿಗೆ ಮೈನಾಳ ಅತ್ತೆ ಕಕ್ಕಸಕ್ಕೆ ಹೋಗಲು ಎದ್ದಿದ್ದಳು. ಅವಳಿಗೆ ಮೈನಾಳ ಕೋಣೆಯೊಳಗಿಂದ ಏನೋ ಖಟರ-ಪಟರ ಸದ್ದು ಕೇಳಿಸಿತು. ಅವಳ ಕಿವಿಗೆ ದನಿ ಬಂದಂತೆ ಅನಿಸಿತು. "ಅತ್ತಿಗೆ ಮೈನಾ" ಅವಳು ಮೈನಾಳಿಗೆ ಕೂಗಿ ದಳು. ಮೈನಾ ಒಳಗಿಂದ ಕೂಡಲೇ ಮಾತಾಡಿದಳು. ಅತ್ತೆಯ ಸಂಶಯ ದೃಢ ವಾಯಿತು.

"ನೀನು ಮಲಗಿದ್ದಿಲ್ವೆ ಮೈನಾ ? ಅರ್ಧ ರಾತ್ರೆ ಕಳೆದು ಹೋಯ್ತು."

"ಹೀಗೇ ನಿದ್ದೆ ಹರಿಯಿತು."

ಅತ್ತೆ ಕೋಣೆಯಲ್ಲಿ ಬಂದಳು. ಅವಳಿಗೆ ಇದುರಿನ ಕಿಟಕಿಯಲ್ಲಿ ಯಾರೋ ಮಲಗಿದ್ದು ಕಂಡುಬಂತು. . .ಯಾವದೋ ಮನುಷ್ಯನ ಚರ್ಯೆ.

"ನೀನು ಯಾರ ಸಂಗಡ ಮಾತಾಡುತ್ತಿದ್ದೆ ?"

"ನಾ ಯಾರ ಸಂಗಡ ಮಾತಾಡಲವ್ವಾ ?"

ಅತ್ತೆ ಪುನಃ ಇದುರಿನ ಕಿಟಕಿಯ ಕಡೆಗೆ ನೋಡಿದಳು.

"ಅವ ಸರಕಾರರ ಮನೆಯ ಕಾಕಾ. . .ಘೋರ ನಿದ್ದೆಯಲ್ಲಿದ್ದಾನೆ" ಮೈನಾ ಅಂದಳು.

ಅತ್ತೆ ಹೊರಟು ಹೋದಳು. ಆದರೆ ಕಾಕಾ ಕೇವಲ ಬಾಲಕನೇ ಆಗಿರಲಿ, ಅವಳ ಪ್ರಾಯಕ್ಕಿಂತ ತೀರ ಮುಗ್ಧನಾಗಿರಲಿ, ಆದರೇನು ? ಕೊನೆಗೂ ಆತ ಗಂಡು ಹುಡುಗ. ವಿಧವೆಯರು ಹುಡುಗರ ಕಡೆಗೆ ನೋಡುವುದು ಸರಿಯಲ್ಲ.

ಆಕೆ ಶಾಲೆಯಿಂದ ತಿರುಗಿ ಬರುವಾಗ ಕಾಕಾನನ್ನು ನೋಡುತ್ತಾಳೆ. ಕಾಕಾನೂ ಬಂದೊಡನೆ ಮೊದಲು ತನ್ನ ಕೋಣೆಯೊಳಗೆ ಹೋಗುತ್ತಾನೆ ಮತ್ತು ಕಿಟಕಿಯನ್ನು

ತೆರೆದಿಡುತ್ತಾನೆ. ಕಳೆದ ವರ್ಷಕ್ಕಿಂತ ಈ ವರ್ಷ ಹಾಕಷ್ಟು ದೊಡ್ಡವನಾಗಿ ಬೆಳೆದಂತೆ ಕಾಣುತ್ತಾನೆ.

ಒಂದು ಕಿವಿಯಿಂದ ಕೇಳಿ ಇನ್ನೊಂದು ಕಿವಿಯಿಂದ ಹೊರಗೆ ತಳ್ಳುವ ಮಾತು ಅಲ್ಲ ಇವು. ಇಂಥ ಚಿಕ್ಕ ಚಿಕ್ಕ ವೋಡಗಳೇ ಬಹಳ ಸಲ ಕಾರ್ಮುಗಿಲಾಗಿ ಕಟ್ಟಿ ನಿಲ್ಲುತ್ತವೆ.

ಇಂದು ಕಾಕಾ ಶಾಲೆಯಿಂದ ಹಿಂದಿರುಗಿದಾಗ ಮೈನಾಳ ಕಿಟಕಿ ಮುಚ್ಚಿತ್ತು. ಆ ಕಿಟಕಿ ಈಗ ರಾತ್ರಿಯ ಹೊತ್ತೂ ಮುಚ್ಚಿರುತ್ತಿತ್ತು.

ಆ ಕಿಟಕಿ ಕಾಕಾನ ಬಾಳಿನ ಒಂದು ಪಾಲಾಗಿ ಮಾರ್ಪಾಡಾಗುತ್ತಿತ್ತು. ಅವನಿಗೆ ಈಗ ತನ್ನ ಆಟಗಳಲ್ಲಿ ಅಷ್ಟೊಂದು ಮನಸ್ಸು ಇರುತ್ತಿದ್ದಿಲ್ಲ. ಅಮ್ಮನಿಗೆ ಕೇಳಿ ಯಾವ ಪ್ರಯೋಜನವೂ ಇದ್ದಿಲ್ಲ. ಏಕೆಂದರೆ ಆ ಮನೆಯೊಂದಿಗೆ ಅಮ್ಮನ ಸಂಪರ್ಕವೇನೂ ಇರುತ್ತಿದ್ದಿಲ್ಲ. ಎಂದಾದರೊಮ್ಮೆ ಮದುವೆ ನಿಶ್ಚಿತಾರ್ಥಗಳ ಸಂದರ್ಭದಲ್ಲಿ ಮಿಠಾಯಿ ಕೊಡಲಿಕ್ಕೆ ಯಾರಾದರೂ ಅವರ ಹೊಸ್ತಿಲನ್ನು ದಾಟುತ್ತಿದ್ದರು.

ಇಂದು ಕತ್ತಲೆಯ ರಾತ್ರಿ. ಯಾರೋ ಕೀಲಿಗಳನ್ನು ಬದಲಿಸುತ್ತ ಬೀಗಗಳಿಗೆ ಹಾಕಿ ನೋಡುತ್ತಿದ್ದಂತೆ ಮೈನಾಳ ಕಿಟಕಿಯಿಂದ ಖಟಕ್-ಪಟಕ್ ಸಪ್ಪಳ ಕೇಳಿ ಬಂತು.

ಆಮೇಲೆ ನಿಧಾನವಾಗಿ ಕಿಟಕಿ ತೆರೆಯಿತು. ಮೈನಾ ಎದ್ದು ಬಾಗಿಲಿಗೆ ಕಿವಿ ಹಚ್ಚಿದಳು—ಯಾರೂ ಎಲ್ಲಾದರೂ ಎಚ್ಚರಾಗಿರುವರೋ ಎಂದು, ಮತ್ತೆ ಕೇರಿಯಲ್ಲಿ ನೋಡಿದಳು. ಮತ್ತು ಕಾಕಾನ ಶ್ವಾಸದ ಸದ್ದು ಕೇಳಿದಳು. ಕಾಕಾ ನಿದ್ದೆಯಲ್ಲಿದ್ದ. ಆ ಕತ್ತಲೆಯಲ್ಲಿ ಯಾರಿಗೂ ಏನೂ ಕಾಣಿಸುತ್ತಿದ್ದಿಲ್ಲ. ಆದರೆ ಮೈನಾಳ ಮಮತೆ ತುಂಬಿದ ಕಣ್ಣು ಕಾಕಾನ ಅಂಗೋಪಾಂಗಗಳನ್ನು ತಡವಿ ನೋಡುತ್ತಿದ್ದವು.

ಮರುಕ್ಷಣಕ್ಕೇ ಅವಳಿಗೆ ಅನಿಸಿತು—ತಾನು ಕಾಕಾನ ಮಂಚದ ಮೇಲೆ ಕೂತಿದ್ದೇನೆ. ಅವನ ಮೆತ್ತನ್ನ ಕೂದಲುಗಳ ಮೇಲೆ ಬೆರಳುಗಳನ್ನು ಆಡಿಸುತ್ತಿದ್ದೇನೆ—ಮತ್ತು ಅವನನ್ನು ಎಬ್ಬಿಸುತ್ತಿದ್ದೇನೆ. ಮೈನಾಳ ಕಿವಿಗೆ ತನ್ನ ದನಿಯೇ ಕೇಳಿಸಿದಂತೆ ಆಯಿತು.

" ಕಾಕಾ—ಕಾಕಾ—ಕಾಕಾ ! "

ಅವನು ಇನ್ನೂ ಮಲಗಿಯೇ ಇದ್ದ. ಮೈನಾ ಹೇಳುತ್ತಿದ್ದಳು,—" ಕಾಕಾ, ನಿನ್ನ ಅತ್ತಿಗೆ ಮೈನಾ—ಒಂದು ಗಳಿಗೆ ಎಚ್ಚರಾಗು—ಒಂದು ಕ್ಷಣಕ್ಕಾಗಿ ಎಚ್ಚರಾಗು—ಒಂದು ಶಬ್ದ, ಒಂದು ಮಾತು—ಬರೇ ಒಂದು ಶಬ್ದ—ಬರೇ ಒಂದು ಮಾತು—ಆಮೇಲೆ ಸಾಕು."

ಕಾಕಾ ಗಡಬಡಿಸಿ ಎದ್ದು ಕೂತ.

ಮೈನಾಳಿಗೆ ಬಹಳ ನಾಚಿಕೆಯಾಯಿತು. ಅವಳಿಗೆ ಈಗ ಅರಿವಾಯಿತು—ತಾನು ಮನಸ್ಸಿನಲ್ಲಿ ಅಲ್ಲ, ಬಾಯಿಯಿಂದಲೆ ಮಾತಾಡುತ್ತಿದ್ದೆ. ಮತ್ತು ಕಾಕಾ ಎದ್ದುಬಿಟ್ಟಿದ್ದ—ಹಾಗೆಯೇ ಬೇರೆ ಯಾರಾದರೂ ಎಚ್ಚರಾಗಿದ್ದರೆ!

ಕಾಕಾ ತನ್ನ ಕಿಟಕಿಯಲ್ಲಿ ಬಂದು ಕೂತ. ಅವನಿಗೂ ಅನಿಸುತ್ತಿತ್ತು—ಮುಂದೆ ಕಿಟಕಿಯ ಕತ್ತಲಲ್ಲಿ ಮೈನಾ ಕೂತಿದ್ದಾಳೆ. ಅವನ ಮನಸಿನಲ್ಲಿ ಬಹಳ ಸಲ ಬಂತು—ತಾನು ಅತ್ತಿಗೆ ಮೈನಾಳ ಕೊರಳಲ್ಲಿ ತನ್ನ ತೋಳುಗಳನ್ನು ಹಾಕಬೇಕು—ಕಿಟಕಿ ಮುಚ್ಚಿಯೇ ಇರುತ್ತಿತ್ತು ಏಕೆ?—ಎಂಬ ಮಾತಿಗೆ ಆತ ಭಾರಿ ಖಿನ್ನನಾಗಿರುತ್ತಿದ್ದ.

"ಅತ್ತಿಗೆ ಮೈನಾ! ಅತ್ತಿಗೆ ಮೈನಾ!"

"ಹಾಂ ಕಾಕಾ, ನನ್ನ ಮುದ್ದು ಕಾಕಾ—ಆದರೆ ಸ್ವಲ್ಪ ನಿಧಾನ—ನಿನ್ನ ಎಂಥ ಮಂದ ದನಿಯನ್ನೂ ನಾನು ಕೇಳಬಲ್ಲೆ."

"ನನಗೂ ನಿನ್ನ ದನಿ ಸ್ಪಷ್ಟ ಕೇಳಿಬರುತ್ತಿದೆ—ನೀನೂ ಬಹಳ ಮಂದ ದನಿಯಲ್ಲಿ ಮಾತನಾಡುತ್ತ ಇರುವೆ ಅಲ್ವೇ?"

"ಹೌದು, ನನ್ನ ಮುದ್ದು ಚಿನ್ನ"

"ನೀನು ಇಷ್ಟುದಿನ ಎಲ್ಲಿ ಹೋಗಿಬಿಟ್ಟಿದ್ದೆ?"

"ನನ್ನ ಕೋಣೆ ಸೆರೆಮನೆಯಾಗಿಬಿಟ್ಟಿದೆ. ಆ ಕಿಟಕಿಯಲ್ಲಿ ಬೀಗ ಹಾಕಿಬಿಟ್ಟಿದ್ದಾರೆ."

"ಅದೇಕೆ?"

"ಆ ಹೊತ್ತು ನಿನ್ನ ಮೈನಾ ಕೂಗಿತು. ನಾನು ಎದ್ದು ಬಂದೆ. ನಾನು ತಿಳಕೊಂಡೆ—ನಿನಗೆ ಸಂಕಟ ಬಂತು ಎಂದು. ನನ್ನ ಅತ್ತೆ ಅದೇ ಹೊತ್ತಿಗೆ ಎದ್ದುಬಿಟ್ಟಳು. ಅವಳಿಗೆ ನಿನ್ನೊಡನೆ ನಾ ಮಾತಾಡುತ್ತಿದ್ದಂತೆ ಅನಿಸಿತು."

"ಆಗೇನಾಯಿತು? ನಾ ಅಂತಿದ್ದೆ—ನೀನು ನನ್ನ ಅತ್ತಿಗೆ."

"ಕಾಕಾ, ಬಹಳಷ್ಟು ನಡೆದು ಹೋಯಿತು—ಬಾಗಿಲುಗಳಿಗೆ ಬೀಗ ಹಾಕಿದರು. ಆದ್ದರಿಂದ ನಾನು ಈಗ ಇಲ್ಲಿಂದ ಹೊರಟು ಹೋಗುತ್ತಿದ್ದೇನೆ. ಈ ಮನೆಯಲ್ಲಿ ಇದು ನನ್ನ ಕೊನೆಯ ರಾತ್ರಿ. ನಿನ್ನನ್ನು ಭೆಟ್ಟಿಯಾಗಿ ಹೋಗಬೇಕೆಂದು ನನ್ನ ಬಯಕೆ. ನೀನು ಯಾರಿಗೂ ಹೇಳುವುದಿಲ್ಲವಷ್ಟೇ?"

"ನಾ ಹೇಳೋಲ್ಲ, ಮೈನಾ ಅತ್ತಿಗೆ! ಆದರೆ ನೀನೇಕೆ ಹೋಗುವಿ? ನಾನು ದೊಡ್ಡವನಾಗುತ್ತೇನೆ. ನನ್ನ ಮದುವೆ ಆಗುತ್ತದೆ. ನನ್ನ ಹೆಂಡತಿಯನ್ನು ನಿನ್ನ ಕಡೆಗೆ ಕಳುಹಿಸಿ ಕೊಡುವೆನು. ಅವಳು ನಿನ್ನನ್ನು ಕರೆಯುವಳು—ಆಗ ನೀನು ಅವಳಿಗೆ ಭೆಟ್ಟಿಯಾಗಲು ಬರುವಿಯಂತೆ. ಆಗ ಯಾರೂ ಏನೂ ಅನ್ನಲಾರರು. ನೀನು ಹೋಗಬೇಡ."

"ಆದರೆ ಕಾಕಾ ನೀನು ಇನ್ನೂ ಬಹಳ ಚಿಕ್ಕವನು... ನಿನ್ನ ಮದುವೆ ಬಹಳ

ದೂರವಿದೆ—ಈ ಜೇಲಿನಲ್ಲಿ ಅಷ್ಟು ವರ್ಷ ಕಳೆಯುವದು ಹೇಗೆ?—ಅದೂ ನಿನ್ನ ಕಡೆಗೆ ನೋಡುವದಕ್ಕೂ ತಡೆ ಉಂಟಾಗಿರುವಾಗ!"

"ನೀನು ಹೋಗುವದಾದರೂ ಎಲ್ಲಿಗೆ? ನಾನು ಅಲ್ಲಿ ನಿನ್ನನ್ನು ಕಾಣಲು ಬರುವೆನು."

"ಇಲ್ಲ ಕಾಕಾ, ನಾನು ಹೋಗುವಲ್ಲಿ ಯಾವ ಗಂಡಸೂ ನನ್ನ ಸಂಗಡ ಮಾತಾಡಲಾರ."

"ನೀನು ಅಲ್ಲಿ ಹೋಗುವದೇ ಬೇಡ."

"ನನಗೆ ಇನ್ನು ಬೇರೆ ದಾರಿಯೇ ಉಳಿದಿಲ್ಲ—ನಾನು 'ಪೂಜನೀ' ಆಗುವ ನಿರ್ಣಯ ಮಾಡಿದ್ದೇನೆ."

"ಪೂಜನೀ ಅಂದರೆ ಏನು?"

"ಜೈನರಲ್ಲಿಯ ಹೆಣ್ಣು ಸಾಧು. ಸನ್ಯಾಸಿನಿ. ಅವರ ತಲೆ ಬೋಳಿಸುತ್ತಾರೆ. ಬಾಯಿಗೆ ಪಟ್ಟಿ ಕಟ್ಟುತ್ತಾರೆ. ಮತ್ತು ಅವರು ಬರಿಗಾಲಿನಿಂದ ನಡೆಯುತ್ತಾರೆ."

"ಬೇಡ ಅತ್ತಿಗೆ, ನೀನು ಹಾಗಾಗಬೇಡ. ಎಂದೂ ಆಗಬೇಡ. ನನಗೆ ಅಂಥವರನ್ನು ಕಂಡರೆ ಭಯವಾಗುತ್ತದೆ. ಅವರ ಕಣ್ಣಿಗೆ ಕಟ್ಟಿದ ಪಟ್ಟಿ ಸ್ವಲ್ಪ ಬೇರೆ ರೀತಿಯಾಗಿ ಕಾಣಿಸುತ್ತದೆ."

"ಕಾಕಾ, ನನ್ನ ಮುಂದೆ ಯಾವ ದಾರಿಯೂ ಇಲ್ಲ . . ." ಅತ್ತಿಗೆ ಮೈನಾ ಒಂದು ಚೆಂಡಿನಂತೆ ಏನೋ ಕಟ್ಟಿ ಕಾಕಾನ ಕಿಟಕಿಯಲ್ಲಿ ಒಗೆದಳು, "ನನ್ನ ಈ ಗುರುತು ಇಟ್ಟುಕೋ. ನಾಳೆ ಮುಂಜಾನೆ ಅದನ್ನು ಹುಡುಕು. ಈಗ ಖಟರ್-ಪಟರ್ ಸಪ್ಪಳಕೇಳಿ ಯಾರಾದರೂ ಎಚ್ಚರಾಗಬಹುದು."

ಮತ್ತು ಅತ್ತಿಗೆ ಮೈನಾಳ ಕಿಟಕಿ ಮುಚ್ಚಿತು. ಬೀಗದಲ್ಲಿ ಕೀಲಿ ತಿರುಗಿದ ಸದ್ದನ್ನು ಕಾಕಾ ಕೇಳಿದನು. ಉಳಿದ ರಾತ್ರಿಯೆಲ್ಲ ಅವನಿಗೆ ನಿದ್ದೆ ಬರಲಿಲ್ಲ.

ಮರುದಿನ ಅವನು ಶಾಲೆಯಿಂದ ಮರಳಿದಾಗ, ಅವನ ಅಮ್ಮ ಅವನಿಗೆ ಹೇಳಿದಳು, "ಮೈನಾ ಬಹಳ ದುಃಖಿ ಆಗಿದ್ದಳು. ದಿನಾಲು ಅವಳ ಅತ್ತೆ ಅವಳೊಂದಿಗೆ ಜಗಳಾಡುತ್ತಿದ್ದಳು. ಚುಚ್ಚು ಮಾತಾಡುತ್ತಿದ್ದಳು. ಮೈನಾ ಬೇಸರ ಬಂದು ರೋಸಿ ಹೋಗಿ ಮನೆಯಿಂದ ಹೊರಟು ಹೋದಳು. ತಾನು 'ಪೂಜನೀ' ಆಗಲಿಕ್ಕೆ ಹೋಗುತ್ತಿದ್ದೇನೆಂದು" ಒಂದು ಪತ್ರ ಬರೆದಿಟ್ಟಿದ್ದಳು.

"ಆದರೆ ಅಮ್ಮಾ, ಅವಳು ಇಲ್ಲಿ ಉಳಿದು ಪೂಜನಿ ಆಗುತ್ತಿದ್ದಿಲ್ಲವೇ?"

"ಇಲ್ಲ, ಪೂಜನೀ ಆಗುವವಳು ತನ್ನ ಊರು ಬಿಟ್ಟು ಬೇರೆ ಊರಿನ ಮಂದಿರ ದಲ್ಲಿ ಹೋಗಿ ಉಳಿಯಬೇಕು. ಅಲ್ಲಿಯ ಮಂದಿ ಅವಳ ಪರೀಕ್ಷೆ ಮಾಡುತ್ತಾರೆ. ಅವಳ ಶೀಲದ ಬಗ್ಗೆ ಭರವಸೆ ಉಂಟಾದರೆ ಅವಳ ಪೂರ್ತಿ ಯೋಗಕ್ಷೇಮ ನೋಡಿ ಕೊಳ್ಳುತ್ತಾರೆ. ಚೆನ್ನಾಗಿ ಊಟ-ಉಪಚಾರ ಉಡಿಗೆ ಕೊಡುತ್ತಾರೆ. ಕೆಲವುದಿನ

ಅವಳಿಗೆ ಮನವಿದ್ದಂತೆ ನಡೆಯಲು ಬಿಡುತ್ತಾರೆ. ಆ ಮೇಲೆ ಅವಳ ತಲೆ ಬೋಳಿಸಿ ಅವಳನ್ನು ಪೂಜನಿಯಾಗಿ ಮಾಡುತ್ತಾರೆ. ಆಮೇಲೆ ಅವಳಿಗೆ ಚೆನ್ನಾದ ಊಟವಿಲ್ಲ, ಉಡಿಗೆ ಉಪಚಾರವಿಲ್ಲ. ಗಂಡಸರೊಂದಿಗೆ ಮಾತುಕತೆಯೂ ಇಲ್ಲ."

"ಮೈನಾ ಅತ್ತಿಗೆ ಎಲ್ಲಿ ಹೋಗಿರಬಹುದು?"

"ಗೊತ್ತಾಗುವದು."

"ಅವಳು ಯಾವದೇ ಹತ್ತಿರದ ಊರಿಗೆ ಹೋಗಿದ್ದರೆ, ನನಗೆ ಅಲ್ಲಿ ಒಯ್ದು ಕಾಣಿಸಿ ತರುವೆಯಾ?"

"ನಿನ್ನ ಚಿಕ್ಕವ್ವ ಉಳಿಯುವ ಊರಿನಲ್ಲಿ ಜೈನರ ಬಹಳ ದೊಡ್ಡ ಮಂದಿರವಿದೆ. ಮೈನಾ ಅಲ್ಲಿಗೇ ಹೋಗಿದ್ದರೆ ನೀನು ಎರಡು ದಿನ ಅಲ್ಲಿ ಹೋಗಿ ಇದ್ದು ಬಾ— ನಿನ್ನ ಚಿಕ್ಕವ್ವ ನಿನಗೆ ಅವಳನ್ನು ಕಾಣಿಸುವಳು. ಯಾರಾದರೂ ಪೂಜನಿ ಆಗುವದಿದ್ದರೆ ಇಡಿ ಊರಿನಲ್ಲಿಯೇ ದೊಡ್ಡ ಉತ್ಸವ-ಸಂಭ್ರಮವಿರುತ್ತದೆ."

ಈ ವಿಷಯದ ಬಗ್ಗೆ ವಿಚಾರಿಸಬೇಕೆಂದು ಕಾಕಾ ತನ್ನ ಚಿಕ್ಕವ್ವನಿಗೆ ಪತ್ರ ಬರೆದ.

ಎರಡು ಊರುಗಳಲ್ಲಿ ಎಲ್ಲರಿಗೂ ಗೊತ್ತಾಗಿಬಿಟ್ಟಿತು. ಇಡಿ ಕೇರಿಯಲ್ಲಿ ಮೈನಾಳದೇ ಮಾತು. ಭಾರಿ ಒಳ್ಳೆಯ ಹೆಣ್ಣು. ಯಾರೂ ಅವಳ ತಲೆಯನ್ನು ಕಂಡಿದ್ದಿಲ್ಲ. ಎಂಥ ಚೆಂದ ಕೂದಲು. ಕೂದಲಿನ ಆರೈಕೆ ಅದೆಷ್ಟು ಮಾಡುತ್ತಿದ್ದಳು! ಈಗ ಅವಳ ತಲೆಯನ್ನು ಬೋಳಿಸಿಬಿಡುತ್ತಾರೆ. ಚಿಮಟದಿಂದ ಒಂದೊಂದೆ ಕೂದಲನ್ನು ಕಿತ್ತು ತೆಗೆಯುತ್ತಾರೆ. ಪಾಪ! ಬಡ ಪರದೇಶಿ!

ಕಾಕಾ ಚಿಕ್ಕವ್ವ ಇದ್ದಲ್ಲಿಗೆ ತಲುಪಿದ. ಅವಳು ಈ ಹೊತ್ತು ಮೈನಾಳನ್ನು ಕಂಡು ಬಂದಿದ್ದಳು. ಆಕೆ ಸುಂದರ ಬಟ್ಟೆಗಳನ್ನು ತೊಟ್ಟಿದ್ದಳು. ಆಭರಣಗಳನ್ನು ತೊಟ್ಟಿದ್ದಳು. ಮಂದಿ ಈ ಆಭರಣಗಳನ್ನು ಅವಳಿಗೆ ಕಡ ಕೊಟ್ಟಿದ್ದರು. ಆ ಜನ ಗಾಯನ-ವಾದನಗಳನ್ನು ಏರ್ಪಡಿಸಿದ್ದರು. ಈ ಮೈನಾ ಕಾಕಾನ ಕೇರಿಯವಳೆಂದು ಗೊತ್ತಾದೊಡನೆ ಅವನ ಚಿಕ್ಕವ್ವನಿಗೆ ಅವಳಲ್ಲಿ ಆಸಕ್ತಿ ಹೆಚ್ಚಿತು. ಅವಳು ಅಲ್ಲಿಯ ಪ್ರತಿಯೊಂದು ವಿಧಿಗೂ ಹೋಗಹತ್ತಿದಳು. ಮೈನಾಳಿಗೆ ಒಳ್ಳೇ ರೂಪದ ತೇಜವೇರಿದೆ ಎಂದು ಅವಳು ಕಾಕಾನಿಗೆ ಹೇಳಿದಳು. ನಾಳೆ ಅವಳನ್ನು ಡೋಲಿ (ಪಲ್ಲಕ್ಕಿ) ಯಲ್ಲಿ ಕೂಡಿಸಿ ಊರತುಂಬ ತಿರುಗಿಸುವರು. ಆಗ ಜನ ಅವಳ ಮೇಲೆ ಹೂಮಳೆಗರೆಯುವರು. ಪನ್ನೀರುಗರೆಯುವರು.

ಕಾಕಾ ತನ್ನ ಅತ್ತಿಗೆಯನ್ನು ನೋಡಲು ಅಧೀರನಾಗಿದ್ದನು. ಅವನು ಮೈನಾಳನ್ನು ಬಂದೇ ಉಡಿಗೆಯಲ್ಲಿ ಕಂಡಿದ್ದನು. ಅವಳು ಆ ಬಟ್ಟೆಯಲ್ಲಿ ಬಹಳ ಚೆಂದ ಕಾಣುತ್ತಿದ್ದಳು. ಆಭರಣಗಳು ಅವಳಿಗೆ ಹೇಗೆ ಶೋಭಿಸುತ್ತಿರಬಹುದು! ಅವಳು ನಕ್ಕಿದ್ದು ಕಾಕಾ ಎಂದೂ ನೋಡಿದ್ದಿಲ್ಲ. ಮೈನಾಳ ಮುಗುಳು ನಗೆ ಬಹಳ ಮೋಹಕವಾಗಿದೆ ಎಂದು ಈಗ ಚಿಕ್ಕವ್ವ ಹೇಳುತ್ತಿದ್ದಳು.

ಮೈನಾ ಕೊಟ್ಟ ಕರವಸ್ತ್ರ . . . ಅವಳ ಗುರುತು . . . ಕಾಕಾನ ಒಳ ಜೇಬಿನಲ್ಲಿ ಇತ್ತು. ಅವನು ಆ ಸಂಗತಿಯನ್ನು ಯಾರಿಗೂ ಹೇಳಿದಿಲ್ಲ. ಆದರೆ ಆತ ಆ ಕರವಸ್ತ್ರವನ್ನು ದಿನಾಲು ನೋಡುತ್ತಿದ್ದ. ಕಾಕಾ ಹಿಂದಿ ಅಕ್ಷರ ಕಲಿತುಕೊಂಡಿದ್ದ. ಏಕೆಂದರೆ ಮೈನಾ ಕರವಸ್ತ್ರದ ಮೇಲೆ ಹಿಂದಿಯಲ್ಲಿ ಕಸೂತಿ ಒದೆದಿದ್ದಳು, "ಬಹಳ ಪ್ರೀತಿಯ ಕಾಕಾನಿಗೆ—ಅವನ ಅತ್ತಿಗೆಯಿಂದ."

ಮರುದಿನ ಮಧ್ಯಾಹ್ನದ ನಂತರ ಅವನ ಚಿಕ್ಕವ್ವ ತಿಳಿಸಿದಳು, ಮೈನಾಳ ಡೋಲಿ ಹೊರಟು ಊರು ಸುತ್ತುವುದೆಂದು, ಯಾರು ಬೇಕಾದರೂ ಅವಳನ್ನು ನೋಡಬಹುದು. ಮರುದಿನ ಕಾಕಾ ಚಿಕ್ಕವ್ವಳ ತೋಟದಿಂದ ಬಹಳಷ್ಟು ಹೂವು ತೆಗೆದು ತಂದು ಕರವಸ್ತ್ರದಲ್ಲಿ ಕಟ್ಟಿಕೊಂಡನು. ಡೋಲಿಯು ಅವರ ಚೌಕದ ಹತ್ತಿರದಿಂದ ಹಾಯುವಾಗ ಅವನು ಉದ್ದೇಶಪೂರ್ವಕವಾಗಿ ಮನೆಯವರಿಂದ ದೂರವಾದನು. ಅವನು ಕೇವಲ ಡೋಲಿಯನ್ನು ನೋಡಿ ಹಿಂತಿರುಗದೇ ರಸ್ತೆಯಲ್ಲೆಲ್ಲಾ ಅದರೊಂದಿಗೇ ಇರಲು ಇಚ್ಛಿಸಿದ್ದನು.

ಸಮವಸ್ತ್ರ ಧರಿಸಿದ ಮಂದಿ ವಾದ್ಯ ಬಾರಿಸುತ್ತಿದ್ದರು. ಜೈನರು ರೂಪಾಯಿಗಳ ಸುರಿಮಳೆಗರೆಯುತ್ತಿದ್ದರು. ಡೋಲಿಯಲ್ಲಿ ಅವನ ಅತ್ತಿಗೆ ಆಭರಣಗಳನ್ನು ಹೇರಿಕೊಂಡು ಕುಳಿತಿದ್ದಳು. ಅವಳ ಮುಖಚರ್ಯೆ ಬದಲಾಗಿದ್ದಂತೆ ಕಾಣುತ್ತಿತ್ತು. ಆದರೆ ಅದರಲ್ಲಿ ಮೊದಲಿನ ಹೊಳಪೂ ಸಾಕಷ್ಟು ಇತ್ತು. ಈ ನಗುತ್ತಿರುವ ರೂಪದ ಇದಿರು ಕಾಕಾನಿಗೆ ಅವಳ ಮೊದಲಿನ ಖಿನ್ನ ಕಣ್ಣುಗಳೇ ಹೆಚ್ಚು ಮುದ್ದಾಗಿ ತೋರಿದವು. ಅವಳು ಈಗ ಅತ್ಯಂತ ರೂಪವತಿಯಾಗಿ ಕಾಣುತ್ತಿದ್ದಾಳೆಂದು ಜನರು ಹೇಳುತ್ತಿದ್ದರು. ಆದರೆ ಈ ಆಡಂಬರದಲ್ಲಿ ಕಾಕಾನಿಗೆ ಅವನ ಅತ್ತಿಗೆ ಮೈನಾಳ ನಕ್ಷೆ ಪೂರ್ತಿಯಾಗಿ ಕಾಣಿಸುತ್ತಿರಲಿಲ್ಲ.

ಅವಳು ತನ್ನ ಕಡೆಗೆ ನೋಡುತ್ತಿರುವಳೆಂದು ತಿಳಿದುಬಂದಾಗೆಲ್ಲ ಅವನು ಅವಳ ಮೇಲೆ ಹೂವು ತೂರುತ್ತಿದ್ದ. ಅವಳು ಕೈಜೋಡಿಸುತ್ತಿದ್ದಳು. ಆದರೆ ಆ ಕೈಗಳು ಕಾಕಾನ ಬಗ್ಗೆ ಇದ್ದಿಲ್ಲ. ಕಾಕಾ ಆಲೋಚಿಸುತ್ತಿದ್ದ—ಇಂಥ ದೊಡ್ಡ ಜನಸಂದಣಿಯಲ್ಲಿ ಈ ಪುಟ್ಟ ಕಾಕಾ ಮೈನಾ ಅತ್ತಿಗೆಯ ಕಣ್ಣಿಗೆ ಬೀಳುವದಾದರೂ ಹೇಗೆ?

ಒಂದು ಮುರುವಿನಲ್ಲಿ ತಿರುಗುವಾಗ ಡೋಲಿ ಅಕಸ್ಮಾತ್ ಅವನ ತೀರ ಹತ್ತಿರಕ್ಕೆ ಬಂದಿತು. ಹೂವ ಮಳೆಗರೆಯಹತ್ತಿತು. ಮೈನಾ ಕೈ ಜೋಡಿಸಿದಳು. ಅದೇ ಹೊತ್ತಿಗೆ ಕಾಕಾ ಹೂವನ್ನು ಚೆಲ್ಲುವವನಿದ್ದ. ಮೈನಾ ಅವನನ್ನು ಗುರುತಿಸಿದಳು. ಅವಳ ಅರೆ ಮುಚ್ಚಿದ ಕಣ್ಣುಗಳು ತೆರೆದು ಅರಳಿ ದೊಡ್ಡದಾದವು. ಅವಳು ಲಕ್ಷ್ಯಗೊಟ್ಟು ನೋಡಿದಳು. ಮತ್ತು ಸಾಹಸಮಾಡಿ ಡೋಲಿಯನ್ನು ನಿಲ್ಲಿಸಲು ಹೇಳಿದಳು.

"ಈ ಕಾಕಾ ನಮ್ಮ ಕೇರಿಯವನು, ನನ್ನ ಮೇಲೆ ಹೂವು ಚೆಲ್ಲಲು ನೋಡು

ತ್ತಾನೆ. ಅವನ ಕೈ ಡೋಲಿಯತನಕ ಮುಟ್ಟುವದಿಲ್ಲ. ಅವನನ್ನು ಒಂದು ಗಳಿಗೆ ನನ್ನ ಹತ್ತಿರ ಬರಲು ಬಿಡಿ."

ಇದೊಂದು ಅದ್ಭುತ ಸಂಗತಿಯಾಗಿತ್ತು. ಆದರೆ ಪೂಜನಿ ಆಗಲಿರುವವಳ ಮಾತನ್ನು ಮೀರುವಂತಿದ್ದಿಲ್ಲ.

"ತಾ. . .ಕಾಕಾ. . .ನಿನ್ನ ಈ ಹೂವು ನಾನು ತೆಗೆದುಕೊಳ್ಳುತ್ತೇನೆ. . . ನೀನು ಬಹಳ ದೂರದಿಂದ ಬಂದಿರುವಿ. . .ನನ್ನ ಕೇರಿಯ ಕಾಕಾ !"

ಕಾಕಾ ಅತ್ಯಂತ ಸಂತುಷ್ಟನಾದ. ಮೈನಾ ಅತ್ತಿಗೆ ಅವನನ್ನು ನೋಡಿದಳು. ಹತ್ತಿರ ಕರೆದು ಕೈಗಳ ಬೊಗಸೆಯೊಡ್ಡಿ ಹೂವು ತೆಗೆದುಕೊಂಡಳು.

ಕರವಸ್ತ್ರವನ್ನು ತಿರುಗಿ ಕೊಡಲಿಲ್ಲ. ಕಾಕಾ ಭಾವಿಸಿದ. . .ಅತ್ತಿಗೆ ಅದನ್ನು ಕುರುಹಾಗಿ ಇಟ್ಟುಕೊಳ್ಳುವಳು.

ಮೆರವಣಿಗೆ ಸ್ವಸ್ಥಾನಕ್ಕೆ ತಲುಪಿತು. ಜನಸ್ತೋಮ ಅವಳನ್ನು ಬೀಳ್ಕೊಟ್ಟು ಮುಂದೆ ಸಾಗಿತ್ತು. ಮೈನಾ ಮತ್ತು ಅವಳ ಸಂಗಡ ಕೆಲವು ಹೆಂಗಸರು ಮೆಟ್ಟಲು ಗಳನ್ನೇರಿದರು. ಮೆಟ್ಟಲ ಮೇಲೆ ಕಾಲಿಟ್ಟೊಡನೆ ಮೈನಾ ಕಂಡಳು—ಕಾಕಾ ಮುಂದಿನ ಒಂದು ಅಂಗಡಿಯ ಕಟ್ಟೆಯ ಮೇಲೆ ನಿಂತಿದ್ದ.

ಮೇಲೆ ಹಿರಿಯ ಪೂಜಾರಿಯ ಇದುರಿಗೆ ಮೈನಾಳನ್ನು ಕೂಡಿಸಿದರು.

ಹಿರಿಯ ಪೂಜಾರಿ ಕೇಳಿದ, "ನೀನು ನಿನ್ನ ಮನಸ್ಸನ್ನು ದೃಢಗೊಳಿಸಿದೆಯಾ ?"

"ಹೌದು, ಮಹಾರಾಜರೆ ; ದೃಢಗೊಳಿಸಿದ್ದೇನೆ."

"ನಿನ್ನ ಎಲ್ಲ ಬಟ್ಟೆ ಆಭರಣ ಇಳಿಸಿಬಿಡಬೇಕಾಗುವದು. ಮತ್ತು ಬಾಳಿನಲ್ಲಿ ಇವುಗಳ ಸ್ವೀಕಾರ ನೀನು ಮಾಡಲಾರೆ."

"ಹೌದು ಮಹಾರಾಜರೆ, ನನಗೆ ಯಾವ ಇಚ್ಛೆಯೂ ಇಲ್ಲ."

"ನಮ್ಮ ಶ್ರೇಣಿಯ ನಿಯಮಾನುಸಾರ ಯಾವುದು ಶಕ್ಯವೋ ಅದನ್ನು ಮಾತ್ರ ನೀನು ತಿನ್ನಬೇಕು, ಕುಡಿಯಬೇಕು."

"ಹೌದು ಮಹಾರಾಜರೆ, ನನಗೆ ಒಳ್ಳೆಯ ಭೋಜನದ ಅಗತ್ಯವೇ ಇಲ್ಲ."

"ಗಂಡಸರನ್ನು ಮುಟ್ಟುವ ಮಾತಿರಲಿ, ಅವರ ವಿಚಾರವೂ ನೀನೀಗ ಆಯ್ದು ಕೊಳ್ಳುವ ಧರ್ಮದಲ್ಲಿ ವಿಘ್ನ ಒಡ್ಡುವದು."

ಮೈನಾ ನಿಟ್ಟುಸಿರನ್ನೆಳೆದಳು ಅವಳಿಗೆ ಅನಿಸಿತು, ಅವಳ ಜೇಬಿನಲ್ಲಿ ಇಟ್ಟ ಕಾಕಾನ ಕರವಸ್ತ್ರ ತೆರೆಯುತ್ತ ನಡೆದಿದೆ. ಕರವಸ್ತ್ರದ ತುದಿಗಳು ಪುಟ್ಟ ತೋಳು ಗಳಾಗಿ ಅವಳ ಸೊಂಟವನ್ನು ಸುತ್ತಿ ಅಂಟಿಕೊಳ್ಳಹತ್ತಿವೆ. ಸ್ವಲ್ಪ ಚೇತರಿಸಿಕೊಂಡು ಅವಳು ಉತ್ತರವಿತ್ತಳು.

"ಹೌದು ಮಹಾರಾಜರೆ, ಇದೂ ನನಗೆ ಒಪ್ಪಿಗೆ."

"ಈಗ ನೀನು ಆ ಕೋಣೆಯಲ್ಲಿ ಹೋಗಿ ನಿನ್ನ ಬಟ್ಟೆಗಳನ್ನು ತೆಗೆದಿಡು. ಮತ್ತು

ನಿನಗಾಗಿ ಕೊಡಲಾಗುವ ಬಟ್ಟೆಗಳನ್ನು ಧರಿಸಿಕೋ. ಆ ಮೇಲೆ ನಿನ್ನ ಕೂದಲು ಕತ್ತರಿಸಬೇಕಾಗುವದು. ಮತ್ತು ಅನಂತರ ನಿನಗೆ ನಿನ್ನ ಪೂಜನೀ ಮಾತೆ ತಿಳಿಸಿ ಕೊಡುವಳು—ಚಿಮಟದಿಂದ ಒಂದೊಂದು ಕೂದಲನ್ನು ಹೇಗೆ ಕೀಳಬೇಕೆಂಬುದು."

ಕೂದಲು ಕೀಳುವ ವರ್ಣನೆಯನ್ನು ಕೇಳಿ ಅವಳು ದೊಡ್ಡ ನಿಟ್ಟುಸಿರು ಬಿಡುತ್ತಾ ಹಾಗೂ ದೊಡ್ಡ ಆಸೆಯಿಂದ ಹೇಳಿದಳು, "ಪೂಜ್ಯ ಪಿತಾಜೀ, ನನಗೆ ಕೂದಲನ್ನು ಇಟ್ಟುಕೊಳ್ಳಲು ಅಪ್ಪಣೆಯನ್ನು ತಾವು ದಯಪಾಲಿಸುವದಿಲ್ಲವೇ ?"

"ಅದು ಹೇಗೆ ಸಾಧ್ಯ ?"—ಮುಖ್ಯ ಪೂಜಾರಿ ಚಕಿತನಾಗಿ ಕೇಳಿದನು.

"ನನಗೆ ಗೊತ್ತು. . .ನನ್ನ ಬೇಡಿಕೆ ಅಲೌಕಿಕವಾಗಿದೆ."—ಮೈನಾಳಿಗೆ ಒಳಗಿಂದಲೇ ಏನೋ ಒಂದು ಶಕ್ತಿಯು ಉಕ್ಕಿದಂತೆ ಅನಿಸುತ್ತಿತ್ತು. "ಆದರೆ ತಾವು ಒಪ್ಪಿಕೊಂಡರೆ. . .ನಾನೆಂದೂ ತಮ್ಮಲ್ಲಿ ದೂರಿಕೊಳ್ಳುವದಿಲ್ಲ.—ನನ್ನ ಒಳ ಒಳಗೆ ಯಾವ ಗಂಟು ತಡೆಹಿಡಿದಿದೆಯೋ ಗೊತ್ತಿಲ್ಲ. . .ನಾನು ತಮ್ಮ ಸೇವಿಕೆ. . .ಇಡೀ ಸಮಾಜವೇ ಆಶ್ಚರ್ಯಪಡಬೇಕು, ಅಂಥ ಸೇವಿಕೆ ಆಗುವೆನು. . .ನನ್ನ ಕೂದಲು ಕತ್ತರಿಸಲಾಗದೇ ಇರಲಿ."

"ಆದರೆ ಈ ಮಾತು ಕದಾಪಿ ಶಕ್ಯವಿಲ್ಲ. ಇದು ನಿನಗೆ ಗೊತ್ತಿದ್ದಿಲ್ಲವೇ ?"

"ನನಗೆ ಗೊತ್ತಿತ್ತು. . .ನಾನು ಕೂದಲು ಕತ್ತರಿಸಿಕೊಳ್ಳುವೆ. ಆದರೆ. . .ಆದರೆ ಕತ್ತರಿಸಿಕೊಳ್ಳುವ ಹೊತ್ತು ಈಗ ಬಂದಿದೆ. . .ನನಗೆ ಈ ಕೂದಲು ನನ್ನ ಜೀವಂತವೆನಿಸುತ್ತವೆ. ಇವು ನನ್ನ ಪ್ರಾಣಗಳಿಂದಲೇ ಮೊಳೆತಿವೆ. ಇವನ್ನು ಬಾಚುವಾಗ ಇವು ಚಟ್ಟನೆ ನನ್ನ ಕಾಲುಗಳನ್ನು ಮುಟ್ಟುತ್ತವೆ. ಆಗ ಅವುಗಳ ಸ್ಪರ್ಶ ಜೀವಂತವಾಗಿರುತ್ತವೆ. ಕೆಲವು ವರ್ಷಗಳಿಂದ ಈ ಕೂದಲು ಬಿಟ್ಟರೆ ಬೇರೆ ಯಾರೊಂದಿಗೂ ಮಾತನಾಡಿಲ್ಲ. (ತಲೆಯನ್ನು ನೆಲಕ್ಕೆ ಊರಿ) ಪರಮ ಪೂಜ್ಯರೇ. . .ಅಶಕ್ಯ ಅಸಂಭವವೆನಿಸುವ ಸಂಗತಿಯನ್ನು ಒಮ್ಮೆ ಮಾಡಿನೋಡಿರಿ. ತಮ್ಮ ನಿರ್ಣಯಕ್ಕಾಗಿ ತಮಗೆ ಎಂದೂ ಪಶ್ಚಾತ್ತಾಪವಾಗಲಿಕ್ಕಿಲ್ಲ."

ಮುಖ್ಯ ಪೂಜಾರಿಯ ಕರುಳು ಕರಗಿತು. ಆದರೆ ಪೂಜನೀ ಸ್ತ್ರೀಯ ತಲೆಯ ಮೇಲೆ ಕೂದಲನ್ನು ಕಂಡು ಜನ ಏನೆಂದಾರು ?

"ಇಲ್ಲ ಮಗಳೆ ; ನಿನ್ನ ಈ ಮಾತನ್ನು ಒಪ್ಪಲು ಸಾಧ್ಯವೇ ಇಲ್ಲ."

"ಹಾಗಾದರೆ ಸ್ವಾಮೀ, ನನಗೆ ಐದು ನಿಮಿಷಗಳ ಅವಕಾಶ ನೀಡಿರಿ. ನಾನು ಏಕಾಂತದಲ್ಲಿ ಹೋಗಿ ನನ್ನ ಮನಸ್ಸಿಗೆ ತಿಳಿಸಿ ಹೇಳುತ್ತೇನೆ." ಮೈನಾ ಮನಸ್ಸು ಗಟ್ಟಿಮಾಡಿಕೊಂಡು ಅಂದಳು.

"ಅಡ್ಡಿ ಇಲ್ಲ, ಹೋಗು. ಅಲ್ಲಿ ಮುಂದೆ ಕಟ್ಟೆಯಮೇಲೆ ಕೂತು ವಿಚಾರ ಮಾಡು."

ಮೈನಾ ಎದ್ದಳು ಮತ್ತು ನಿಧಾನವಾದ ಆದರೆ ದೃಢವಾದ ಹೆಜ್ಜೆಗಳನ್ನು

ಇಡುತ್ತಾ ಇದುರಿಗಿದ್ದ ಕಟ್ಟೆಯ ಮೇಲೆ ಹೋಗಿ ಕೂತಳು. ಆ ಕಟ್ಟೆಯ ಕೆಳಗೆ ಪೇಟೆಯಿತ್ತು. ಸ್ವಲ್ಪಹೊತ್ತಿನ ಮೇಲೆ ಮೈನಾ ಎದ್ದು ನಿಂತಳು.

"ಇವಳಾರೋ ವಿಚಿತ್ರ ಹೆಂಗಸು. ನಾನು ಹಲವು ಹೆಂಗಸರಿಗೆ ಈ ವಿಧಿಯನ್ನು ಮಾಡಿಸಿದ್ದೇನೆ. ಆದರೆ ಈ ಹೆಂಗಸಿನ ಒಂದೊಂದು ಮಾತೂ ವಿಚಾರದಲ್ಲಿ ಮುಳುಗಿ ಸುತ್ತದೆ. ಇವಳು ಪೂಜಾರಿ ಆಗಿಬಿಟ್ಟರೆ ಮಹಾಖ್ಯಾತಿಯನ್ನು ಪಡೆಯುವಳು."

"ಆದರೆ ಅವಳು ಆ ಕಟ್ಟೆಯ ಮೇಲೆ ಏಕೆ ನಿಂತಿದ್ದಾಳೆ?" ಇನ್ನೊಬ್ಬನು ಗಾಬರಿಯಿಂದ ಕೇಳಿದನು.

ಹಿರಿಯ ಪೂಜಾರಿಯೂ ನೋಡಿದ; ಮೈನಾ ಕಟ್ಟೆಯಮೇಲೆ ಎದ್ದು ನಿಂತಿದ್ದಳು. ಅವಳು ತನ್ನ ಮುಂಡೆಯ ಗಂಟಿನಲ್ಲಿ ಬೆರಳು ಆಡಿಸಿದಳು. ಗಂಟು ಬಿಚ್ಚಿತು. ಹೆಳಲು ಸೊಂಟಕ್ಕೂ ಕೆಳಗೆ ಉರುಳಹತ್ತಿದವು. . .ತಿಳಿಗಾಳಿಯ ಸುಳಿದಾಟದಲ್ಲಿ ರೇಶಿಮೆಯ ಜುಲ್ಪುಗಳು ಸಳ ಸಳ ಹರಿದವು.

"ಎಷ್ಟು ಉದ್ದ. . ."

"ಓಹ್ಃ!" ಎಲ್ಲರೂ ಎದ್ದು ಮೆಟ್ಟಲುಗಳ ಕಡೆಗೆ ಧಾವಿಸಿದರು. ಕಟ್ಟೆಯ ಮೇಲೆ ಬೇರಾವ ಹೆಂಗಸೂ ನಿಂತಿದ್ದಿಲ್ಲ.

ಎಲ್ಲ ಜನ ಕೆಳಗೆ ತಲುಪಿದರು. ಪೇಟೆಯಲ್ಲಿ ಹಾಹಾಕಾರ ಎದ್ದುಬಿಟ್ಟಿತ್ತು. ಒಬ್ಬ ಹುಡುಗ ಕ್ಷತ-ವಿಕ್ಷತ ಮೈನಾಳ ತಲೆಯ ಬಳಿ ಕೂತಿದ್ದ. ಅವನು ಕದರಿದ ಕೂದಲುಗಳನ್ನು ತಲೆಯಿಂದ ಹಿಂದೆ ಸರಿಸಿ ಅವಳ ಬೈತಲೆ ನೇರಗೊಳಿಸಿದನು. ಕಪ್ಪು ಕೂದಲುಗಳಲ್ಲಿ ಅಲ್ಲಲ್ಲಿ ಕುಂಕುಮದಂತೆ ರಕ್ತ ಹೊಳೆಯುತ್ತಿತ್ತು. ಹುಡುಗನ ಕಣ್ಣಿನಿಂದ ಸರಸರ ಕಂಬನಿಗಳು ಹರಿಯುತ್ತಿದ್ದವು. . .ಅವನು ಮಲಗಿದ್ದ ಹೆಂಗಸಿನ ಕಣ್ಣುಗಳನ್ನು ದಿಟ್ಟಿಸುತ್ತಿದ್ದನು. . .ಅವು ತೆರೆದೇ ಇದ್ದವು. ಕಾಕಾ ಆ ಕಣ್ಣುಗಳ ಬಣ್ಣವನ್ನು ಈ ಮೊದಲು ನೋಡಿದ್ದೇ ಇಲ್ಲ. ಅವು ಆ ಕಾಳ ರಾತ್ರಿಯಷ್ಟೇ ಕಪ್ಪಿದ್ದವು—ಕೊನೆಯ ಸಲ ಅವಳು ಕಾಕಾನನ್ನು ನಿದ್ದೆಯಿಂದ ಎಬ್ಬಿಸಿದ ಆ ರಾತ್ರಿಯಷ್ಟು. ಆದರೆ ಆ ರಾತ್ರಿಯ ಆಳದಲ್ಲಿ ಹಲವು ಸೂರ್ಯರು ಅಡಗಿದ್ದರು—ಅಂತೆಯೇ ಆ ರಾತ್ರಿಗೆ ಅವಳು ಆ ಕತ್ತಲೆಯಲ್ಲಿಯೂ ನೋಡಲು ಸಮರ್ಥಳಾದಳು. ಆ ಕಣ್ಣು ಈಗಲೂ ಅಷ್ಟೇ ಕಪ್ಪು. ಅಷ್ಟೇ ಹೊಳಪುಳ್ಳವಾಗಿದ್ದವು. ಅವು ತೆರೆದೇ ಇದ್ದವು.

ಆದರೆ ಈಗ ಅವುಗಳಲ್ಲಿ ಯಾವ ಸೂರ್ಯನೂ ಇದ್ದಿಲ್ಲ.

## ಪೇಮಿಯ ಮಕ್ಕಳು

ಸುಮಾರು ಇಪ್ಪತ್ತು ವರ್ಷಗಳ ಹಿಂದಿನ ಮಾತು. ನಾನು ಏಳುವರ್ಷದವನಿರಬಹುದು. ಮತ್ತು ನನ್ನ ಅಕ್ಕ ಸುಮಾರು ಹನ್ನೊಂದು ವರ್ಷದವಳು. ನಮ್ಮ ಹೊಲ ಮನೆಯಿಂದ ಒಂದು ಮೈಲು ದೂರವಿತ್ತು. ಇದರ ಮಧ್ಯದಲ್ಲಿ ಹೆದ್ದಾರಿಯೊಂದು ಹಾದಿತ್ತು. ಈ ದಾರಿಯಲ್ಲಿ ಕಾಡುಜನ, ಜಂಗಲಿ, ಪಠಾಣರು ಹಾಗೂ ರಾವೆ ಬುಡಗಟ್ಟಿನವರು ಹಾಗೂ ಇತರ ವಿದೇಶಿಯರು ಓಡಾಡುತ್ತಿದ್ದರು. ನಾವೆಲ್ಲ ಚಿಕ್ಕ ಮಕ್ಕಳು. ಮನೆಯಲ್ಲಿ ಕೂತಲ್ಲಿಯೇ ನಮಗೆ ಈ ಮಂದಿಯೆಂದರೆ ಭಯ ; ಯಾರೇ ಹಿರಿಯನೊಬ್ಬ ಸಂಗಡ ಇದ್ದ ಹೊರತು ಈ ರಸ್ತೆಯ ಮೇಲಿಂದ ಹಾದು ಹೋಗುವದೆಂದರೆ ನಮಗ ಕಟ್ಟ ದಿಗಿಲು. ಆದರೆ ದುರ್ದೈವವೇನೆಂದರೆ ನಾವು ನಮ್ಮ ತಂದೆ ಮತ್ತು ಅವನ ಕೂಲಿಕಾರರಿಗೆ ರೊಟ್ಟಿ ಒಯ್ದು ಕೊಡಲಿಕ್ಕೆ ದಿನಕ್ಕೆ ಎರಡು ಮೂರು ಬಾರಿ ಹೋಗಬೇಕಾಗುತ್ತಿತ್ತು, ಮತ್ತು ನಿತ್ಯವೂ ಈ ರಸ್ತೆಯನ್ನು ದಾಟುವಾಗ ಯಾವದೋ ಬಿಕ್ಕಟ್ಟಿನ ಘಟ್ಟದ ಕಣಿವೆಯನ್ನು ಪಾರುಮಾಡಿದಂತೆ ನಮಗೆ ಭಾಸವಾಗುತ್ತಿತ್ತು.

ನಾವು ಧೈರ್ಯವಾಗಿ ಮನೆಯಿಂದ ಒಬ್ಬಂಟಿಗರಾಗಿಯೇ ಹೊರಡುತ್ತಿದ್ದೆವು. ಆದರೆ ಆ ರಸ್ತೆ ಇನ್ನೂ ಎರಡು ಮೂರು ಮಾರುವಿನಷ್ಟು ದೂರವಿತ್ತೆಂದರೆ ಕಾಲುವೆಯನ್ನು ದಾಟಿ ಹೋಗುವಾಗ ನಾವು ಕುರಿಮರಿಗಳಂತೆ ಆಚೆ ಈಚೆ ನೋಡಹತ್ತುತ್ತಿದ್ದೆವು—ಯಾರಾದರೂ ಊರಿಂದ ಬರಹೋಗುವ ಮನುಷ್ಯರಿಗೆ ಮೊರೆಹೊಕ್ಕಿ ಈ ಸಾಗರವನ್ನು ಪಾರುಮಾಡಲು ಸಮರ್ಥರಾಗಬಹುದೋ—ಎಂದು.

ಇಂಥ ಭಯ ನಮ್ಮ ಸ್ವಭಾವದ ಒಂದಂಶವಾಗಿಬಿಡುವಂತೆಯೇ ನಮಗೆ ಧಾರ್ಮಿಕ ಶಿಕ್ಷಣವೂ ಸಿಕ್ಕಿತ್ತು. ಪ್ರತಿದಿನ ಸಂಜೆಗೆ ಮನೆಯ ಹಿರಿಯರಿಂದ ನಾವು ಸ್ವರ್ಗ-ನರಕಗಳ ಕತೆಗಳನ್ನು ಕೇಳುತ್ತಿದ್ದೆವು. ಸ್ವರ್ಗವಂತೂ ನಮಗೆ ಹೊಲದ ಹೊರಗೆ ಕಾಣಸಿಗುವ ಭಾಗ್ಯ ಕಡಿಮೆ ಇತ್ತು. ಆದರೆ ನರಕದ ಕಂಬಗಳು ಪ್ರತಿಯೊಂದು ಸ್ಥಳದಲ್ಲಿಯೂ ನಿಂತಿರುವುದು ನಮ್ಮ ಕಣ್ಣಿಗೆ ಬೀಳುತ್ತಿತ್ತು. ಎಲ್ಲಕ್ಕೂ ದೊಡ್ಡ ನರಕ ಶಾಲೆ. ಮತ್ತು ಎಂದಾದರೊಮ್ಮೆ ಆ ನರಕದಿಂದ ಬಿಡುವು ದೊರೆತರೆ ಹೊಲದಲ್ಲಿ ಬುತ್ತಿ ಒಯ್ದು ಮುಟ್ಟಿಸುವ ಈ ಇನ್ನೊಂದು ನರಕವು ಇದುರಿಗೆ ಬಂದು ಬಿಡುತ್ತಿತ್ತು. ನಮ್ಮ ದಾರಿಯ ಪ್ರತಿಯೊಂದು ತಿರುವಿನಲ್ಲೂ ನರಕದ ದರ್ಶನವಾಗುವಂತೆ ನಮಗೆ ಭಾಸವಾಗುತ್ತಿತ್ತು. ಈ ಮಾರ್ಗವೆಂಬ ಭಯಸಾಗರವನ್ನು ದಾಟಬೇಕಾದ ಕಾರಣದಿಂದಲೇ ಬಹುಶಃ ನಮಗೆ ನರಕದ- ಅನುಭವವಾಗುತ್ತಿತ್ತೋ ಇಲ್ಲ

ಹೊಲಕ್ಕೆ ಬುತ್ತಿ ಮುಟ್ಟಿಸಬೇಕಾದ ಕರ್ತವ್ಯದಿಂದಲೋ ತಿಳಿಯದು. ಒಟ್ಟಿನಲ್ಲಿ ಈ ವಿಷಯವಾಗಿ ದೃಢವಾಗಿ ಏನನ್ನೂ ಹೇಳಲಾಗುವುದಿಲ್ಲ. ಆದರೆ ನನಗೆ ಇಷ್ಟಂತೂ ಗೊತ್ತು. ಹೊಲವು ಸ್ವರ್ಗವಾಗಿತ್ತು, ಮತ್ತು ಅಲ್ಲಿಗೆ ಹೋಗಿ ಬುತ್ತಿ ಒಯ್ದು ಮುಟ್ಟಿಸುವ ಈ ಏರ್ಪಾಟು ನಮಗೆ ನರಕಕ್ಕೆ ಸಮಾನವಾಗಿತ್ತು. ಮತ್ತು ಆ ಹೆದ್ದಾರಿಯ ಭಾಗ ಭಯಸಾಗರವಾಗಿತ್ತು. ಚಳಿಗಾಲದಲ್ಲಿ ಒಂದುದಿನ ನಾವಿಬ್ಬರೂ ಅಕ್ಕ ತಮ್ಮ, ಮಧ್ಯಾಹ್ನದ ಬುತ್ತಿ ತೆಗೆದುಕೊಂಡು ಹೊಲದ ಕಡೆಗೆ ಹೊರಟೆವು. ಬಿಸಿಲು ಹಗುರಾಗಿತ್ತು. ನಾವು ನಡೆಯುತ್ತಿರುವಾಗಲೇ ಚಳಿಗಾಲದ ಬಿಸಿಲಲ್ಲಿ ನಿದ್ದೆಯ ಸುಖವನ್ನು ಪಡೆಯುತ್ತಿದ್ದೆವು; ಆದರೂ ಮನಸ್ಸಿನ ಒಳಗೇ ರಸ್ತೆ ದಾಟುವ ಭಯವು ಕೊರೆಯುತ್ತಿತ್ತು.

ನಾವು ಭಯವನ್ನು ಹತ್ತಿಕ್ಕುವ ಒಂದು ಉಪಾಯವನ್ನು ಯೋಚಿಸಿದೆವು. ನನ್ನ ಅಕ್ಕ ನನಗೆ ಒಂದು ಕತೆಯನ್ನು ಹೇಳಲು ಆರಂಭಿಸಿದಳು. "ಒಬ್ಬ ರಾಜನಿದ್ದ, ಅವನ ರಾಣಿ ಸತ್ತುಹೋದಳು. ಸಾಯುವ ಕಾಲಕ್ಕೆ ಆಕೆ ರಾಜನಿಗೆ ಅಂದಳು, 'ನೀನು ನನಗೆ ಒಂದು ವಚನ ಕೊಡು!' ರಾಜನು ಕೇಳಿದ—ಏನು?". . .

ನಾನು ಕತೆಯಿಂದ ಲಕ್ಷ್ಯ ಹಾರಿಸಿ ಹಿಂದೆ ಊರಿನ ಕಡೆಗೆ ನೋಡಿದೆನು . . . ನಮ್ಮ ರಸ್ತೆಯ ಮೇಲಿಂದ ಹೋಗುವ ಯಾರಾದರೂ ದಾರಿಕಾರ ಬರುತ್ತಿರಬಹುದೋ ಎಂದು.

"ನೀನು ಕೇಳುತ್ತಿಲ್ಲವೇ ವೀರ?" ನನ್ನ ಹೆಗಲನ್ನು ಜೋರಾಗಿ ಅಲ್ಲಾಡಿಸಿ ಅಕ್ಕ ಕೇಳಿದಳು.

"ಇಲ್ಲ, ಕೇಳುತ್ತಲೇ ಇದ್ದೇನೆ." ನಾನು ತಮ್ಮಂದಿರ ತುಂಟತನದಿಂದಲೇ ಉತ್ತರವಿತ್ತೆ.

"ಒಳ್ಳೇದು, ಆ ರಾಣಿಯು ಸಾಯಹತ್ತಿದಾಗ ಆ ರಾಜನನ್ನು ಹತ್ತಿರ ಕರೆದು ಅಂದಳು, 'ನೀನು ನನಗೆ ವಚನಕೊಡು.' ರಾಜ ಕೇಳಿದ, 'ಯಾವ ವಚನ?" ರಾಣಿ ಅಂದಳು, 'ನೀನು ಇನ್ನೊಂದು ಮದುವೆ ಮಾಡಿಕೊಳ್ಳಬೇಡ.' ನಿಜವಾಗಿಯೂ ನಿನಗೆ ಈ ಮಾತು ಹೇಳಲು ಮರತೇಹೋಗಿದ್ದೆ. ರಾಣಿಗೆ ಇಬ್ಬರು ಹುಡುಗರೂ ಒಬ್ಬ ಹುಡುಗಿಯೂ ಇದ್ದರು."

ನಮಗೆ ರಾಜಾ ರಾಣಿ ನಮ್ಮ ತಂದೆ-ತಾಯಿಗಳಂತೆಯೇ ಅನಿಸುತ್ತಿದ್ದರು. ನಮ್ಮ ತಾಯಿ ತೀರುತ್ತಿದ್ದರೆ ಅವಳು ತಂದೆಗೆ ಇದೇ ವಚನ ಕೊಡಲಿಕ್ಕೆ ಹೇಳುತ್ತಿದ್ದಳು. . . ಈ ಕಲ್ಪನೆಯು ನಮ್ಮ ಅಚೇತನ ಮನಸ್ಸಿನಲ್ಲಿ ಕೆಲಸಮಾಡುತ್ತಿದ್ದಿರಬೇಕು. ನನಗಂತೂ ಅನಿಸಿತ್ತು. ರಾಣಿಯ ಮಗಳು ನನ್ನ ಅಕ್ಕ, ಮತ್ತು ರಾಣಿಯ ಮಗ ನಾನೇ.

ನನ್ನ ಅಕ್ಕ ಊರಿನ ಕಡೆಗೆ ನೋಡುತ್ತಿದ್ದಳು. "ಮುಂದಿನ ಕತೆಯನ್ನು ಹೇಳು."—ನಾನು ಅವಳೊಂದಿಗೆ ಮೊದಲಿನಂತೆಯೇ ಗಡುಸಾದ ದನಿಯಲ್ಲಿ ಅಂದೆನು.

"ರಾಣಿ ಅಂದಳು—ನನ್ನ ಮಕ್ಕಳಿಗೆ ಮಲತಾಯಿ ದುಃಖ ಕೊಡುವಳು." ನನ್ನ ಅಕ್ಕ ಇನ್ನೂ ಹೆಚ್ಚಿನ ಸವಿಯಾದ ದನಿಯಲ್ಲಿ ಇನ್ನೂ ಹೆಚ್ಚು ಹೆಂಗಸಾಗಿ ಹೇಳಿದಳು—"ಇದಕ್ಕಾಗಿಯೇ ಆಕೆ ರಾಜನಿಂದ ವಚನ ಬೇಡಿದ್ದಳು. ರಾಜ ಅಂದನು-ಒಳ್ಳೇದು ನಾನು ವಚನ ಕೊಡುತ್ತೇನೆ!"

ಹೀಗೆ ಅನಿಸುತ್ತಿತ್ತು. ರಾಜ ಹೀಗೆ ವಚನವನ್ನು ನೀಡದಿದ್ದರೆ ರಾಣಿ ಸಾಯಲಿಕ್ಕೇ ಸಿದ್ಧಳಾಗುತ್ತಿದ್ದಿಲ್ಲ.

"ಹೂಂ"

ನಮ್ಮಿಬ್ಬರಿಗೂ ಗೊತ್ತು. ಹಗಲ ಹೊತ್ತಿಗೆ ಕತೆ ಹೇಳುವದರಿಂದ ಹಾದಿಕಾರರು ಹಾದಿ ನಡೆದದ್ದನ್ನೇ ಮರೆತುಬಿಡುತ್ತಾರೆ. ಆದರೂ ನಾವು ಒಬ್ಬರಿಗೊಬ್ಬರು ಎಚ್ಚರಿಕೆ ಕೊಡಲಿಲ್ಲ. ಮತ್ತು ಈ ವಿಚಾರಕ್ಕೆ ನಮ್ಮ ಮನಸ್ಸಿನ ಮೇಲೆ ಪ್ರಭಾವ ಬೀರಲು ಬಿಡಲಿಲ್ಲ.

"ಆದರೆ ರಾಜನು ಕೂಡಲೇ ಲಗುಬಗೆಯಿಂದ ಎರಡನೆಯ ಮದುವೆ ಮಾಡಿಕೊಂಡನು."

"ಹೂಂ"

ಹಿಂದಿನ ಮುರುವಿನಲ್ಲಿ ಒಬ್ಬ ಮನುಷ್ಯ ಬರುತ್ತಿರುವದು ನಮಗೆ ಕಂಡಿತು. ನಾವಿಬ್ಬರೂ ಸಮಾಧಾನದ ಉಸಿರೆಳೆದೆವು ಮತ್ತು ಅವನನ್ನು ನಮ್ಮಸಂಗಡ ಸೇರಿಸಿಕೊಳ್ಳಲು ಸಿದ್ಧರಾದೆವು. ಆದರೆ ಆ ಮನುಷ್ಯ ಯಾವದೋ ಬೇರೆ ನಿಟ್ಟಿನಲ್ಲಿ ಹೋಗುತ್ತಿದ್ದ . . . ಆತ ನಮ್ಮ ಕಡೆಗೆ ತಿರುಗಲೇ ಇಲ್ಲ.

ಆದರೆ ಇದರಿಂದ ನಮ್ಮ ಉದ್ದೇಶ ಸಾಧಿಸಲಾಗಲಿಲ್ಲ. ನಮ್ಮ ಕಲ್ಪನೆ ಮತ್ತು ಮಾತುಕತೆಯಲ್ಲಿ ಮಗ್ನರಾಗಿ ಹೋಗಬೇಕು. ಅನಾಯಾಸವಾಗಿ ರಸ್ತೆಯನ್ನು ಪಾರು ಮಾಡುವಂತೆ ಆಗಬೇಕು. ಆದರೆ ಈಗ ರಸ್ತೆ ಒಂದು ಮುರುವಿನ ಅಂತರಕ್ಕೆ ಉಳಿದಾಗ ನಮ್ಮ ಕತೆಯೂ ಭಯಚಕಿತವಾಗಿ ನಿಂತುಹೋಯಿತು. ಜತೆಗೆ ಯಾವನೊಬ್ಬ ಹಿರಿಯ ಸಂಗಾತಿ ಬರುವನೆಂಬ ಆಸೆಯೂ ಹರಿದುಹೋಯಿತು. ನಾವಿಬ್ಬರೂ ಬೆಚ್ಚಿ ಬೆರಗಾಗಿ ನಿಂತುಬಿಟ್ಟೆವು.

ಹತ್ತಿಪ್ಪತ್ತು ಹೆಜ್ಜೆ ಮುಂದೆ ನಡೆದೊಡನೆ ನಮ್ಮ ಹೆದರಿಕೆ ಇನ್ನೂ ಹೆಚ್ಚಾಯಿತು. ರಸ್ತೆಯ ಒಂದು ಬದಿಗೆ ಕಪ್ಪುರೇಶಿಮೆಯ ವಾಸ್ಕೋಟು ಮತ್ತು ಪಠಾಣರ ದಂಥ ಸೈಲು ಸಲವಾರು ತೊಟ್ಟ ಒಬ್ಬ ಮನುಷ್ಯ ಒರಗಿದ್ದನು.

"ಇಕೋ ನೋಡು ಬೇಬಿ! ಪಠಾಣ ಬಿದ್ದಿದ್ದಾನೆ."

ಆ ಮನುಷ್ಯ ಮಗ್ಗಲು ಮುರಿದನು.

"ಇವನಂತೂ ಹೊರಳಾಡುತ್ತಿದ್ದಾನೆ. ಅಲ್ಲಾಡುತ್ತಿದ್ದಾನೆ. ಎಚ್ಚರವೇ ಇರಬೇಕು." ನನ್ನ ಅಕ್ಕ ಗಾಬರಿಯಾಗಿ ಹೇಳಿದಳು, "ಈಗೇನು ಮಾಡುವಾ?



# ದೊಡ್ಡ ಮಂದಿ

ಅರೆ ಎಚ್ಚತ್ತ ದ್ರೌಪದಿಯು ಅಂದಳು,—ಅಂದಳು ಅಲ್ಲ—ಅವಳ ಬಾಯಿಂದ ಹೊರಟಿತು, “ದೊಡ್ಡ ಮಂದಿ!” ಹಾರನ್‌ನಿನ ಕರ್ಕಶ ಸದ್ದಿನಿಂದ ಅವಳ ಕಿವಿಯು ಹರಿಯಹತ್ತಿದಂತೆ ಇತ್ತು. ಈ ತನಕ ಹಾರ್ನಿನ ಎಷ್ಟು ಸದ್ದುಗಳು ಅವಳ ಕಿವಿಗೆ ಬಿದ್ದಿದ್ದವೋ ಅವುಗಳಿಗಿಂತ ಈ ಸದ್ದು ಹೆಚ್ಚು ಕರ್ಕಶವಾಗಿತ್ತು. “ಟ್ಯಾಕ್ಸಿಯ ಗಣೇಶನಲ್ಲ, ಚಾನಣ ಶಾಹಜಿ ಇರಬೇಕು.” ತನ್ನ ಗಂಡ ಭಗತರಾಮನ ಬಾಯಿಯಿಂದ ಚಾನಣಶಾಹನ ಹೆಸರು ಕೇಳಿ, ದ್ರೌಪದಿಯು ತುಸು ನಾಚಿಕೆಯಿಂದ ಅಂದಳು: “ಅಯ್ಯೋ ಶಾಹಜಿಯವರು ಇದನ್ನು ಕೇಳಿರಬಹುದೇ.”

ಅದೇ ಮೂರು-ನಾಲ್ಕು ದಿನಗಳ ಹಿಂದೆ ನಸುಕಿನಲ್ಲೇ ಗಣೇಶನ ಟ್ಯಾಕ್ಸಿಯ ಹಾರ್ನ ಕೇಳಿ ದ್ರೌಪದಿಯ ಬಾಯಿಯಿಂದ ಹೊರಟಿತ್ತು “ಈ ದೊಡ್ಡ ಮಂದಿಗೆ ರಾತ್ರಿ ನಿದ್ದೆಯೇ ಬರುವುದಿಲ್ಲವೇನೋ!” ಆಗ ಭಗತರಾಮ ಅವಳಿಗೆ ತಿಳಿಹೇಳಿದನು. “ಈ ಬಡ ಟ್ಯಾಕ್ಸಿಯವನ ಮೇಲೆ ಮೊಕದ್ದಮೆ ಹಾಕಲಾಗಿದೆ. ಬಡವ ಶರಣಾರ್ಥಿಯಾಗಿದ್ದಾನೆ. ಸಿಫಾರಸಿಗಾಗಿ ಕೇಳುತ್ತಿದ್ದಾನೆ.” ಇದಕ್ಕೆ ದ್ರೌಪದಿಯು ಇನ್ನೂ ದನಿ ಎತ್ತರಿಸಿ ಅಂದಳು, “ದೊಡ್ಡ ಮಂದಿನ ಕೇಳಲಿ!” ಗಣೇಶನು ಈ ಮಾತು ಕೇಳಿದ್ದನು. ಆದರೆ ಬಡವನಿಗೆ ಅಗತ್ಯವಿತ್ತು. ಏನು ಹೇಳುವನು? ಇಂದು ಚಾನಣ ಶಾಹನ ಬಗೆಗಿನ ಭಿಡೆ ಭಗತರಾಮನನ್ನು ದ್ರೌಪದಿಯ ಭರ್ತ್ಸನೆಯಿಂದ ಕಾಪಾಡಿತು. ಮೋಟರನ್ನು ಬಾಗಿಲಲ್ಲಿ ನಿಲ್ಲಿಸಿ ಚಾನಣ ಶಾಹ ನೇರವಾಗಿ ಭಗತರಾಮನು ಮಲಗುವ ಕೋಣೆಯಲ್ಲಿಯೇ ಬಂದು ಹೊಕ್ಕನು. ದ್ರೌಪದಿಯು “ಬನ್ನಿ ಸ್ವಾಗತ” ಎಂದು ಕುರ್ಚಿಯನ್ನು ಮುಂದೆ ಇಟ್ಟಳು.

ಚುಟಕಿ ಬಾರಿಸುತ್ತ ನಿಂತಲ್ಲಿಯೇ ಚಾನಣ ಶಾಹ ಕೇಳಿದನು, “ಲಾಲಾಜೀ ತಯಾರಾಗಿದ್ದೀರಾ?”

“ಹೌದು ಸ್ವಾಮಿ, ಆಯಿತು. ಔಷಧದ ಸೀಸೆಯನ್ನು ತೆಗೆದುಕೊಳ್ಳುವೆನು. ಯಾರಿಗೆ ಗೊತ್ತು, ಸಂಜೆ ತಿರುಗಿ ಬರಲು ತಡವಾದರೆ. . .ಮತ್ತು. . .” ಭಗತರಾಮನ ಮಾತನ್ನು ನಡುವೆಯೇ ತಡೆದು ಚಾನಣ ಶಾಹ ಅಂದನು, “ಇಲ್ರೀ, ಈಗಲೇ ತಿರುಗಿ ಬರೋಣ. ಹೊಸ ಮೋಟರು, ಎರಡುವರೆ ತಾಸುಗಳಲ್ಲಿ ಅಂಬಾಲಾ; ಅಲ್ಲಿ ಒಂದು ಗಂಟೆ ಕಾಲ ತಡೆಯುವುದು, ಮತ್ತೆ ಎರಡುವರೆ ಗಂಟೆಯಲ್ಲಿ ದಿಲ್ಲಿ; ಬರೇ ಆರು ಗಂಟೆಗಳ ಮಾತು. ಈಗ ಆರು ಗಂಟೆಯಾಯಿತು. ಹತ್ತು, ಹದಿನೈದು ನಿಮಿಷಗಳಲ್ಲಿ ಹೊರಟರೆ ಹನ್ನೆರಡೂಕಾಲಿನೊಳಗೆ ತಿರುಗಿ ಬರುವೆವು.”

"ಇಲ್ಲ ಶಾಹಜೀ, ಶರಣಾರ್ಥಿ ಶಿಬಿರದಲ್ಲಿ ಕಡಿಮೆಯೆಂದರೆ ನನಗೆ ಎರಡು-ಎರಡುವರೆ ಗಂಟೆ ಅಗತ್ಯವಾಗಿ ಹಿಡಿಯುವವು."

"ನಡೆಯಿರಿ, ಹೆಚ್ಚೆಂದರೆ ಮೂರು ಹೊಡೆಯಬಹುದು. ಸಂಜೆಗೂ ಮುಂಚೆ ತಿರುಗಿ ಬಂದೇ ಬಿಡುವೆವು. ಏಳಿರಿ, ತ್ವರೆಮಾಡಿರಿ. ಎಷ್ಟು ಲಗು ಹೋಗುವೆವೋ ಅಷ್ಟು ಲಗು ತಿರುಗಿ ಬರಬಹುದು." ದ್ರೌಪದಿ ಅಂದಳು, "ತಡವಾಗುವ ಭಯ ಇದ್ದರೆ, ರಾತ್ರಿ ಅಲ್ಲೇ ಉಳಿಯಬೇಕಾಗಿ ಬಂದರೆ ಸಂಗಡ ಉಣ್ಣೆಯಬಟ್ಟೆ ಇಲ್ಲವೇ ಹಾಸಿಗೆ . . ."

ಚಾನಣ ಶಾಹ ದ್ರೌಪದಿಯು ಮಾತು ಮುಗಿಸುವುದರೊಳಗೆ ಭಗತರಾಮನ ಕೈಹಿಡಿದು ಅವನನ್ನು ಮಂಚದಿಂದ ಎಬ್ಬಿಸಿದನು. "ನಡೆಯಿರಿ, ಸಂಗಡ ಯಾವದೂ ವಸ್ತು ಒಯ್ಯುವ ಅಗತ್ಯವಿಲ್ಲ. ಇದೀಗ ತಿರುಗಿ ಬರುವೆವು. ಚಳಿ ಆದರೆ ಮೋಟಾರಿನಲ್ಲಿ ಕಂಬಳಿ ಬಿದ್ದಿದೆ. ಅದನ್ನು ಸುತ್ತಿಕೊಳ್ಳಿರಿ, ಮೂರು ಗಂಟೆಗೆ ನಿಮ್ಮನ್ನು ತಪ್ಪದೆ ಮನೆಗೆ ತಂದು ಮುಟ್ಟಿಸೋಣ."

ಭಗತರಾಮರು ಒಳ್ಳೇ ಸಮಾಧಾನದಿಂದ ಮೋಟಾರಿನ ಮಿದುವಾದ ಸೀಟಿನ ಮೇಲೆ ಹಾಯಾಗಿ ಕೂತರು ಮತ್ತು ಅಂದರು, "ದ್ರೌಪದಿಜೀ, ಕೆಲಸ-ಬೊಗಸೆಗಳ ಕಾರಣಾಂತರ ಯಾರೇ ಬಂದರೂ ಅವರಿಗೆ ಮೂರು ಗಂಟೆಯ ತನಕ ಸಮಯ ಕೊಡಬಹುದು."

ಚಾನಣಶಾಹನು ಭಗತರಾಮನ ಮೊಣಕಾಲ ಮೇಲೆ ಕಂಬಳಿಯನ್ನು ಒಗೆದು ಅಂದನು, "ಮುಗಿಯಿತು, ತಾವು ಡೆಪ್ಯೂಟಿಕಮಿಶನರ ಸಾಹೇಬರಿಗೆ ತಮ್ಮ ಮುಖ ತೋರಿಸಿದರಾಯಿತು. ನಮ್ಮ ಕೆಲಸ ಕೂಡಲೇ ಆದಂತೇನೆ ಎಂದು ತಿಳಿಯಿರಿ. ಆ ಮೇಲೆ ತಮಗೆ ಖುಶಿ ಕಂಡಲ್ಲಿ ಹೋಗುವಾ. ಗಾಡಿಯಲ್ಲಿ ಪೆಟ್ರೋಲು ಬಹಳವಿದೆ."

ಲಾಲಾ ಭಗತರಾಮರು ಶರಣಾರ್ಥಿಗಳ ಧುರೀಣರು. ನಸುಕಿನಿಂದ ಸಂಜೆಯ ತನಕವೂ ಅವರಲ್ಲಿಗೆ ಶರಣಾರ್ಥಿಗಳು ಬರುತ್ತಲೇ ಇರುತ್ತಾರೆ. ಅವರು ಎಲ್ಲರ ಮಾತನ್ನೂ ಸಹಾನುಭೂತಿಯಿಂದ ಕೇಳಿ ಅವರ ಕೆಲಸ ಮಾಡಿಸಿಕೊಡುವ ಪ್ರಯತ್ನ ಮಾಡುತ್ತಿದ್ದರು. ಹಾಗೆ ದ್ರೌಪದಿಯ ಸ್ವಭಾವವೂ ಒಳ್ಳೇ ಮಧುರವಾಗಿದೆ. ಅವಳ ಮನಸ್ಸೂ ಅನುಕಂಪೆಯಿಂದ ತುಂಬಿದೆ, ಆದರೆ ನಸುಕಿನಲ್ಲಿ ಏಳುವ ಮುಂಚೆ ಮತ್ತು ರಾತ್ರಿ ಮಲಗಿದನಂತರ ಯಾರು ಅವರ ಮನೆಯ ಬಾಗಿಲನ್ನು ತಟ್ಟುತ್ತಾರೋ ಅಂಥವರಿಂದ ಒಮ್ಮೊಮ್ಮೆ ಅವಳಿಗೆ ಬಹಳ ಬೇಸರ ಉಂಟಾಗುತ್ತದೆ.

ಮೋಟರು ಇನ್ನೂ ಕ್ವಾರ್ಟರದಿಂದ ಹೊರಗೆ ಹೊರಟಿಲ್ಲ. ಅಷ್ಟರಲ್ಲಿಯೇ ಒಬ್ಬ ಶರಣಾರ್ಥಿ ಲಾಲಾ ಭಗತರಾಮರನ್ನು ವಿಚಾರಿಸಿಕೊಂಡು ಬಂದ. ಲಾಲಾಜೀ ಚಾನಣಶಾಹರೊಂದಿಗೆ ಅಂಬಾಲಾಕ್ಕೆ ಹೋಗಿರುವರೆಂದು ದ್ರೌಪದಿಯು ತಿಳಿಸಿದಾಗ ಆ ಶರಣಾರ್ಥಿಯು ಬಡಬಡಿಸುತ್ತ ಹೊರಟುಹೋದನು.

"ದೊಡ್ಡ ಮಂದಿಯೊಂದಿಗೆ ಮಾತ್ರ ಕೂಡಲೇ ಹೊರಟು ಹೋಗುತ್ತಾರೆ. ಆದರೆ ಇಂದು ಅವರು ನನ್ನ ಸಂಗಡ ಕಸ್ಟೋಡಿಯನ್‌ರ ಕಡೆಗೆ ಹೋಗದಿದ್ದರೆ ಸಂಜೆಗೆ ನನ್ನ ಮನೆಯ ಪಾತ್ರೆ ಪದಾರ್ಥಗಳೆಲ್ಲಾ ಬೀದಿಯಲ್ಲಿ ಬಿದ್ದಿರುತ್ತವೆ."

ಅವನು ಹೋದೊಡನೆ ಇನ್ನೊಬ್ಬ ಶರಣಾರ್ಥಿಯು ಬಂದು ದೂರುಕೊಟ್ಟನು. "ನನ್ನ ಸಾಲ ಮಂಜೂರು ಮಾಡಿಸಲಾಗಿದೆ. ಆದರೆ ಅದನ್ನು ಪಡೆಯಲು ನನಗೆ ಜಾಮೀನು ಯಾರು ಕೊಡುವರು?"

"ನನ್ನ ಬದಲಿಯ ಕಾಗದ ಪತ್ರಗಳ ಮೇಲೆ ಈ ಹೊತ್ತು ಸಹಿಯಾಗುವವು. ಮನೆಯಂತೂ ಶರಣಾರ್ಥಿಗಳಾದ ಸಂಬಂಧಿಕರಿಂದ ತುಂಬಿಹೋಗಿದೆ. ತಾಯ್ತಂದೆ ಮುದುಕರು, ಮನೆಯವಳಿಗೆ ತುಂಬಿದ ಬಸುರು. ಯಾವ ಸ್ಥಳಕ್ಕೆ ನನ್ನನ್ನು ವರ್ಗಾಯಿಸಲಿರುವರೋ ಅಲ್ಲಿ ಉಳಿಯಲಿಕ್ಕೆ ಒಂದು ಡೇರೆಯ ವ್ಯವಸ್ಥೆಯೂ ಇರುವುದಿಲ್ಲ."

"ನಾನು ಪೇಶಾವರದಲ್ಲಿ ಎ.ಡಿ.ಎಂ. ಆಗಿದ್ದೆ. ಇಲ್ಲಿ ಗುಮಾಸ್ತೆಯ ಕೆಲಸ ಸಿಕ್ಕಿತು. ಈಗ ಅಲ್ಲಿಂದಲೂ ನನ್ನನ್ನು ತಳ್ಳುವ ಏರ್ಪಾಡು ನಡೆಯುತ್ತಿದೆ."

"ಅಕ್ಕಾಜೀ, ನೂರಾ ಅರವತ್ತು ಬಂಗಲೆಗಳ ಮಾಲಿಕನಿಗೆ ಇಲ್ಲಿ ಯಾವದೇ ಮಳಿಗೆಯ ಜಗಲಿಯ ಮೇಲೂ ಠಿಕಾಣೆ ಇಲ್ಲದಿದ್ದರೆ ತಾವೇ ಹೇಳಿರಿ, ಎಲ್ಲಿ ತಲೆ ಮರೆಯಿಸುವದು?"

ದ್ರೌಪದಿಯು ಇಂದು ಎಲ್ಲ ಶರಣಾರ್ಥಿಗಳ ಈ ಕೆಲಸಗಳನ್ನೆಲ್ಲ ಕೇಳಿ ಅವರಿಗೆ ಮೂರು ಘಂಟೆಗೆ ಬರಲು ವೇಳೆ ಕೊಡುತ್ತ ಹೋದಳು.

ಮೃದುವಾದ ಕೋಮಲ ನೀರಹನಿಗಳು ಹರಿದು ಹರಿದು ಕಲ್ಲಿನ ಬಂಡೆಯಲ್ಲಿಯೂ ತಮ್ಮ ಸ್ಥಾನ ಮಾಡಿಕೊಳ್ಳುತ್ತವೆ. ದ್ರೌಪದಿಯ ಎದೆಯಲ್ಲಿ ಒಬ್ಬ ತಾಯಿಯ ಮನಸ್ಸು ಇತ್ತು. "ಗಂಡ ಹೋದ, ಮಗ ಹೋದ, ಈಗ ಮರ್ಯಾದೆಯೂ ಹೋಗಹತ್ತಿದೆ" ಎಂದು ನಡುಪ್ರಾಯದ ಒಬ್ಬ ಶರಣಾರ್ಥಿ ಹೆಂಗಸಿನ ಬಾಯಿಂದ ಬಂದ ಈ ಮಾತು ಕೇಳಿ ದ್ರೌಪದಿಯು ಅವಳಿಗೆ ಮೂರು ಘಂಟೆಗೆ ಬರಲು ಹೇಳುವವಳಿದ್ದಳು. ಅಷ್ಟಕ್ಕೆ ಅವಳು ತನ್ನ ವ್ಯಥೆಯನ್ನು ತೋಡಿಕೊಳ್ಳಲು ಆರಂಭಿಸಿದ್ದಳು. ಕಣ್ಣಿಗೆ ನಾಲಿಗೆ ಇರುವುದಿಲ್ಲ. ಆದರೆ ಅವುಗಳಿಗೆ ಭಾಷೆ ಇರುತ್ತದೆ. ಆ ದುಃಖಿತ ಹೆಂಗಸಿನ ವೇದನೆ ತುಂಬಿದ ಕಥೆಯು ಅವಳ ನಾಲಿಗೆಯಿಂದ ಹೊರಬೀಳುತ್ತಿದ್ದಂತೆ ದ್ರೌಪದಿ ಕಣ್ಣುಗಳಲ್ಲಿ ತೋಡಿಕೊಂಡಂತೆ ಇತ್ತು. ದ್ರೌಪದಿಯು ಆ ಕಥೆಯನ್ನು ಕೇಳುವದರಲ್ಲಿ ತಲ್ಲೀನಳಾಗಿಬಿಟ್ಟಳು. ಇತರ ಜನಕ್ಕೆ ಮೂರು ಘಂಟೆಯ ವೇಳೆ ಕೊಡಲಿಕ್ಕೂ ಅವಳಿಗೆ ನೆನಪು ಉಳಿಯಲಿಲ್ಲ. ಇದೇ ಸಮಯ ಇನ್ನೊಬ್ಬ ಹೆಂಗಸು ಕಣ್ಣಿಗೆ ಬಿದ್ದಳು. ಆಕೆ ತನ್ನ ಬೆಳ್ಳಗಿನ ಅಸ್ಪೃಶ್ಯ ಶರೀರವನ್ನು ಹರಿದು ಚಿಂದಿಯಾದ ಹೊಲಸು ವಲ್ಲಿಯಿಂದ ಬಹಳ ಕಷ್ಟದಿಂದ ಮುಚ್ಚಿ

ಕೊಂಡಿದ್ದಳು. ನೆಲದಲ್ಲಿ ನಟ್ಟ ದಿಟ್ಟಿಯಿಟ್ಟು ಅವಳು ಬಾಗಿಲ ಇದುರಿಗೆ ಬಂದಳು. ಆಗ ಹೊಸ್ತಿಲಲ್ಲಿಯೇ ಒಬ್ಬ ಶರಣಾರ್ಥಿಯ ತಲೆ ಅವಳ ಪಕ್ಕೆಲುಬಿಗೆ ಜಪ್ಪಿತು. ಶರಣಾರ್ಥಿ ತನ್ನದೇ ಯೋಚನೆಯಲ್ಲಿ ಮುಳುಗಿದ್ದನು. ಹೆಂಗಸು ಧಡ್ಡನೆ ಕುಸಿದು ಬಿದ್ದಳು. ಅವಳು ಬಿದ್ದ ಸದ್ದಿನಿಂದಲೇ ದ್ರೌಪದಿಗೆ ಅವಳು ಅಲ್ಲಿ ಇದ್ದ ಅರಿವಾಯಿತು. ಮೊದಲು ಬಂದ ಶರಣಾರ್ಥಿ ಹೆಂಗಸಿನ ಸಹಾಯದಿಂದ ದ್ರೌಪದಿಯು ಅವಳನ್ನು ಹೊರಗಿನ ಕೋಣೆಯಲ್ಲಿ ಹಾಸಿದ್ದ ಮಾಸಿದ, ಮಂದಿಯ ಚಪ್ಪಲಿಗಳ ಮಣ್ಣಿನಿಂದ ಮುದ್ದೆಯಾದ ಜಮಖಾನದ ಮೇಲೆ ಮಲಗಿಸಿದಳು. ಕೋಣೆಯಲ್ಲಿ ಕುಳಿತಿದ್ದ ಇತರ ಜನಕ್ಕೆ ದ್ರೌಪದಿಯು "ಮೂರು ಘಂಟೆಗೆ ಬನ್ನಿರಿ"—ಎಂದು ಎಬ್ಬಿಸಿದಳು. ಕುಸಿದು ಬಿದ್ದ ಆ ಹೆಂಗಸಿನ ಮೂರ್ಛೆಯನ್ನು ಕಂಡು ಅವಳ ಪ್ರಜ್ಞೆಯೇ ಇಲ್ಲದಂತೆ ಆಯಿತು. ಅವಳ ಮೈ ಬೆವರಿತು. ಅವಳ ಕೈಕಾಲೇ ಹೋದವು. ಮೊದಲಿನ ಶರಣಾರ್ಥಿ ಹೆಂಗಸು ಎದ್ದು ಬಾಗಿಲನ್ನು ಒಳಗಿಂದ ಹಾಕಿದಳು. ಹೆದರಿದ ದ್ರೌಪದಿಯು ಅದೇ ಬಾಗಿಲ ಸಂದಿನೊಳಗಿಂದ ಹೊರಗೆ ಇಣಿಕಿದ್ದೇ ಅವಳ ಕಿವಿಗೆ ಹಾರ್ನಿನ ಸದ್ದು ಬಿತ್ತು. ಮೂರು ಹೊಡೆದಿತ್ತು ಓ! ಇವನು ಗಣೇಶಾ! ದೊಡ್ಡ ಮಂದಿ! ಮೊದಲಿನ ಶಬ್ದ ದ್ರೌಪದಿಯ ಬಾಯಿಯಿಂದ ಅರಿವಿಲ್ಲದೆ ಹೊರಟಿತು. ಆದರೆ ಅವಳ ಮನಸ್ಸು ತುಸು ಚಿಂತೆಯಲ್ಲಿ ಮುಳುಗಿತ್ತು. ಅವಳು ಗಣೇಶನನ್ನು ಕರೆದಳು. ಅವನಿಗೆ ಕೆಲಸ ಹೇಳಲು ದ್ರೌಪದಿಗೆ ಸಂಕೋಚವೆನಿಸುತ್ತಿತ್ತು. ಆದರೆ ಬೇರೆ ಉಪಾಯವಿದ್ದಿಲ್ಲ.

"ಕರೋಲಬಾಗ ಗುರುದ್ವಾರಾರೋಡಿಗೆ ಹೋಗಿ ಲೇಡಿಡಾಕ್ಟರ ಕರತಾರಕೌರರ ಹೆಸರು ಕೇಳು."

ಗಣೇಶನಿಗೆ ಇಡಿಯ ದಿಲ್ಲಿಯ ಪರಿಚಯವಿತ್ತು. ದ್ರೌಪದಿಯ ಬಾಯಿಂದ ಮಾತು ಹೊರಟಿದ್ದೇ ಆತ ಟ್ಯಾಕ್ಸಿ ತೆಗೆದುಕೊಂಡು ಹೊರಟುಹೋದನು.

ತಿರುಗಿ ಬಂದು ಪಟಾರದಲ್ಲಿ ಹೊಕ್ಕುವಾಗಲೆ ಗಣೇಶ ದೊಡ್ಡದಾಗಿ ಹಾರ್ನ ಮಾಡಿದನು. ಆದರೆ ಈ ಸಮಯ ದ್ರೌಪದಿಯ ಕಿವಿಯಲ್ಲಿ ಶರಣಾರ್ಥಿ ಹೆಂಗಸಿನ ನರಳಿಕೆಯು "ಅಯ್ಯಯ್ಯೋ" ಮತ್ತು ಅಳುತ್ತಿರುವ ಹೊಸ ಹುಟ್ಟಿದ ಶಿಶುವಿನ ಚೀತ್ಕಾರಗಳ ಹೊರತು ಬೇರೆ ಯಾವ ಸದ್ದೂ ಕೇಳಿಸುತ್ತಿದ್ದಿಲ್ಲ. ಲೇಡಿ ಡಾಕ್ಟರಳನ್ನು ಕಂಡು ದ್ರೌಪದಿಯು ಸುಖದ ನಿಟ್ಟುಸಿರು ಎಳೆದಳು. ಬಾಣಂತಿಯ ಸ್ಥಿತಿಯನ್ನು ಪರೀಕ್ಷಿಸಿ ಕರತಾರಕೌರ ದ್ರೌಪದಿಯ ಪ್ರಶಂಸೆ ಮಾಡಿದಳು. "ಟ್ಯಾಕ್ಸಿಯವನು ಹೋದಮೇಲೆ ನನಗೆ ಜ್ಞಾಪಕಕ್ಕೆ ಬಂತು. ಇಲ್ಲವಾದರೆ ತಮಗೆ ಟೆಲಿಫೋನನ್ನೆ ಮಾಡಿಸುತ್ತಿದ್ದೆ. ಹಿಂಮೊಮ್ಮೆ ತಾವು ತಮ್ಮ ನಂಬರು ನೋಟು ಮಾಡಿಸಿದ್ದಿರಿ." ದ್ರೌಪದಿಯ ಮಾತು ಕೇಳಿ ಲೇಡಿ ಡಾಕ್ಟರ ಅಂದಳು: "ಸರಿ, ಅದು ಘಮಂಡಸಿಂಹರ ನಂಬರು. ನನಗೆ ಯಾವುದಾದರೂ ಸಂದೇಶವಿದ್ದರೆ ಅವರು ತಿಳಿಸುವುದಿಲ್ಲ.

ರೊಕ್ಕ ಉಳ್ಳವರು! ತಮ್ಮ ಆಪ್ತೇಷ್ಟರ ಕೆಲಸವೇನಾದರೂ ಇದ್ದರೆ ಕೂಡಲೇ ಆಳನ್ನು ಕಳುಹಿಸುತ್ತಾರೆ!"

"ಸಾವುಕಾರರು! ಇಷ್ಟೇ ಹಣದ ಗರ್ವ?" ದ್ರೌಪದಿ ಅಂದಳು. ಅವಳ ಸಹಾನುಭೂತಿಯನ್ನು ಕಂಡು ಲೇಡಿ ಡಾಕ್ಟರು ಶರಣಾರ್ಥಿ ಬಾಣಂತಿಯ ಹೆಸರು ವಿಳಾಸ ಇತ್ಯಾದಿಗಳನ್ನು ಕೇಳಿದಳು.

ದ್ರೌಪದಿಯು ಎಲ್ಲ ಕತೆಯನ್ನೂ ಹೇಳಿ ಅಂದಳು, "ನಾವು ಇನ್ನೂ ಅವಳ ಹೆಸರು-ಗಿಸರು ಏನೂ ಕೇಳಿಲ್ಲ. ಸ್ವಲ್ಪ ಗುಣವಾಗಲಿ. ಪುಣ್ಯಕ್ಕೆ ಎಲ್ಲಾ ರಸ್ತೆಯಲ್ಲಿಯೇ . . ." "ಅಚ್ಛಾ ದ್ರೌಪದಿಬೆನ್. ನನಗೆ ತಮ್ಮಲ್ಲಿಗೆ ನನ್ನ ದುಃಖ ತೋಡಿಕೊಳ್ಳಲಿಕ್ಕೂ ಬರಲೇ ಬೇಕಿತ್ತು. ಲಾಲಾಜೀ, ಎಲ್ಲಿ ಇದ್ದಾರೆ?"

"ಏಕೆ? ಏನು ಸಮಾಚಾರ? ಅವರು ಅಂಬಾಲಾಕ್ಕೆ ಹೋಗಿದ್ದಾರೆ. ಇದೀಗ ತಿರುಗಿ ಬರುವವರಿದ್ದಾರೆ!"

"ಸಮಾಚಾರವೇನು ಹೇಳಲಿ? ಅಕ್ಕಾಜೀ, ನಾನು ಕೆಲಸಮಾಡುತ್ತಿರುವ ಗ್ಯಾರೇಜಿನಲ್ಲಿ ಎರಡು ಸಾವಿರ ರೂಪಾಯಿ ಹಾಕಿ ಪಾರ್ಟಿಶನ್ ಮಾಡಿಸಿದೆ. ಹಗಲು ಅಲ್ಲಿಯೇ ಕೆಲಸಮಾಡುತ್ತೇನೆ. ರಾತ್ರಿ ಅಲ್ಲೇ ಮಲಗುತ್ತೇನೆ. ನನಗೀಗ ಗೊತ್ತಾಗಿದೆ, ನನ್ನ ಆ ಗ್ಯಾರೇಜನ್ನು ಬಕ್ಷಿ ಖುಶಹಾಲಚಂದ ಅಡ್ವೋಕೇಟ ತನ್ನ ಹೆಸರಿಗೆ ಮಾಡಿಸಿಕೊಂಡುಬಿಟ್ಟದ್ದಾರಂತೆ."

"ಸೈಸೈ, ಸಾಹುಕಾರರಪ್ಪ!"

"ಹೌದು, ಅಕ್ಕಾಜೀ, ನನಗೆ ಈ ಚಿಂತೆಯಿಂದ ರಾತ್ರಿ ನಿದ್ದೆಯೇ ಬರವೊಲ್ಲದು."

ಮೂರು ಬಡಿಯಿತು. ಮೂರುವರೆ, ನಾಲ್ಕು ಮತ್ತೆ ಐದರ ವೇಳೆ ಆಯಿತು. ಲಾಲಾ ಭಗತರಾಮರ ಕ್ವಾರ್ಟರಿನ ಮುಂದೆ ಶರಣಾರ್ಥಿ ಜನರ ಸಂದಣಿ ಕೂಡಿತು. ಆದರೆ ಅವರು ಇನ್ನೂ ಅಂಬಾಲಾದಿಂದ ಮರಳಿರಲಿಲ್ಲ. "ಚಾನಣಶಾಹರ ಮನೆಗೆ ಸ್ವಲ್ಪ ಫೋನು ಮಾಡಿ ಕೇಳಿರಿ" ದ್ರೌಪದಿಯು ಹೇಳಿದಂತೆ ಅವಳ ಚಿಕ್ಕ ಹುಡುಗನು ಟೆಲಿಫೋನ ಡೈರೆಕ್ಟರಿಯಲ್ಲಿ ನೋಡುತ್ತ ಅಂದ, "ಅವರ ಮನೆಗೆ ಟೆಲಿಫೋನೇ ಇಲ್ಲ."

"ಇಲ್ಲ? ಲಾಲಾಜಿ ಸದ್ಯದಲ್ಲಿಯೇ ಪ್ರಯತ್ನಮಾಡಿ ಅವರಿಗೆ ಟೆಲಿಫೋನು ಹಚ್ಚಿಸಿದ್ದಾರೆ." ದ್ರೌಪದಿಯ ಮಾತು ಕೇಳಿ ಒಬ್ಬ ಶರಣಾರ್ಥಿ ಅಂದ, "ಲಾಲಾಜಿಯವರೂ ಓಡಾಡಿ ದೊಡ್ಡ ಮಂದಿಯು ಕೆಲಸ ಮಾಡಿ ಕೊಡುತ್ತಾರೆ!"

"ಸಾವುಕಾರರಪ್ಪ, ಅಧಿಕಾರ ನಡೆಯಿಸಲು ಬರುತ್ತಾರೆ. ಈ ದೊಡ್ಡ ಮಂದಿಯ ಹೊರತು ಯಾವ ಕೆಲಸವಾದರೂ ನಡೆಯುವಂತಿದೆಯೋ? ಈಗ ಚಾನಣಶಾಹರೇ ಲಾಲಾಜಿಯನ್ನು ತಮ್ಮ ಮೋಟರಿನಲ್ಲಿ ಕೂಡಿಸಿಕೊಂಡು ಅಂಬಾಲಾಕ್ಕೆ ಒಯ್ದಿದ್ದಾರೆ. ಕೆಲಸ ಅವರದೇ ಇತ್ತು. ಆದರೆ ಲಾಲಾಜಿಯವರಿಗೂ ಅಲ್ಲಿ ಶರಣಾರ್ಥಿಗಳ ಸ್ಥಿತಿಗತಿ ನೋಡಿ ಬರಲು ಹೋಗುವದಿತ್ತು. ಆರಾಮಾಗಿ ಹೋಗಿದ್ದಾರೆ, ಆರಾಮಾಗಿ

ಮೋಟರಿನಲ್ಲಿ ಬರಬಹುದು." ಮಾತು ಮುಗಿಸುತ್ತ ದ್ರೌಪದಿ ತನ್ನ ಮಗನಿಗೆ ಮತ್ತೆ ಕೂಗಿದಳು, "ಟೆಲಿಫೋನ ಎಕ್ಸಚೇಂಜಿನ ಕಚೇರಿಯಿಂದ ಲಾಲಾ ಚಾನಣಶಾಹರ ನಂಬರು ಗೊತ್ತುಮಾಡಿಕೊ."

"ತಾವು ಎಲ್ಲಿಂದ ಮಾತಾಡುತ್ತಿದ್ದೀರಿ?"

"ಲಾಲಾ ಚಾನಣಶಾಹರ ಮನೆಯಿಂದ."

"ಶಾಹಜೀ ಅಂಬಾಲಾಕ್ಕೆ ಹೋಗಿದ್ದರು."

"ಬಂದುಬಿಟ್ಟಿದ್ದಾರೆ."

"ಅವರಿಗೆ ಸ್ವಲ್ಪ ಟೆಲಿಫೋನು ಕೊಡಿರಿ."

"ತಾವು ಸ್ವಲ್ಪಹೊತ್ತಿನಮೇಲೆ ಫೋನ ಮಾಡಿರಿ. ಈ ಸಮಯ ಅವರು ಹೊರಗೆ ತೋಟದಲ್ಲಿ ಕೂತಿದ್ದಾರೆ. ಕೆಲವು ಅತಿಥಿಗಳು ಬಂದಿದ್ದಾರೆ. ಪಾರ್ಟಿ ನಡೆಯುತ್ತಿದೆ." .

"ಸರಿ ಅವರಿಗೆ ಕೇಳಿ ತಿಳಿಸಿರಿ. ಲಾಲಾ ಭಗತರಾಮಜೀ ಅವರೊಂದಿಗೆ ಹೋಗಿದ್ದರು. ಈಗ ಎಲ್ಲಿದ್ದಾರೆ?"

"ತಾವು ಯಾರು ಮಾತಾಡುತ್ತಿರುವವರು?"

"ದ್ರೌಪದಿ. ಲಾಲಾಜಿಯ ಮನೆಯಿಂದ."

"ಅಚ್ಛಾ. ಒಂದೆರಡು ಮಿನಿಟು ಕಾಯಿರಿ ಅಥವಾ ತಮ್ಮ ನಂಬರು ತಿಳಿಸಿರಿ."

ದ್ರೌಪದಿಯು ನಂಬರು ತಿಳಿಸಿ ಕರತಾರಕೌರಳೊಂದಿಗೆ ಮಾತಾಡತೊಡಗಿದಳು. ಅಷ್ಟರಲ್ಲಿ ಟೆಲಿಫೋನ ಗಂಟೆ ಬಾರಿಸಿತು.

"ಹುಲ್ಲೋ!"

"ಹೌದು."

"ಶಾಹಜಿ ಹೇಳುತ್ತಾರೆ, ಡೆಪ್ಯೂಟಿ ಕಮಿಶನರರ ಮನೆಯಿಂದಲೇ ಲಾಲಾಜಿ ಟಾಂಗಾ ಮಾಡಿಕೊಂಡು ಶರಣಾರ್ಥಿಗಳ ಶಿಬಿರಕ್ಕೆ ಹೊರಟುಹೋಗಿದ್ದರು. ಮೋಟರಿನಲ್ಲಿ ಪೆಟ್ರೋಲು ಕಡಿಮೆ ಇತ್ತು. ಮತ್ತು ಶಾಹಜಿಯವರಿಗೆ ತಮ್ಮದಾದ ಒಂದೆರಡು ಬೇರೆ ಕೆಲಸಗಳು ಇದ್ದವು. ಲಾಲಾಜಿಯನ್ನು ಸಂಗಡ ತೆಗೆದುಕೊಂಡು ಶಾಹಜೀ ಶರಣಾರ್ಥಿಗಳ ಶಿಬಿರದಲ್ಲಿ ಬರುವವರಿದ್ದರು. ಆದರೆ ಉಳಿದ ಅಗತ್ಯದ ಕೆಲಸಗಳಲ್ಲಿ ಅವರಿಗೆ ವಿಲಂಬವಾಯಿತು. ಇಲ್ಲಿ ಮನೆಯಲ್ಲಿ ಅವರು ಕೆಲವು ಮಂದಿಗೆ ಚಹಕ್ಕೆ ಕರೆದಿದ್ದರು. ಅವರು ಲಾಲಾಜಿಯನ್ನು ತರಲು ಶಿಬಿರಕ್ಕೆ ಹೋಗಿದ್ದರೆ ಇನ್ನೂ ತಡವಾಗುತ್ತಿತ್ತು. ಆದ್ದರಿಂದ ಅವರು ಹಿಂದಿರುಗಿ ಬಂದರು."—ಮಾತು ಇನ್ನೂ ಮುಗಿದಿರಲಿಲ್ಲ. "ಸಾವುಕಾರರು" ಎಂದು ರಿಸೀವರನ್ನು ಜೋರಾಗಿ ಕೆಳಗೆ ಜಪ್ಪಿಟ್ಟಳು. ಎಲ್ಲರಿಗೂ ಗೊತ್ತಾಯಿತು. ತಮ್ಮ ತಮ್ಮ ಕೆಲಸಗಳಿಗಾಗಿ ಅಲ್ಲಿ ಬಂದುಕೂತವರೆಲ್ಲರೂ ಎದ್ದು ತಮ್ಮ ಮನೆಗಳಿಗೆ ಹೋದರು.

ರಾತ್ರಿಯ ಶಾಂತತೆ ಆಳವಾಗುತ್ತ ನಡೆದಂತೆ ದ್ರೌಪದಿಯ ಕಾತರತೆ ಹೆಚ್ಚುತ್ತ ಹೋಯಿತು.

ರಸ್ತೆಯಲ್ಲಿ ಸಾಗಿ ಹೋಗುವ ಪ್ರತಿಯೊಂದು ಮೋಟರಿನ ಸದ್ದೂ ಅವಳಿಗೆ ತಮ್ಮ ಅಂಗಳದಲ್ಲಿ ಕೇಳಿ ಬರುತ್ತಿತ್ತು. ಅವಳು ತಪ್ಪಿ ಬಾಗಿಲು ತೆರೆಯುತ್ತಿದ್ದಳು. ಮತ್ತು ಮೋಟರು ಫರ್ ಫರ್ ಎಂದು ಮಾಯವಾಗುತ್ತಿತ್ತು. ಶರಣಾರ್ಥಿ ಬಾಣಂತಿಯ ಸೇವೆ ಶುಶ್ರೂಷೆ ಅವಳು ಎಚ್ಚರವಾಗಿರಲಿಕ್ಕೆ ಒಂದು ಒಳ್ಳೆಯ ನೆವವಾಗಿತ್ತು. ಆದರೆ ಹಾಗಲ್ಲದಿದ್ದರೂ ಇಂದು ಅವಳ ಕಣ್ಣಲ್ಲಿ ನಿದ್ದೆಯೇ ಇದ್ದಿಲ್ಲ.

"ಪುಷ್ಯ ಮಾಘದ ರಾತ್ರಿ. ಹಾಸಿಗೆ ಇಲ್ಲದೆ ಗರಂ ಬಟ್ಟೆಗಳನ್ನು ಒಯ್ಯಲಿಲ್ಲ. ಔಷಧವಿಲ್ಲದೆ ಅವರಿಗೆ ನಿದ್ದೆಯೂ ಬರುವದಿಲ್ಲ." ಏಳುತ್ತ ಕೂಡ್ರುತ್ತ ಶರಣಾರ್ಥಿ ಬಾಣಂತಿಯ ಬಟ್ಟೆಬರೆ ಸರಿಮಾಡುತ್ತ ಮೋಟರುಗಳ ಸದ್ದಿನ ತಪ್ಪು ತಿಳುವಳಿಕೆಯಲ್ಲಿ ಮತ್ತೆ ಮತ್ತೆ ಹೊರಗೆ ಇಣಕಿ ನೋಡುತ್ತ, ಅಗ್ಗಿಷ್ಟಿಕೆಯ ಬೆಂಕಿಯನ್ನು ಕೆದರುತ್ತ ಕೆದರುತ್ತ ದ್ರೌಪದಿಯ ರಾತ್ರೆ ತೀರಿತು. ನಸುಕು ಹರಿಯಿತು. ಕೊನೆಗೂ ನಿನ್ನೆಯಂತೆ ಒಂದು ಮೋಟರು ಅವಳ ಅಂಗಳದಲ್ಲಿ ಬಂದು ನಿಂತಿತು. ಇಂದೂ ಅದರ ಹಾರ್ನಿನ ಸದ್ದು ನಿನ್ನೆಯಂತೆಯೇ ಕರ್ಕಶವಾಗಿತ್ತು. ಆದರೆ ದ್ರೌಪದಿಯ ಕಿವಿಗೆ ಆ ಸದ್ದು ಉದಯರಾಗವೆನಿಸಿತು.

ಗಣೇಶನು ಟ್ಯಾಕ್ಸಿಯ ಬಾಗಿಲನ್ನು ಹೊರಗಿನಿಂದ ತೆರೆದನು. ಒಂದು ತೆಳ್ಳಗಿನ ಕೊಳೆಯಾದ ಕಂಬಳಿಯನ್ನು ಹೊದ್ದುಕೊಂಡ ಬಗತರಾಮ ಟ್ಯಾಕ್ಸಿಯಿಂದ ಹೊರ ಬಂದರು. ಅವರು ಹೊದಿಸಿಕೊಂಡಿದ್ದ ಕಂಬಳಿ ಎಷ್ಟು ದಪ್ಪವಿದೆ ಎಂದು ದ್ರೌಪದಿ ತನ್ನ ಬಲಗೈ ಬೆರಳಿನಿಂದ ಪರೀಕ್ಷಿಸುತ್ತಿದ್ದಾಗ ಲಾಲಾಜಿ ಹೇಳಿದರು: "ಬಡ ಶರಣಾರ್ಥಿಯು ರಾತ್ರಿ ಚಳಿಗೆ ಸೆಡೆದು ಬಿದ್ದಿರಬಹುದು. ಅವನ ಹತ್ತಿರ ಒಂದೇ ಕಂಬಳಿ ಇತ್ತು. ಅದನ್ನೇ ಆತ ನಾನು ರೈಲುಗಾಡಿಯಲ್ಲಿ ಕೂಡುವಾಗ ಬಲವಂತವಾಗಿ ನನಗೆ ಹೊದಿಸಿದ್ದನು." ದ್ರೌಪದಿಯು ಎಡಗೈಯನ್ನು ಅವರ ಅಂಗಿಯ ಕಿಸೆಯಲ್ಲಿ ಹಾಕಿದಳು. "ಸತ್‌ಶ್ರೀ ಅಕಾಲ"ದ ದನಿ ಅವಳ ಕಿವಿಗೆ ಬಿತ್ತು. ವೇಗದಿಂದ ಹೋಗುತ್ತಿದ್ದ ಗಣೇಶನ ಟ್ಯಾಕ್ಸಿಯನ್ನು ದೂರದವರೆಗೆ ನೋಡುತ್ತಿದ್ದಂತೆ ಅವಳ ಬಾಯಿಯಿಂದ ಹೊರಟಿತು, "ಈ ಬಡವನನ್ನು ನೋಡಿ, ಮತ್ತು ಆ ದೊಡ್ಡ ಮಂದಿಯನ್ನೂ."

# ರಾಸಲೀಲೆ

ಆಗಿನ ದಿನಗಳಲ್ಲಿ ನನ್ನ ವಯಸ್ಸು ಒಂಬತ್ತೋ ಹತ್ತೋ ವರ್ಷವಿರಬಹುದು. ನಾವು ಆಗ ವಾಸಿಸುತ್ತಿದ್ದ ಮನೆಯಲ್ಲಿ ಮೂರು ಕುಟುಂಬಗಳು ವಾಸಿಸುವಷ್ಟು ಖಾಲಿ ಜಾಗವಿತ್ತು. ಒಂದು ಭಾಗದಲ್ಲಿ ನಾವು ಇರುತ್ತಿದ್ದೆವು ; ಎರಡನೆಯ ಭಾಗ ದಲ್ಲಿ ಅಮೃತಸರದ ಒಬ್ಬ ಪ್ರಸಿದ್ಧ ಕಂಟ್ರಾಕ್ಟರ್ ಇದ್ದ. ಮೂರನೆಯದರಲ್ಲಿ ಒಬ್ಬ ಹಿಂದೂ ವ್ಯಾಪಾರಿ ಇದ್ದ. ಮತ್ತು ನನ್ನ ಆಗಿನ ಅಂದಾಜಿನ ಅರಿವಿನಂತೆ ಅವನ ವಯಸ್ಸು ಸುಮಾರು ಅರವತ್ತು-ಅರವತ್ತೈದು ಇದ್ದಿರಬೇಕು. ನಾನು ಹುಟ್ಟಿದಂದಿ ನಿಂದ ಆತ ಅದೇ ಮನೆಯಲ್ಲಿ ವಾಸಿಸುತ್ತಿದ್ದ. ಅವನಿಗೆ ನನ್ನ ಮೇಲೆ ಬಹಳ ಪ್ರೇಮ ವಿತ್ತು. ಪ್ರಪಂಚದಲ್ಲಿ ಅವನದೆಂಬ ವ್ಯಕ್ತಿ ಯಾರೂ ಇದ್ದಿಲ್ಲವೆಂದು ನಾನು ಕೇಳಿದ್ದೆ. ಇದೇ ಕಾರಣದಿಂದ ಬಹುಶಃ ಆತ ಹಣ ತೆತ್ತು ಒಂದು ಬಡ ಕುಟುಂಬದ ಹುಡುಗಿ ಯನ್ನು ಮದುವೆಮಾಡಿಕೊಂಡಿದ್ದ. ಮೂರು-ನಾಲ್ಕು ತಿಂಗಳಿಂದಲೂ ನಾನು ನೋಡು ತ್ತಿದ್ದೆ. ಬಾಬಾಜಿಯ ಮನೆಬಾಗಿಲು ಯಾವಾಗಲೂ ಹೊರಗಡೆಗೆ ಚಿಳಕ ಹಾಕಿರಲಿ ಬಿಡಲಿ ಮುಚ್ಚಿಯೇ ಇರುತ್ತಿತ್ತು.

ಒಂದು ದಿನ ನಾನು ಸ್ಕೂಲಿನಿಂದ ಹಿಂದಿರುಗಿ ಬಂದು ನೋಡಿದೆ. ಅವನ ಬಾಗಿಲು ತೆರೆದಿತ್ತು. ಬಾಬಾಜಿಯನ್ನು ಒಳಗೆ ಕಂಡು ನಾನು ಮುದ್ದಿನಿಂದ "ಬಾಬಾಜೀ ! ಬಾಬಾಜೀ !" ಎಂದು ಕೂಗುತ್ತ ಒಳಗೆ ನುಗ್ಗಿದೆ. ಕೂಡಲೇ ಆತ ನನ್ನನ್ನೇ ಕಣ್ಣಿಟ್ಟು ಮೂಗಿನ ಮೇಲೆ ಬೆರಳಿಟ್ಟು ಸುಮ್ಮನಿರಲು ಸೂಚಿಸಿದ. ನಾನು ದಂಗುಬಡಿದು ನಿಂತೆ. ಬಾಬಾಜಿಯೂ ನನ್ನ ಮೋರೆಯ ಮೇಲಿನ ದಂಗುಬಡಿದ ಚರ್ಯೆ ನೋಡಿಕೊಂಡಿರಬೇಕು. ನಾನು ಬಂದ ಹೆಜ್ಜೆಯಲ್ಲಿಯೇ ಹೊರಳಿ ಹೋಗ ಹೊರಟೆ. ಅಷ್ಟಕ್ಕೆ ಬಾಬಾಜೀ ನನ್ನನ್ನು ಪಾಟಿ ಪುಸ್ತಕದ ದಪ್ತರ ಸಮೇತ ತೊಡೆಗೆ ಎತ್ತಿಕೊಂಡು ಒಂದು ಆಣೆಯನ್ನು ನನ್ನ ಕೈಗಿಟ್ಟು ಅಂದ. "ಕಿಶನ್ ! ಇನ್ನು ನೀನು ನನ್ನನ್ನು ಚಿಕ್ಕಪ್ಪನೆಂದು ಕರೆಯುತ್ತ ಹೋಗು. ಕರೆಯುವಿಯಲ್ಲವೇ ?" ಅವನ ಪ್ರಶ್ನೆಯ ಉತ್ತರ ನಾನು ತಲೆಯಲ್ಲಾಡಿಸಿ "ಹಾಂ" ಎಂದು ಕೊಟ್ಟಾಗ ಆತ ನನ್ನನ್ನು ಒಳ್ಳೇ ಮಮತೆಯಿಂದ ತೊಡೆಯಿಂದ ಕೆಳಗೆ ಇಳಿಸಿದನು.

ಮನೆ ಸೇರಿದ ಕೂಡಲೇ ನನಗೆ ಒಂದು ಗ್ಲಾಸು ಹಾಲು ಕುಡಿಯಲು ಕೊಟ್ಟು ಅಕ್ಕಾಜೀ ಅಂದಳು, "ಇದೀಗ ಒಂದು ಸಣ್ಣ ರೊಟ್ಟಿ ಸುಟ್ಟುಕೊಡುತ್ತೇನೆ." ಅಷ್ಟರಲ್ಲಿ ಬಾಬಾಜಿಯ ಕೆಲಸಗಿತ್ತಿ ಓಡುತ್ತ ನನ್ನನ್ನು ಕರೆಯಲು ಬಂದಳು.

ಅಕ್ಕಾಜೀ ಅಂದಳು, "ಹೋಗು ಕಾಕಾ, ನಿನ್ನ ದೊಡ್ಡ ತಾಯಿ ನಿನಗೆ ಕರೆದಿರಬೇಕು."

ನಾನು ಆಶ್ಚರ್ಯದಿಂದ ಕೇಳಿದೆ, "ಯಾವ ದೊಡ್ಡ ತಾಯಿ? ಆ ಕಂಟ್ರಾಕ್ಟರ್ ದೊಡ್ಡಪ್ಪ?"

ಅಕ್ಕಾಜೀ ಉತ್ತರವಿತ್ತಳು, "ಬಟ್ಟೆ ವ್ಯಾಪಾರಿ ದೊಡ್ಡಪ್ಪ. . ."

"ಬಾಬಾಜೀ ಅಂದರು, 'ನಾ ನಿನ್ನ ಚಿಕ್ಕಪ್ಪ' ಎಂದು"—ನಾನೆಂದೆ.

ಅಕ್ಕಾಜೀ ನಕ್ಕು ಅಂದಳು, "ಹೌದು ಅವರೇ ಕರೆದಿದ್ದಾರೆ. ಇವಳು ಅವರ ಮನೆಯ ಹೊಸ ಆಳು. ಕಾಕಾ, ನಿನ್ನ ಅಕ್ಕ ನಿನ್ನ ಕರೆದಿರಬೇಕು."

ಈ ಬಗೆಯ ಮಾತು ಕೇಳಿ ನನ್ನ ತಲೆ ಗಿಂವ ಎಂದಿತು. ಮತ್ತು ರೊಟ್ಟಿ ಆಮೇಲೆ ತಿನ್ನುವಾ ಎಂದು ಆಲೋಚಿಸಿ ನಾನು ಆಳು ಮಗಳೊಂದಿಗೆ ನಡೆದೆ.

ಕಾಕಾನ ಕೋಣೆಯೊಳಗೆ ಪ್ರವೇಶ ಮಾಡಿದೊಡನೆ ಆತ ಮೊದಲಿನಂತೆಯೇ ನನ್ನನ್ನು ತೊಡೆಗೆ ಎತ್ತುಕೊಂಡನು ಮತ್ತು ಅದೇ ರೀತಿ ಒಳಕೋಣೆಗೆ ಕರೆದೊಯ್ದನು. ಅಲ್ಲಿ ಕಬ್ಬಿಣದ ಘಲ್ಲಂಗದ ಹತ್ತಿರ ಎತ್ತರದ ಕಪಾಟಿನ ಆಳೆತ್ತರದ ಕನ್ನಡಿಯ ಮುಂದೆ ಗೋದಿ ಬಣ್ಣದ ಅಂಗ ಕಾಂತಿಯ ತೆಳ್ಳನ ಕೋಮಲ ಹೆಂಗಸು ತನ್ನ ಮೊಣಕಾಲ ಮಟ್ಟದ ಉದ್ದ ಕಪ್ಪು ಕೇಶರಾಶಿಯನ್ನು ಬಾಚಿಕೊಳ್ಳುತ್ತ ನಿಂತಿದ್ದಳು. ಆಕೆ ಕನ್ನಡಿಯೊಳಗಿಂದಲೆ ನಾವು ಒಳಗೆ ಬರುವುದನ್ನು ಕಂಡಿದ್ದಳು. ಮತ್ತು ನಮ್ಮ ಕಡೆಗೆ ಮೋರೆ ತಿರುಗಿಸುವ ಮುಂಚೆಯೇ ಪಂಜಾಬೀ ರೂಢಿಯಂತೆ ಸೀರೆಯ ಸೆರಗನ್ನು ತಲೆಯ ಮೇಲೆ ಎಳೆದುಕೊಂಡಳು. ಕಾಕಾಜೀ ಅಂದರು, "ಕಿಶನ್, ಇವಳು ನಿನ್ನ ಚಿಕ್ಕಮ್ಮ."

ನಾನು ಮನೆಯಲ್ಲಿ ನನಗೆ ಕಲಿಸಿಕೊಟ್ಟಂತೆ ಚಿಕ್ಕಮ್ಮನ ಪಾದಗಳ ಮೇಲೆ ತಲೆ ಇಡಲು ಕೆಳಗೆ ಬಗ್ಗಿದೆನು. ಆದರೆ ಅಷ್ಟರಲ್ಲಿ ಅವಳು ಪಾದ ಹಿಂದೆ ಸರಿಸಿಕೊಂಡು ನನ್ನನ್ನು ಬಳಿಗೆ ಸೆಳೆದು ಬಿಗಿದಪ್ಪಿಕೊಂಡಳು. ನನ್ನ ತೋಳು ಬಹಳ ಕಷ್ಟದಿಂದ ಅವಳ ಸೊಂಟದ ತನಕ ನಿಲುಕುವಂತಿದ್ದವು. ಪ್ರೀತಿಯಿಂದ ಅವಳ ಸೊಂಟದ ಸುತ್ತು ಬಿಗಿದುಕೊಂಡವು. ಅವಳು ನನ್ನ ತಲೆ ಕೂದಲಿನಲ್ಲಿ ತನ್ನ ಉದ್ದ ಕೋಮಲ ಬೆರಳುಗಳನ್ನು ಆಡಿಸುತ್ತ ಅಂದಳು, "ಎಷ್ಟು ಮುದ್ದು ಮುದ್ದಾಗಿದ್ದಾನೆ ಈ ಹುಡುಗ!"

ಕಾಕಾ ಅಂದರು, "ರಾಮಪ್ಯಾರೀ, ಈ ಹುಡುಗ ನನಗೂ ಬಹಳ ಪ್ರೀತಿ. ನಾನು ಇವನನ್ನು ಚಿಕ್ಕಂದಿನಿಂದ ಪಾಲಿಸಿದ್ದೇನೆ."

ನನಗೆ ನೆನಪಿದೆ, ನಾನು ಅವಳ ಸೊಂಟದ ಸುತ್ತಿನಿಂದ ನನ್ನ ತೋಳು ಹಿಂದೆ ತೆಗೆದುಕೊಂಡಾಗ ಅವಳು ಒಂದು ಆಳವಾದ ನಿಟ್ಟುಸಿರನ್ನೆಳೆದಳು.

ಕಾಕಾ ಕೇಳಿದರು, "ಏಕೆ. ಏನಾಯಿತು ಪ್ಯಾರೀ?"

"ಏನಿಲ್ಲ." ಅವಳು ಮತ್ತೆ ತಣ್ಣನುಸಿರೆಳೆದು ಅಂದಳು,—ಸ್ವಲ್ಪ ಹೊತ್ತಿನಲ್ಲಿ ತುಂಬ ಪ್ರೇಮದಿಂದ ನನಗೆ ಕೇಳಿದಳು, "ನಿನ್ನ ಹೆಸರೇನು ಮಗು?"

ನಾನು ನನ್ನ ಹೆಸರು ಹೇಳಿದಾಗ ಆಕೆ ಪಂಜಾಬಿ ಧಾಟಿಯಲ್ಲಿ ಅದನ್ನು ಮತ್ತೆ ಉಚ್ಚರಿಸಿದಳು, "ಕೃಷ್ಣಚಂದ್ರ!"

ಕೂದಲು ಬಾಚಿಕೊಳ್ಳದೆ, ಸಾಬೂನಿನಿಂದ ಕೈ ತೊಳೆದುಕೊಂಡು ಅವಳು ಒಂದು ಪ್ಲೇಟಿನಲ್ಲಿ ಹಾಲುಕೆನೆ ಮತ್ತು ಅವಲಕ್ಕಿಯನ್ನು ನನಗೆ ತಿನ್ನಲು ಕೊಟ್ಟಳು. ರೊಟ್ಟಿಯ ನೆನಪು ಮರೆತು ನಾನು ಈ ತಿಂಡಿಯನ್ನು ಒಳ್ಳೇ ರುಚಿಯಿಂದ ತಿಂದೆ ಮತ್ತು ಹೊರಗೆ ಆಡಲಿಕ್ಕೆ ಹೊರಟುಹೋದೆ.

ಸುಮಾರು ಮೂರು ದಿನಗಳ ನಂತರದ ಮಾತಿದು. ನಾನು ಸ್ಕೂಲಿನಿಂದ ಹಿಂದಿರುಗಿ ಬರುತ್ತಿದ್ದೆ. ಆಗ ಕಾಕಾಜಿಯ ಮನೆಯ ಬಾಗಿಲು ತುಸು ತೆರೆಯಿತು. ಬಾಗಿಲ ಒಳಗಿಂದ ನನ್ನನ್ನು ಯಾರೋ ಒಳಗೆ ಕರೆಯುತ್ತಿದ್ದರು. ಈ ದನಿ ನನಗೆ ಪರಿಚಿತವೇ. ನಾನು ಬಾಗಿಲು ತೆರೆದು ನನ್ನ ಪುಸ್ತಕಗಳೊಂದಿಗೇ ಒಳಗೆ ಹೊಕ್ಕೆನು. ಒಳಗೆ ಯಾರೂ ಇದ್ದಿಲ್ಲ. ಯಾಕೋ ಗೊತ್ತಿಲ್ಲ. ನಾನು ಹೊರಬಾಗಿಲನ್ನು ಮುಚ್ಚಿಬಿಟ್ಟೆ. ಮತ್ತು ಅಂದು ಹೊಕ್ಕ ಕೋಣೆಯನ್ನೇ ಪ್ರವೇಶಿಸಿದೆ. ಚಿಕ್ಕಮ್ಮ ಅಂದಿನಂತೆಯೇ ಕೂದಲು ಬಾಚಿಕೊಳ್ಳುತ್ತಿದ್ದಳು. ಅವಳು ನಾನು ಒಳಗೆ ಬರುತ್ತಿರುವುದನ್ನು ಕನ್ನಡಿಯೊಳಗಿಂದಲೇ ನೋಡಿದಳು ಮತ್ತು ನನ್ನ ಕಡೆಗೆ ಮೋರೆ ಹೊರಳಿಸಿದಳು. ಆದರೆ ಈಸಲ ಅವಳು ಸೀರೆಯ ಸೆರಗಿನಿಂದ ತಲೆಯನ್ನು ಮುಚ್ಚಿಕೊಳ್ಳಲಿಲ್ಲ. ಕೆಲಹೊತ್ತು ಸಂಕೋಚಪಟ್ಟುಕೊಂಡ ನಂತರ ಆಕೆ ಅದೇರೀತಿ ತೋಳು ಚಾಚಿದಳು. ನಾನು ನಿಂತಲ್ಲಿಯೇ ಅವಳ ದುಂಡನೆ ಸುಂದರ ಮುಖವನ್ನೇ ನೋಡುತ್ತ ನಿಂತೆ, ಮೆಲ್ಲ ಮೆಲ್ಲಗೆ ಅವಳ ಕಣ್ಣಿನಲ್ಲಿ ಎರಡು ದೊಡ್ಡ ದೊಡ್ಡ ಹನಿಗಳು ಮೂಡಿ ಬಂದವು. ನನಗೆ ತಡೆಯಲಾಗಲಿಲ್ಲ. 'ನೀನು ಏಕೆ ಅಳುತ್ತೀ' ಎಂದೂ ನಾನೂ ಕೇಳಲಿಲ್ಲ. ತೋಳು ಚಾಚಿ ನಾನು ಮುಂದೆ ನುಗ್ಗಿದೆ. ಕೂಡಲೇ ಅವಳು ಮಂಡಿಯೂರಿ ಕೂತುಬಿಟ್ಟಳು. ನನ್ನ ಎರಡೂ ತೋಳುಗಳು ಅವಳ ಬೆನ್ನನ್ನು ಬಿಗಿಯಾಗಿ ಬಳಸಿದವು. ಅವಳೂ ನನ್ನನ್ನು ಬಿಗಿಯಾಗಿ ತನ್ನ ಎದೆಗೆ ಅಪಚಿಕೊಂಡಳು. ನನಗೆ ಆ ದಿನವೇ ಮೊತ್ತ ಮೊದಲಿಗೆ ಕೋಮಲತೆಯ ಅನುಭವವಾದದ್ದು. ನಾನು ಸತ್ಯ ಹೇಳುತ್ತೇನೆ, ನನ್ನ ಮೈಯ್ಯಲ್ಲಿ ಕಂಪವೇ ಕಂಪ. ಕಾಕಿಯು ತನ್ನ ಬಲಗೈ ತೆಗೆದು ನನ್ನ ಗಲ್ಲವನ್ನು ತನ್ನ ಎಡಗಲ್ಲಕ್ಕೆ ಹಚ್ಚಿಕೊಂಡಳು. ಮತ್ತು ಬಹಳ ಹೊತ್ತು ನಾವು ಅದೇರೀತಿ ಕೂತು ಉಳಿದೆವು. ಕೊನೆಗೆ ಅವಳ ಕಂಬನಿಗಳು ನನ್ನ ಗಲ್ಲದ ಮೇಲಿಂದ ಹರಿಯ ಹತ್ತಿದವು. ಆ ಕಂಬನಿ ಬಿಸಿಯಾಗಿತ್ತು. ನಾನು ಎಚ್ಚರಗೊಂಡೆ. ಹತ್ತಿರದಿಂದ ಅವಳ ಮುಖಚರ್ಯೆಯನ್ನು ನೋಡಿದಾಗ ಅವಳ ತುಟಿಗಳು ಅದುರುತ್ತಿದ್ದವು. ಕಣ್ಣು ಮುಚ್ಚಿದ್ದವು. ಆಮೇಲೆ ಅವಳ ಎರಡನೆಯ ತೋಳೂ ಸಡಿಲು ಬಿದ್ದಿತು ಮತ್ತು

ಅವಳು ನಿಧಾನವಾಗಿ ಕಣ್ಣು ತೆರೆದಳು ನನ್ನ ಇಂದಿನ ತಿಳುವಳಿಕೆಯಿಂದ ನಾನು ಹೇಳಬಲ್ಲೆ, ಅವಳ ಕಣ್ಣು ಭಾರವಾಗಿದ್ದವು. ಆಲಸಿಕೆಯಿಂದ ತುಂಬಿದ್ದವು—ಇದೀಗ ನಿದ್ದೆಯಿಂದ ಎದ್ದಂತೆ. ನಾನು ಮಾತಾಡಲು ಮೊದಲಿಟ್ಟೆ : "ಕಾಕೀ"

ಅವಳು ನಡುವೆಯೇ ಬಂಗಾಲೀ ಮಿಶ್ರಿತ ಹಿಂದಿಯಲ್ಲಿ ಅಂದಳು, "ಕೃಷ್ಣ ಚಂದ್ರ, ನನ್ನ ಹೆಸರು ರಾಧಾ. ನನ್ನನ್ನು ರಾಧಾ ಎಂದೇ ಕರೆಯುತ್ತ ಹೋಗು."

ನಾನು ತಲೆ ಅಲ್ಲಾಡಿಸಿ ಹೇಳಿದೆ, "ನಿಮ್ಮ ಇಚ್ಛೆ ಇದ್ದಂತೆ!" ನನ್ನ ಮೊದಲಿನ ಪ್ರಶ್ನೆಯನ್ನು ಮರೆತು ಕೇಳಿದೆ, "ಕಾಕಾಜೀ ಎಲ್ಲಿ?"

ರಾಧಾ ಅಂದಳು, "ಅವರು ಸಂತೆಗೆ ಅಂಗಡಿ ಒಯ್ದಿದ್ದಾರೆ. ಅಮಾವಾಸ್ಯೆಯ ತನಕವೂ ಅವರಿಗೆ ಬಿಡುವು ಇಲ್ಲ."

"ಕೆಲಸದವಳು?"

"ಅವಳನ್ನು ಕೆಲಸದಿಂದ ತೆಗೆದುಬಿಟ್ಟೆ. ಅವಳು ಒಳ್ಳೆಯವಳಲ್ಲ. ಈಗ ಎಲ್ಲ ಕೆಲಸ ನಾನೇ ಮಾಡಿಕೊಳ್ಳುತ್ತೇನೆ."

ಅವಳಿಗೆ ಏನಾಯಿತೋ ನನಗೆ ಗೊತ್ತಾಗಲಿಲ್ಲ. ಅವಳು ನನ್ನ ಎಡ ಹೆಗಲ ಮೇಲೆ ತೂಗುತ್ತಿದ್ದ ಪುಸ್ತಕಗಳ ಚೀಲವನ್ನು ಇಳಿಸಿದಳು. ನನ್ನ ಕೋಟನ್ನು ಕಳಚಿ ಪಲ್ಲಂಗದ ಮೇಲೆ ಒಗೆದಳು. ಲೇಸು ಬಿಡಿಸಿ ನನ್ನ ಬೂಟನ್ನು ಕಳಚಿಬಿಟ್ಟಳು. ಅವಳು ನನ್ನ ಎಡಗಾಲನ್ನು ಮುಂದಕ್ಕೆ ಎಳೆದು ಮೊಣಕಾಲ ಕೆಳಗಿನ ಭಾಗವನ್ನು ಬಗ್ಗಿಸಿದಳು. ಮತ್ತು ಕಾಲನ್ನು ತುದಿಗಾಲಿನಮೇಲೆ ನಿಲ್ಲಿಸಿದಳು. ಬಲಗಾಲು ಇದ್ದಂತೆಯೇ ನೇರವಾಗಿನಿಂತಿತ್ತು. ಆ ಮೇಲೆ ಅವಳು ಏನೋ ಹುಡುಕುತ್ತಿದ್ದಂತೆ ನಾಲ್ಕೂ ನಿಟ್ಟಿಗೆ ಕಣ್ಣು ಹಾಯಿಸಿದಳು. ತ್ವರೆಯಿಂದ ಅವಳು ಒಂದು ನಾಗಂದಿಗೆಯ ಮೇಲಿಂದ ಒಂದು ಚಿಕ್ಕಕೋಲನ್ನು ಕೆಳಗೆ ತಂದು ಅದನ್ನು ನನ್ನ ಕೈಯಲ್ಲಿ ಇರಿಸಿ ಅದರ ಒಂದು ತುದಿಯನ್ನು ನನ್ನ ತುಟಿಯಮೇಲೆ ಇಟ್ಟಳು. ಮತ್ತು ಹಿಂದಕ್ಕೆ ಸರಿದು ನನ್ನನ್ನು ದಿಟ್ಟಿಸಿ ನೋಡಿದಳು. ಅವಳ ತುಟಿಯಮೇಲೆ ಒಂದು ಕೋಮಲ ಕಿರುನಗೆ ಮೂಡಿತು. ಮತ್ತು ಅವಳ ಬಾಯಿಂದ ಒಂದು ದೀರ್ಘ "ಹೂಂ" ಕಾರ ಹೊರಟಿತು. ಸ್ವಲ್ಪ ವೇಳೆಯನಂತರ ಅವಳು ತನ್ನ ಶೃಂಗಾರದ ಮೇಜಿನ ಕಣದಿಂದ ಒಂದು ಗುಲಾಬಿಬಣ್ಣದ ರಿಬ್ಬನ್ನು ತೆಗೆದು ತಂದು ನನ್ನ ಹೊಂಬಣ್ಣದ ಕೂದಲನ್ನೆಲ್ಲ ಹಿಂದೆ ಸರಿಸಿ ಆ ರಿಬ್ಬನ್ನನ್ನು ನನ್ನ ತಲೆಯಸುತ್ತಲೂ ಕಟ್ಟಿ ಎಡಕಿವಿಯ ಹತ್ತಿರ ಒಂದು ಹೂವಿನಂಥ ಗಂಟು ರಚಿಸಿದಳು. ಕನ್ನಡಿ ಕಪಾಟನ್ನು ತೆರೆದು ಅವಳು ಒಂದು ಹಳದಿಬಣ್ಣದ ಬನಾರಸ್‌ಸೀರೆ ತೆಗೆದಳು. ಅದನ್ನು ತಡವುತ್ತ ಅವಳು ಇನ್ನೊಂದು ಗೋಡೆಯ ಮೇಲಿದ್ದ ಒಂದು ದೊಡ್ಡ ಚಿತ್ರದತ್ತ ಹೋದಳು. ಆ ಚಿತ್ರಕ್ಕೆ ಒಂದು ಹೂಮಾಲೆ ಏರಿಸಿತ್ತು. ಲಕ್ಷ್ಯವಿತ್ತು ಆ ಚಿತ್ರವನ್ನು ನೋಡಿದನಂತರ ಅವಳು ನನ್ನ ಕಡೆಗೆ ಹೊರಳಿದಳು. ಮತ್ತು ಆ ಚಿತ್ರವನ್ನು ನೋಡಿ ನೋಡಿ ನನ್ನ

ಸೊಂಟಕ್ಕೆ ಧೋತರದಂತೆ ಆ ಸೀರೆ ಸುತ್ತಹತ್ತಿದಳು. ನನ್ನನ್ನು ಹೀಗೆ ಧೋತರದಲ್ಲಿ ಸಿಂಗರಿಸಿ ಅವಳು ಹಿಗ್ಗಿದಳು, ಕಳವಳಗೊಂಡಳು. ಕಂತ್ರಾಟದಾರ ಸರದಾರನ ಸಣ್ಣ ಹುಡುಗಿ ತನ್ನ ಅಣ್ಣನಿಂದ ಹೊಸ ಗೊಂಬೆ ಪಡೆದಾಗ ಹೀಗೆಯೇ ಮಾಡುತ್ತಿದ್ದಳು. ನನಗೆ ರಾಧೆ ಅದೇ ಹುಡುಗಿಯಂತೆ ಕಾಣಿಸಿದಳು.

ಸ್ವಲ್ಪ ವೇಳೆಯಾದ ಮೇಲೆ ಅವಳು ತ್ವರೆಯಿಂದ ಕೋಲನ್ನು ಸೆಳದುಕೊಂಡು ನನ್ನ ಕೈಚೀಲದ ಹತ್ತಿರ ಒಗೆದಳು. ನನ್ನನ್ನು ತನ್ನ ತೋಳುಗಳಲ್ಲಿ ಎತ್ತಿಕೊಂಡು ತನ್ನ ಸೊಂಟಕ್ಕೆ ಬಿಗಿದು ಅವಚಿಕೊಂಡು ಭಾರಿ ವೇಗದಿಂದ ಐದಾರುಸಲ ಗಿರ್ರನೆ ತಿರುಗಿಸಿ ನನ್ನನ್ನು ನಿಲ್ಲಿಸಿದಳು. ನಾನು ತಲೆತಿರುಗಿ ಬೀಳುತ್ತಿದ್ದೆ. ಹೇಗೋ ನಿಂತು ಕೊಂಡೆ. ಅವಳು ನನ್ನ ಬಿಸಿಬಿಸಿ ಕೆನ್ನೆಗಳನ್ನು ತನ್ನ ಎರಡೂ ಅಂಗೈಗಳಿಂದ ಒತ್ತಿ ಹಿಡಿದು ನನ್ನ ತಲೆ ಮತ್ತು ಕೂದಲನ್ನು ಚುಂಬಿಸಿದಳು.

ನಿಧಾನವಾಗಿ ನನ್ನ ಆ ಎಲ್ಲ ಬಟ್ಟೆಗಳನ್ನು ತೆಗೆದಿಟ್ಟು ನನ್ನ ಬಟ್ಟೆ ತೊಡಿಸಿ ಮೊದಲಿನಂತೆಯೇ ಮಾಡಿದಳು. ಅಡಿಗೆಯ ಮನೆಯಿಂದ ಹಾಲು ತುಂಬಿದ ಒಂದು ಬೆಳ್ಳಿಯ ಲೋಟಾ ಮತ್ತು ಬೆಳ್ಳಿಯ ಸಣ್ಣ ಪ್ಲೇಟಿನಲ್ಲಿ ದ್ರಾಕ್ಷೆಗಳನ್ನು ಇಟ್ಟು ತಂದು ನನ್ನ ಇದುರು ಇರಿಸಿದಳು. ನಾನು ಮೊದಲಿನ ದಿನದಂತೆಯೇ ತಂದೆ ತಾಯಿಗಳ ಅಪ್ಪಣೆ ಮೀರಿ ಅದನ್ನೆಲ್ಲ ತಿಂದು ಮುಗಿಸಿದೆ. ಆ ಮೇಲೆ ಬಚ್ಚಲಿಗೆ ಒಯ್ದು ನನ್ನ ಕೈ ಬಾಯಿ ತೊಳೆಯಿಸಿ ಹಿಮದಂತೆ ಬೆಳ್ಳಗಿನ ಪಂಚೆಯಿಂದ ನನ್ನ ಮೋರೆ ಒರಸಿ ಅವಳು ನನ್ನನ್ನು ಹೊರಗೆ ಕಳುಹಿಸಿದಳು. ರಾಧೆ ನನ್ನ ಹಿಂದೆ ಹಿಂದೆ ಬಂದಳು. ನನಗೆ ಅನಿಸಿತು, ಅವಳು ಆ ಸರದಾರಜಿಯ ಮಗಳಂತೆ ನನಗೆ ಅನ್ನುತ್ತಿದ್ದಾಳೆ, "ನಾಳೆ ಮತ್ತೆ ಆಡಲಿಕ್ಕೆ ಬಾ, ನಾನು ನಿನಗೆ ಭಾರಿ ಚಲೋ ಕುಣಿತ ಕಾಣಿಸುವೆ."

ಬಾಗಿಲ ಹೊರಗೆ ಮಳೆ ಬರುತ್ತಿತ್ತು. ಜೋರಾದ ಬೀಸುಗಾಳಿಗೆ ತೆಂಗಿನಮರಗಳು ತಲೆದೂಗುತ್ತಿದ್ದುವು. ನಾನು ನೆನೆಯುತ್ತಲೆ ನಮ್ಮ ಮನೆಯ ಮೂಲೆಯಲ್ಲಿ ಹೊರಳಿ ಒಳಗೆ ಹೊಕ್ಕೆನು. ಅಕ್ಕಾಜೀ ಹೆದರಿಹೋಗಿದ್ದಳು; ನನ್ನ ನಿರೀಕ್ಷೆಯಲ್ಲಿಯೇ ಇದ್ದಳು. ಅವಳು ಬಹಳ ಮುದ್ದಿನಿಂದ ನನ್ನನ್ನು ಎದೆಗೆ ಅಪ್ಪಿಕೊಂಡು ಸುಳ್ಳೇ ಕೋಪ ಬಂದಂತೆ ಕಾಣಿಸಿ ಕೇಳಿದಳು, "ಎಲ್ಲಿದ್ದೆ ಇಷ್ಟು ಹೊತ್ತು?"

ನಾನು ನನ್ನ ಅಪ್ಪ ಅಮ್ಮ ಮತ್ತು ಪುಸ್ತಕಗಳ ಬೋಧನೆಯನ್ನು ಮುರಿದು ಬಾಳಿನಲ್ಲಿಯೇ ಮೊದಲ ಸಲ ಸುಳ್ಳು ಹೇಳಿದೆ, "ಅವನೀಂದ್ರನ ಮನೆಗೆ. ಅವ ಹೊಸ ಯಂತ್ರದ ಬಗರಿ ತಂದಿದ್ದಾನೆ, ಅಕ್ಕಾಜೀ."

ಅಕ್ಕಾಜೀ ಸುಮ್ಮನಾದಳು.

(೨)

ಮರುದಿನ ನನಗೆ ಸ್ಕೂಲಿನಲ್ಲಿ ಸ್ವಲ್ಪವೂ ಲಕ್ಷ್ಯವಿದ್ದಿಲ್ಲ. ಬಹಳ ಕಷ್ಟದಿಂದ

ಕಾಯುತ್ತಿರುವಾಗ ಕೊನೆಗೊಮ್ಮೆ ಶಾಲೆ ಬಿಡುವ ಗಂಟೆ ಆಯಿತು. ಬಿಪಿನನು ಕೀಲಿ ಕೊಟ್ಟು ನಡೆಯಿಸುವ ಮೋಟರನ್ನು ದಪ್ತರಿನಲ್ಲಿ ಕಟ್ಟಿ ತಂದಿದ್ದ. ಆ ಮೋಟಾರನ್ನು ರಸ್ತೆಯ ಫೂಟಪಾಥಿನ ಮೇಲೆ ಬಿಡಿಸಿ ಆಡೋಣವೆಂದು ಅವನಂದಿದ್ದ. ಆದರೆ ಇಂದು ನಾನು ಅವನಿಗೆ ಒಲ್ಲೆನೆಂದು ಖಾಲಿ ಜವಾಬು ಕೊಟ್ಟೆ. ರಾಧೆಯೊಂದಿಗೆ ಆಡಬೇಕೆಂದು ನನ್ನ ಹಂಬಲ. ಈ ಹೊತ್ತು ಆಗಲಿರುವ ಕುಣಿತವನ್ನು ನೋಡಬೇಕೆಂದು ನನ್ನ ಇಚ್ಛೆ ಇತ್ತು.

ಮನೆಗೆ ಹೋಗಿ ಹಾಲು ಕುಡಿಯುವುದಿಲ್ಲವೆಂದು ನೆವ ಹೂಡಿದೆ. ಅವನಿಂದ್ರನ ಮನೆಗೆ ಹೋಗುವೆನೆಂದು ಸುಳ್ಳೇ ಹೇಳಿ ನಾನು ರಾಧೆಯ ಮನೆಯನ್ನು ಹೊಕ್ಕೆನು.

ರಾಧೆ ಮುಂಚಿನಿಂದಲೂ ನಿಂತು ನನ್ನ ಹಾದಿ ನೋಡುತ್ತಿದ್ದಳು. ಇಂದಂತೂ ಅವಳ ವೇಷಭೂಷಣಕ್ಕೆ ಮಿತಿಯೇ ಇದ್ದಿಲ್ಲ. ನಾನು ಈ ಮೊದಲು ಎಂದೂ ಯಾವದೇ ಹೆಂಗಸು ಇಷ್ಟು ಸುಂದರ ಸೀರೆಯುಟ್ಟು ಸಿಂಗಾರಮಾಡಿಕೊಂಡಿದ್ದು ನೋಡಿಯೇ ಇದ್ದಿಲ್ಲ. ಅವಳು ನನ್ನ ಬೆರಳು ಹಿಡಿದುಕೊಂಡು ಅಡಿಗೆಯ ಮನೆಯತ್ತ ಒಯ್ದಳು. ಅಲ್ಲಿ ನನ್ನನ್ನು ಒಂದು ಮಣೆಯ ಮೇಲೆ ಕುಳ್ಳಿರಿಸಿ ತಾನು ನೆಲಕ್ಕೆ ಕೂತಳು. ಮತ್ತು ಮುಂದೆ ಇಟ್ಟ ಬೆಳ್ಳಿಯ ಪಾತ್ರೆಗಳಲ್ಲಿ ಹಾಲು, ಕೆನೆ, ಅವಲಕ್ಕಿ ಮಾತ್ರವಲ್ಲ ಚಪಾತಿ ಪಲ್ಯೆ ಮತ್ತು ಬೆಣ್ಣೆಯನ್ನು ಬಡಿಸಿಟ್ಟಿದ್ದಳು. ಒಂದು ಹೊಂಬಣ್ಣದ ಪ್ಲೇಟಿನಲ್ಲಿ ಮೋಸಂಬಿಯ ಹಣ್ಣುಗಳನ್ನು ಇಟ್ಟಿದ್ದಳು. ನಾನು ಬೇಡ ಬೇಡವೆಂದು ಎಷ್ಟೇ ಹೇಳಿದರೂ ಅದನ್ನು ಲೆಕ್ಕಿಸದೆ ಅವಳು ಚಪಾತಿಗಳ ತುತ್ತು ಮುರಿಮುರಿದು ಎಲ್ಲ ತಿನಿಸುಗಳನ್ನು ತಿನಿಸಿ ತೀರಿಸಹತ್ತಿದಳು. ನನ್ನ ಹೊಟ್ಟೆ ಲಗು ತುಂಬಿತು. ರಾಧೆ ನನ್ನನ್ನು ಬಚ್ಚಲ ಮನೆಗೆ ಕರೆದೊಯ್ದು ನನ್ನ ಕೈ ಬಾಯಿಗಳನ್ನು ಸ್ವಚ್ಛ ಮಾಡಿಸಿದಳು.

ನಾವು ಪಕ್ಕದ ಕೋಣೆಯಲ್ಲಿ ಹಾಜರಾದೆವು. ಕೋಣೆ ಅಗರುಬತ್ತಿಯ ಕಂಪಿನಿಂದ ಘಮಘಮಿಸುತ್ತಿತ್ತು. ಸಿಂಗಾರದ ಮೇಜಿನ ಮೇಲೆ ಒಂದು ಬೆಳ್ಳಿಯ ಹರಿವಾಣದಲ್ಲಿ ಹೂಮಾಲೆ ಮತ್ತು ತುಪ್ಪದ ನೀಲಾಂಜನಗಳಿದ್ದವು. ನನ್ನ ಕಣ್ಣ ಮುಂದೆಯೇ ಸೀರೆಯ ಸೆರಗಿನ ತುದಿಗೆ ಕಟ್ಟಿದ ಕೀಲಿಯ ಗೊಂಚಲಿನಿಂದ ಒಂದು ಕೀಲಿ ಕೈ ಹುಡುಕಿ ತೆಗೆದು ಅವಳು ಬಟ್ಟೆ ಬರೆಗಳ ಬೀರು ತೆರೆದಳು. ಅದರೊಳಗಿಂದ ಒಂದು ಹೊಸ ಪೀತಾಂಬರ ಹೊರ ತೆಗೆದು ರಾಧೆ ಪಲ್ಲಂಗದ ಮೇಲೆ ಇಟ್ಟಳು. ಒಂದು ಗೂಟದಿಂದ ನವಿಲುಗರಿಯ ಒಂದು ಮುಕುಟವನ್ನು ತೆಗೆದು ಅವಳೆಂದಳು, "ಕೃಷ್ಣಚಂದ್ರ, ಈ ಕಿರೀಟವನ್ನು ನಾನು ನನ್ನ ಕೈಗಳಿಂದ ನಿನಗಾಗಿ ಮಾಡಿದ್ದೇನೆ."

ನಾನು ಇನ್ನೂ ಬೆರಗಾಗಿ ನಿಂತಿದ್ದೆ. ರಾಧೆ ಮೇಜಿನ ಕಣದೊಳಗಿಂದ ಒಂದು ಕೊಳಲನ್ನು ಹೊರತೆಗೆದಳು. ಹತ್ತು ನಿಮಿಷಗಳಲ್ಲಿ ಅವಳು ನನಗೆ ಪೀತಾಂಬರ, ಮುಕುಟ, ಹೂಮಾಲೆ ಮತ್ತು ಕೊಳಲುಗಳಿಂದ ಸಿಂಗರಿಸಿ ನಿನ್ನೆಯಂತೆಯೇ ತ್ರಿಭಂಗಿ

ಯಲ್ಲಿ ನಿಲ್ಲಿಸಿದಳು. ಹೂಮಾಲೆಗಳಲ್ಲಿ ಒಂದನ್ನು ಇದುರಿಗಿದ್ದ ಚಿತ್ರಕ್ಕೆ ಹಾಕಿದಳು. ನಾನು ಇದುರಿಗಿದ್ದ ಕನ್ನಡಿಯಲ್ಲಿ ನನ್ನ ಮೋರೆ ನೋಡಿದೆ ; ಅದು ಇದುರಿನ ಚಿತ್ರದ ತದ್ರೂಪವೆನಿಸಿತು. ನಾನು ಕೇಳಿದೆ, "ರಾಧಾ, ಅದು ಯಾರ ಚಿತ್ರ ?"

ಅವಳು ನಗುತ್ತ ಅಂದಳು, "ಗೊತ್ತಿಲ್ವೇ ? ಅದು ಕೃಷ್ಣಚಂದ್ರನದು !"

"ನನ್ನದೋ ?"

"ಹಾಂ, ಹಾಂ. ಕೃಷ್ಣಚಂದ್ರನದು."

ಬೆಂಕಿ ಕಡ್ಡಿ ಗೀಚಿ ಹರಿವಾಣದಲ್ಲಿಟ್ಟ ಐದೂ ನೀಲಾಂಜನಗಳನ್ನು ಉರಿಸಿ ರಾಧೆ ಎರಡೂ ಕೈಗಳಿಂದ ಆ ಹರಿವಾಣ ಎತ್ತಿಕೊಂಡು ನಿಂತಳು. ನನ್ನ ಇದುರಿಗೆ ನಿಂತು ಅವಳು ಎರಡೂ ಕಣ್ಣು ಮುಚ್ಚಿಕೊಂಡಳು. ಮತ್ತೆ ಕಣ್ಣು ತೆರೆದು ಅವಳು ತನ್ನ ತೋರು ಬೆರಳಿನಿಂದ ಹರಿವಾಣದ ಅಂಚಿಗೆ ಇಟ್ಟ ಕೇಸರಿ ಹುಡಿ ಮತ್ತು ಅಕ್ಷತೆಯ ತಿಲಕವನ್ನು ನನ್ನ ಹಣೆಗೆ ಇಟ್ಟಳು. ನನಗೂ ಏನು ತೋಚಿತೋ, ನಾಕಾಣೆ. ನಾನೂ ನನ್ನ ತೋರು ಬೆರಳಿನಿಂದ ಕೇಸರಿ ತೆಗೆದು ಅವಳ ತಲೆಯತ್ತ ಚಾಚಿದೆ. ಅವಳು ತಲೆ ತಗ್ಗಿಸಿದಳು. ನನ್ನ ಬೆರಳಿನ ಸ್ಪರ್ಶದಿಂದ ಅವಳು ಒಮ್ಮೆಲೆ ಕಂಪಿಸಿದಳು. ದೀಪದ ಜ್ಯೋತಿಗಳು ಕಂಪಿಸಿದವು. ಧೂಪದ ಹೊಗೆ ಕಂಪಿಸಿತು ಮತ್ತು ಹೇಗೋ ಏನೋ ಅವಳ ಕಾಲಿನಿಂದ ಗೆಜ್ಜೆಗಳಂಥ ಘಿಲಿ ಘಿಲಿ ಶಬ್ದ ಕಂಪಿಸಿ ಎದ್ದಿತು. ಅವಳು ಒಮ್ಮೆಲೆ ತನ್ನ ಸ್ಥಳದಿಂದ ಕದಲಿ, ಮುಂದೆ ನುಗ್ಗಿದಳು—ಕುಸಿದು ಜಾರಿ ಬೀಳು ವಳೋ ಎನಿಸಿತು. ಆದರೆ ಅಷ್ಟರಲ್ಲಿ ತನ್ನನ್ನು ಸಾವರಿಸಿಕೊಂಡಳು. ಸಾವಕಾಶವಾಗಿ ಅವಳ ಜಾರುವ ಮತ್ತು ತನ್ನನ್ನು ಸಾವರಿಸಿಕೊಳ್ಳುವ ವೇಗ ಹೆಚ್ಚುತ್ತ ಹೋಯಿತು. ಕುಣಿತ ಪ್ರಾರಂಭವಾಯಿತೆಂದು ನಾನು ಆಗ ತಿಳಿದುಕೊಂಡೆ. ಅವಳು ಟೊಂಕವನ್ನು ಬಗ್ಗಿಸಿದಾಗ ಅವಳ ಬಿಚ್ಚಿದ ಕೂದಲು ನೆಲಕ್ಕೆ ತಾಗುತ್ತಿದ್ದವು. ಅವಳು ಗಾಳಿಯ ಕಿರಿ ಅಲೆಗಳಂತೆ ಮತ್ತೆ ಮತ್ತೆ ವಾಲುತ್ತಿದ್ದಳು. ವೇಗ ಹೆಚ್ಚಾಗುತ್ತ ಹೋಯಿತು. ಕಾಲ ಗೆಜ್ಜೆಗಳ ಝುಣತ್ಕಾರದಿಂದ ಕೋಣೆಯೊಳಗೆ ಏಕಾಗ್ರತೆ ಕವಿಯಿತು. ವೇಗ ಇನ್ನೂ ದ್ರುತವಾಯಿತು. ಆರತಿಯ ದೀಪ ಜ್ಯೋತಿಗಳ ಒಂದು ವರ್ತುಲವೇ ನನ್ನ ಸುತ್ತಲೂ ಎಳೆದಂತೆ ಆಯಿತು. ನನ್ನ ಕಣ್ಣುಗಳ ಮುಂದೆ ನಕ್ಷತ್ರಗಳು ತಿರುಗಹತ್ತಿದವು. ನನ್ನ ಸುತ್ತುಮುತ್ತು ಹಲವಾರು ರಾಧೆಯರು ಕಾಣಿಸಿಕೊಂಡರು. ನನ್ನದೇ ರೂಪ ಚರ್ಯೆಯ ಹಲವಾರು ಹುಡುಗರು ಅದೇ ನನ್ನ ವೇಷದಲ್ಲಿ ಅವರ ಜತೆಗೆ ಇದ್ದರು. ನನ್ನ ಮೇಲೆಯೇ ನನಗೆ ಹಿಡಿತವಿಲ್ಲದಂತೆ ನನಗೆ ಅನಿಸಿತು. ಯಾರೋ ನನ್ನ ಬೆರಳು ಗಳನ್ನು ಆ ಕೊಳಲಿನ ರಂಧ್ರಗಳ ಮೇಲೆ ಬಲವಾಗಿ ಒತ್ತಿಟ್ಟಂತೆ ನನಗೆ ಅನಿಸಿತು. ನಾನು ಅದರ ದೊಡ್ಡ ರಂಧ್ರದ ಮೇಲೆ ನನ್ನ ತುಟಿಯೂರಿ ಬಲವಾಗಿ ಊದಿದೆ. ನನಗೆ ಗೊತ್ತಾಗಲಿಲ್ಲ, ನನ್ನ ಚಿಕ್ಕಚಿಕ್ಕ ಬೆರಳುಗಳು ಆ ರಂಧ್ರಗಳ ಮೇಲೆ ಹೇಗೆ ಕುಣಿಯಹತ್ತಿದವೋ ? ನಾನು ಹಿಂದೆಂದೂ ಕೊಳಲು ಬಾರಿಸಿದ್ದಿಲ್ಲ. ಈಗಲೂ

ನಾನು ಯಾವದೇ ವಾದ್ಯ-ಗೀದ್ಯ ನುಡಿಸುವುದಿಲ್ಲ. ಆದರೆ ಆ ವೇಳೆಗೆ ನಾನು ಹೇಗೆ ಕೊಳಲು ಬಾರಿಸಿದೆನೋ ಹಾಗೆ ಯಾವ 'ಉಸ್ತಾದ'ನೂ ಬಾರಿಸಿದ್ದು ನಾನು ಕೇಳಿಲ್ಲ!

ಮೆಲ್ಲಮೆಲ್ಲನೆ ನನ್ನ ಬೆರಳುಗಳು ಶಿಥಿಲವಾದವು. ಕುಣಿತದ ಗತಿಯೂ ಕಡಿಮೆ ಕಡಿಮೆ ಆಗುತ್ತ ತೀರ ಕಡಿಮೆ ಆಯಿತು. ರಾಧೆಯೊಬ್ಬಳೇ ಉಳಿದಳು. ನಾನೂ ಒಬ್ಬನೇ ಉಳಿದೆನು. ಕೋಣೆಯಲ್ಲಿ ಗೋರಿಯಂಥ ಶಾಂತತೆ ಕವಿಯಿತು. ರಾಧೆ ಹೆಂಡಗುಡುಕರಂತೆ ತೂರಾಡುತ್ತಿದ್ದಳು. ಆದರೆ ದೀಪದ ಹರಿವಾಣವನ್ನು ಬೀಳಲು ಬಿಡುತ್ತಿರಲಿಲ್ಲ. ನಾನು ನನ್ನ ಸ್ಥಳ ಬಿಟ್ಟು ಮುಂದೆ ಸರಿದೆ. ಅವಳ ಕೈಯಿಂದ ಹರಿವಾಣ ತೆಗೆದುಕೊಂಡು ಸಿಂಗಾರದ ಮೇಜಿನಮೇಲೆ ಇಡುವದೇ ತಡ, ಅವಳು ಧೊಪ್ಪನೆ ನೆಲಕ್ಕೆ ಬಿದ್ದಳು. ಕೊಳಲನ್ನು ಮಂಚದ ಮೇಲೆ ಎಸೆದು ನಾನು ಅವಳನ್ನು ಎತ್ತಿ ಹಿಡಿದೆ. ಆ ಹೊತ್ತಿಗೆ ನನ್ನಲ್ಲಿ ಅಷ್ಟು ಬಲ ಹೇಗೆ ಬಂದಿತೋ ನಾನರಿಯೆ. ಆಗ ನಾನು ಪ್ರತಿಯೊಂದು ನಿಮಿಷದಲ್ಲೂ ನನ್ನನ್ನು ಪೂರ್ಣ ಪ್ರೌಢಮನುಷ್ಯನೆಂದು ಭಾವಿಸುತ್ತಿದ್ದೆ. ನನ್ನ ಪೀತಾಂಬರದ ಸೆರಗಿನಿಂದ ಗಾಳಿ ಬೀಸಿ ಅವಳನ್ನು ಪೂರ್ತಿ ಎಚ್ಚರಗೊಳಿಸಿದೆ. ಅವಳು ಎದ್ದು ನನ್ನ ಗಲ್ಲವನ್ನು ಚುಂಬಿಸಿದಳು. ನನ್ನ ನರ-ನಾಡಿಗಳಲ್ಲಿ ಕಂಪನ ಬೆಳೆಯಿತು. ನಾನು ಅರೆಮೂರ್ಛೆಯಲ್ಲಿ ಅವಳನ್ನು ನನ್ನ ತೋಳುಗಳಲ್ಲಿ ಎಳೆದುಕೊಂಡೆ. ಅವಳು ಕಂಪಿಸಹತ್ತಿದಳು. ಮತ್ತು ತನ್ನ ತೋಳುಗಳಲ್ಲಿ ನನ್ನನ್ನು ಬಿಗಿದುಕೊಂಡು ತನ್ನನ್ನು ತಾನೆ ನನ್ನ ತೋಳುಗಳಲ್ಲಿ ನಿಶ್ಚಲವಾಗಿ ಉಳಿಯಬಿಟ್ಟಳು. ನಾನು ಅವಳ ಗಲ್ಲಗಳನ್ನು ಚುಂಬಿಸಿದೆ, ತುಟಿಗಳನ್ನು ಚುಂಬಿಸಿದೆ, ಕಣ್ಣುಗಳನ್ನು ಚುಂಬಿಸಿದೆ, ಕೂದಲು ಚುಂಬಿಸಿದೆ. ಆದರೆ ಅವಳು ನಿಶ್ಚಲಳಾಗಿಯೇ ಇದ್ದಳು. ನಾನು ಅವಳ ಮುಖವನ್ನು ನೋಡಿದೆ. ಸ್ವಲ್ಪಹೊತ್ತಿನ ಮೇಲೆ ಅವಳು ಅರೆ ಅಮಲಿನ ಕಣ್ಣು ತೆರೆದಳು. ಮತ್ತೆ ಕೂಡಲೇ ಮುಚ್ಚಿಕೊಂಡಳು.

ಅಕಸ್ಮಾತ್ ಬಾಗಿಲು ತಟ್ಟಿದಂತೆ ಸದ್ದಾಯಿತು. ನಾವು ಎದ್ದು ನಿಂತೆವು. ಆದರೆ ಮತ್ತೆ ಯಾವ ಸದ್ದೂ ಕೇಳಿಸಲಿಲ್ಲ. ನನ್ನನ್ನು ತಿರುಗಿ ಮೊದಲಿನಂತೆ ಕಿಶನಚಂದನಾಗಿ ಮಾಡಲಾಯಿತು. ನಾನು ಮನೆ ಸೇರಿದಾಗ ಸಾಕಷ್ಟು ತಡವಾಗಿತ್ತು.

## (೩)

ಡಾಕ್ಟರರಿಗೆ ತೋರಿಸಲಾಯಿತು. ನನ್ನ ಆರೋಗ್ಯ ಉತ್ತಮವಿದೆ ಎಂದು ಅವರು ಹೇಳಿದರು.

"ಇವನಿಗೆ ಹಸಿವೆ ಯಾಕೆ ಆಗುವದಿಲ್ಲ?" ತಂದೆಯವರು ಡಾಕ್ಟರರನ್ನು ಕೇಳಿದರು.

"ಅವನ ಜೀರ್ಣಶಕ್ತಿ ಸರಿಯಾಗಿಯೇ ಇದೆ" ಡಾಕ್ಟರರು ಉತ್ತರವಿತ್ತರು.

ಸ್ಕೂಲಿನ ಪರೀಕ್ಷೆಯ ರಿಪೋರ್ಟ್ ಚೆನ್ನಾಗಿಯೇ ಇತ್ತು. ಆದಾಗ್ಯೂ ನನ್ನ ಮೇಲೆ ಕಣ್ಗಾವಲು ಇಡಲಾಯಿತು.

ನಾನು ದಿನಾಲು ರಾಧೆಯ ಮನೆಗೆ ಹೋಗುತ್ತಿದ್ದೆ ಎಂಬ ಸಂಗತಿಯ ಬಗೆಗೆ ಯಾರಿಗೂ ಎಂದಿಗೂ ಸಂದೇಹವೇ ಬಂದಿದ್ದಿಲ್ಲ. ಆದರೆ ನಾನು ದಿನಾಲು ರಾತ್ರಿ ಊಟ ಸರಿಯಾಗಿ ಮಾಡುತ್ತಿದ್ದಿಲ್ಲ. ಇದಕ್ಕಾಗಿ ನನ್ನ ಅಕ್ಕಾಜೀಗೆ ಬಹಳ ಚಿಂತೆ ಹತ್ತಿತ್ತು. ಅವರು ಗುಪ್ತ ಪೋಲೀಸರಂತೆ ನನ್ನ ಬೆನ್ನಿಗೇ ಬಿದ್ದರು. ಒಂದು ದಿನ ನಾನು ರಾಧೆಯ ಮನೆಗೆ ಹೋದಾಗ ಅವರೂ ಕಳ್ಳಹೆಜ್ಜೆಯಿಂದ ನನ್ನ ಹಿಂದೆ ಬಂದರು. ಅಲ್ಲಿ ಬಾಗಿಲು ಒಳಗಿಂದ ಹಾಕಿದ್ದರಿಂದ ಅವರಿಗೆ ಒಳಗಡೆ ಬರಲು ಆಗಲಿಲ್ಲ. ಹೊರಗೇ ಬಾಗಿಲಿಗೆ ಕಿವಿ ಹಚ್ಚಿ ಅವರು ಎಷ್ಟುಹೊತ್ತು ನಿಂತಿದ್ದರೋ ಗೊತ್ತಿಲ್ಲ. ಕುಣಿತ ಮುಗಿದಮೇಲೆ ಅವರ ತೀವ್ರ ಕೂಗು ಕೇಳ ಬರಹತ್ತಿತು. ಅವರು ದನಿ ಏರಿಸಿ ಏರಿಸಿ ಕೂಗುತ್ತಿದ್ದರು, "ರಾಮುಪ್ಯಾರೀ ! ರಾಮುಪ್ಯಾರೀ !"

ನಾನಂತೂ ಹೆದರಿಹೋದೆ. ಆದರೆ ರಾಧೆ ಆ ವೇಷ-ವಸ್ತ್ರಗಳನ್ನು ಲಗು ಕಳಚಿ ನನ್ನ ಬಟ್ಟೆ ತೊಡಿಸಿದಳು. ಹೊರಗಿನ ಕೂಗಿನ ಸುರಿಮಳೆಯಲ್ಲಿಯೆ ನನ್ನ ಕೈ ಬಾಯಿ ತೊಳೆಯಿಸಿ ಆಯಿತು. ನನ್ನನ್ನು ತಿರುಗಿ ಅದೇ ಕೋಣೆಯಲ್ಲಿ ಮರೆಯಾಗಿ ಇಟ್ಟು ಅವಳು ಹೊರಗೆ ಬಂದಳು ಮತ್ತು ಬಾಗಿಲತೆರೆದು ನನ್ನ ಅಕ್ಕಾಜಿಯನ್ನು ಕೇಳಿದಳು, "ಏನು ಸಮಾಚಾರ ?"

ಅಕ್ಕಾಜೀ ಕೆರಳಿದ ಕಣ್ಣಿನಿಂದ ಕೇಳಿದಳು, "ಕಿಶನ್ ಎಲ್ಲಿದ್ದಾನೆ ?"

ರಾಧೆ ಅಂದಳು, "ಇಲ್ಲೇ ಎಲ್ಲಾದರೂ ಇರಬಹುದು."

"ನಾನು ಸ್ವತಃ ನೋಡಿದ್ದೇನೆ, ಅವ ಒಳಗೆ ಹೊಕ್ಕಿದ್ದು." ಅಕ್ಕಾಜೀ ಗುಡುಗಿದರು.

"ನಾನು ಒಳಗೆ ಹೋಗಿ ನೋಡುತ್ತೇನೆ" ರಾಧೆ ಭಾರಿ ಶಾಂತತೆಯಿಂದ ಅಂದಳು, "ನಾನು ಮಲಗಿರುತ್ತೇನೆ. ಆಗ ಅವ ಎಷ್ಟೋಸಲ ಬಾಗಿಲ ಮುಚ್ಚಿಕೊಂಡು ಒಬ್ಬನೇ ಆಡುತ್ತ ಇರುತ್ತಾನೆ."

ಒಳಗೆ ಬಂದು ಅವಳು ನನ್ನ ತೋಳು ಹಿಡಿದಳು. ನಾನು ಹೆದರಿಕೆಯ ಹೊಡೆತಕ್ಕೆ ವಿವಶನಾಗಿ ಗದಗದ ನಡುಗುತ್ತಿದ್ದೆ. ರಾಧೆ ನಿಧಾನವಾಗಿ ಅಂದಳು, "ಹೆದರಬೇಡ, ನನ್ನ ಕೃಷ್ಣ ! ನಾವೇನೂ ಕಳವುಮಾಡಿಲ್ಲ, ಪಾಪಮಾಡಿಲ್ಲ."

ನಾನು ಧೈರ್ಯ ತಂದುಕೊಂಡೆ. ಅವಳು ನನ್ನನ್ನು ಎಳೆದುಕೊಂಡೆ ಹೊರಗೆ ತಂದಳು. ನನ್ನ ತೋಳು ಅಕ್ಕಾಜಿಯ ಕೈಯೊಳಗೆ ಕೊಟ್ಟು ಅವಳು ಅಂದಳು, "ಇಕಾ ತಕ್ಕೊಳ್ಳಿ—ಹಿಡಿದುಕೊಳ್ಳಿರಿ. ನಿಮ್ಮ ಬೆಣ್ಣೆಕಳ್ಳನನ್ನು, ಒಳಗಿನ ಕೋಣೆಯಲ್ಲಿ ಅಡಗಿ ಕೂತಿದ್ದ."

ನನ್ನ ಅಕ್ಕಾಜೀ ನನ್ನನ್ನು ಬಿಟ್ಟು ಒಳಗೆ ಹೊಕ್ಕಳು. ಪಕ್ಕದ ಕೋಣೆಯಲ್ಲಿ ಹರಡಿದ ವಸ್ತುಗಳನ್ನೂ ಉರಿಯುತ್ತಿರುವ ಬತ್ತಿಗಳನ್ನೂ ನೋಡಿ ಅವಳು ಎತ್ತರ ದನಿಯಲ್ಲಿ "ಹೂಂss ಊಂ ಊಂ" ಅಂದಳು. ಮತ್ತು ಒಂದು ಸಂಶಯತುಂಬಿದ ನೋಟವನ್ನು ರಾಧಾಳ ಮೇಲೆ ಬೀರಿ ಭಾರೀ ಬಿಗುಮಾನದಲ್ಲಿ ತಿರುಗಿಬಂದಳು. ಬಂದೊಡನೆ ನನಗೆ ಏಟು ಬಡಿತ ಸುರುವಾಯಿತು. ರಾಧೆ ನನ್ನನ್ನು ಬಿಡಿಸಲು ಹೊರಗೆ ಬಂದಳು. ಆದರೆ ತಿರುಗಿ ಒಳಗೆ ಹೋದಳು ಮತ್ತೆ ಹೊರ ಬಂದಳು; ಮತ್ತೆ ತಿರುಗಿ ಹೋದಳು. ನನ್ನ ಗಲ್ಲದ ಮೇಲೆ ಪೆಟ್ಟು ಬಿದ್ದೊಡನೆ ಅವಳು ಹೆದರಿ ಹಾರಿ ಬೀಳುತ್ತಿದ್ದಳು.

ನನ್ನನ್ನು ಕೋಣೆಯಲ್ಲಿ ಕದ ಹಾಕಿಟ್ಟು ಅಕ್ಕಾಜೀ ತಂದೆಯವರ ಬರವನ್ನು ಹಾರೈಸುತ್ತ ಕುಳಿತರು. ನಾನು ಬೇಕೆಂತಲೇ ಗೊರಕೆ ಹೊಡೆಯಹತ್ತಿದೆ. ಅಕ್ಕಾಜೀ ಬಹಳ ಪ್ರೀತಿಯಿಂದ ತಂದೆಯವರಿಗೆ ಊಟ ಬಡಿಸಿದಳು. ಊಟ ಮುಗಿಸಿ ಸ್ವಲ್ಪ ಹೊತ್ತು ಹಜಾರದಲ್ಲಿ ಅಡ್ಡಾಡಿದ ಮೇಲೆ ತಂದೆಯವರು ಬಂದು ತಮ್ಮ ಪಲ್ಲಂಗದಲ್ಲಿ ಕುಳಿತರು. ಅಕ್ಕಾಜೀ ಊಟದ ಕೆಲಸವೆಲ್ಲ ಮುಗಿಸಿ ತಮ್ಮ ಮಂಚಕ್ಕೆ ಬಂದರು. ಸ್ವಲ್ಪ ತಡೆದು ಅವರು ಮೆಲ್ಲನೆ ಅಂದರು, "ರೀ, ಏನ್ರೀ! ನಿದ್ದೆ ಬಂತೇ?"

ತಂದೆಯವರು ಮಗ್ಗಲು ಹೊರಳಿ "ಹೂಂ" ಅಂದರು.

"ನಾನೊಂದು ಮಾತು ಹೇಳಬೇಕೆಂದಿದ್ದೆ" ಅಕ್ಕಾಜೀ ಅದೇನೋ ಅತ್ಯಗತ್ಯದ ಮಾತು ಎಂಬಂತೆ ಅನಿಸುವ ಧಾಟಿಯಲ್ಲಿ ಅಂದರು.

"ಏನದು ಮಾತು?"

ಅಕ್ಕಾಜೀ ಇಂದು ಕಂಡಿದ್ದು ಕೇಳಿದ್ದು ಎಲ್ಲವನ್ನು ತಿಳಿಸಿದಳು. ಮತ್ತು ಕೊನೆಗೆ ಅಂದರು, "ಯಾರಿಗೆ ಗೊತ್ತು, ಆ ಬಂಗಾಲಿ ಜಾದೂಗಾರ್ತಿ ನನ್ನ ಕಂದನನ್ನು ಕೋಣೆಯ ಕದ ಹಾಕಿ ಒಳಗಿಟ್ಟುಕೊಂಡು ಏನೇನು ಮಾಟ ಮಾಡುತ್ತಾ ಇದ್ದಾಳೋ!"

ತಂದೆಯವರು ಅಂದರು, "ಮಳ್ಳಿಯಾಗಬೇಡ ನೋಡಾಂ!"

ಆದರೆ ಅಕ್ಕಾಜೀ ಬಹಳ ಒತ್ತಾಯಮಾಡಿದ ಮೇಲೆ ತಂದೆಯವರು ಅಂದರು, "ಒಳ್ಳೇದು, ನಾಳೆ ಬೆಳಿಗ್ಗೆ ಮುದುಕನನ್ನು ಭೆಟ್ಟಿಯಾಗುತ್ತೇನೆ"

## (೪)

ಮೂರನೆಯ ದಿನ ನಾನು ಸ್ಕೂಲಿನಿಂದ ಮರಳುವಾಗ ಮನೆಗೆ ಹೋಗುವ ಬದಲು ರಾಧಾಳ ಮನೆಯತ್ತ ತಿರುಗಿದೆ. ಬಾಗಿಲು ಪೂರಾ ತೆರೆದಿತ್ತು. ಒಳಗೆ ಯಾವ ಸಾಮಾನೂ ಇದ್ದಿಲ್ಲ. ನಾನು ಕಣ್ಣುಜ್ಜಿಕೊಂಡು ಲಕ್ಷ್ಯವಿಟ್ಟು ನೋಡಿದೆ,

ಅಲ್ಲಿ ಯಾರೂ ಇದ್ದಿಲ್ಲ. ನನಗೆ ಹೀಗೆ ಅನಿಸಹತ್ತಿತು—ನನ್ನ ಮೈಯ ಒಂದು ಅಂಗವನ್ನೇ ಯಾರೋ ಕತ್ತರಿಸಿ ಒಯ್ದರು. ನಾನು ಕೋಣೆಯ ಒಂದು ಮೂಲೆಯಲ್ಲಿ ಕುಸಿದು ಕುಕ್ಕರಿಸಿದೆನು. ಅಕಸ್ಮಾತ್ ಯಾರೋ ಬಂದು ನನ್ನ ತೋಳನ್ನು ಹಿಡಿದರು. ರಾಧಾನೇ ಎಂದು ನಾನು ಮೊದಲು ಭಾವಿಸಿದೆ. ಆದರೆ ತೋಳು ಬಲು ಜೋರಾಗಿಯೇ ಹಿಡಿದಿತ್ತು. ನಾನು ತಲೆ ಎತ್ತಿ ನೋಡಿದೆ. ಇದುರು ಅಕ್ಕಾಜೀ. ನಾನು ಅಳುತ್ತಿದ್ದೆ. ಅಕ್ಕಾಜೀ ನನ್ನನ್ನು ಎಳೆದುಕೊಂಡು ಮನೆಯ ಕಡೆಗೆ ಒಯ್ಯುತ್ತಿದ್ದಳು.

# ಚಮತ್ಕಾರ

"... ಹೀಗೇ ತಿರುಗಿ ಬಾಬಾ ನಾನಕರು ಅಲೆದಾಡುತ್ತ ಹಸನ ಅಬ್ದಾಲನ ಅಡವಿಯೊಳಗಿಂದ ಹಾಯುತ್ತಿದ್ದರು. ಸೆಕೆ ವಿಪರೀತವಿತ್ತು. ರಣ ರಣ ಸುಡುವ ಬಿಸಿಲು ಕಾಗೆಯ ಕಣ್ಣೇ ಕಿತ್ತು ಬರುವಂತಿತ್ತು! ನಾಲ್ಕೂಕಡೆಗೆ ಶೂನ್ಯಮೌನ; ಬಂಡೆಗಲ್ಲೇ ಬಂಡೆಗಲ್ಲು, ಮರಳೇ ಮರಳು, ಉರಿದು ಕತ್ತಿಹೋದ ಗಿಡಗಳಂತೆ ಒಣಗಿ ಬಿದ್ದ ಮರ. ದೂರ ದೂರದವರೆಗೂ ಯಾವ ಮಾನವ ಪ್ರಾಣಿಯೂ ಕಣ್ಣಿಗೆ ಬೀಳುತ್ತಿದ್ದಿಲ್ಲ."

"ಮತ್ತೆ ಮುಂದೆ? ಅಮ್ಮಾ!"

"ಬಾಬಾ ನಾನಕರು ತಮ್ಮ ಧ್ಯಾನ್ಯದಲ್ಲಿ ಮಗ್ನರಾಗಿ ಮತ್ತರಾಗಿ ನಡೆಯುತ್ತಿದ್ದರು. ಅಷ್ಟರಲ್ಲಿ ಮರ್ದಾನನಿಗೆ ನೀರಡಿಕೆ ಆಯಿತು. ಆದರೆ ಅಲ್ಲೆಲ್ಲಿ ನೀರು? ಬಾಬಾ ಅಂದರು, 'ಮರ್ದಾನಾ, ತಾಳು. ಸ್ವಲ್ಪ ಸ್ಥೈರಿಸು. ಮುಂದಿನ ಹಳ್ಳಿಗೆ ಮುಟ್ಟಿದೆವೆಂದರೆ ಎಷ್ಟು ಬೇಕೋ ಅಷ್ಟು ನೀರು ಕುಡಿಯಬಹುದು.'" ಆದರೆ ಮರ್ದಾನನಿಗಂತೂ ವಿಪರೀತ ನೀರಡಿಕೆ. ಇದನ್ನು ಕೇಳಿ ಬಾಬಾ ನಾನಕರು ಚಿಂತಾಕ್ರಾಂತರಾದರು. ಈ ಕಾಡಿನಲ್ಲಿ ನೀರಂತೂ ಎಷ್ಟು ದೂರಕ್ಕೂ ಇದ್ದಿಲ್ಲ ಮತ್ತು ಈಗ ಮರ್ದಾನ ಹಟಹಿಡಿದು ಕುಳಿತರೆ ಎಲ್ಲರಿಗೂ ದೊಡ್ಡ ಪೇಚು. ಬಾಬಾ ಮತ್ತೆ ತಿಳಿಹೇಳಿದರು, "ಮರ್ದಾನಾ, ಇಲ್ಲಿ ಎಲ್ಲೂ ನೀರಿಲ್ಲ. ನೀನು ತುಸು ತಾಳಿಕೋ. ದೇವರ ಇಚ್ಛೆಯನ್ನು ಮನ್ನಿಸು." ಆದರೆ ಮರ್ದಾನಾ ಎಲ್ಲಿ ನಿಂತಿದ್ದನೋ ಅಲ್ಲಿಯೇ ಕುಳಿತುಬಿಟ್ಟನು. ಅವನಿಂದ ಒಂದು ಹೆಜ್ಜೆಯೂ ಮುಂದೆ ಇಡಲು ಆಗುತ್ತಿದ್ದಿಲ್ಲ. ಬಾಬಾ ಬಹಳ ಕಳವಳಪಟ್ಟರು. ಮರ್ದಾನಾನ ಹಟ ನೋಡಿ ಗುರು ನಾನಕರು ನಗುತ್ತಿದ್ದರು. ಗಾಬರಿಯೂ ಆಗುತ್ತಿದ್ದರು. ಕೊನೆಗೆ ಮರ್ದಾನಾ ಯಾವರೀತಿಯಿಂದಲೂ ಒಪ್ಪದಾದ. ಆಗ ಬಾಬಾ ನಾನಕರು ಧ್ಯಾನಮಗ್ನರಾದರು. ಗುರುಗಳು ಕಣ್ಣು ತೆರೆದಾಗ ಮರ್ದಾನಾ ಮೀನಿನಂತೆ ಚಡಪಡಿಸುತ್ತಿದ್ದ. ಸದ್ಗುರುಗಳು ಅವನನ್ನು ಕಂಡು ಮುಗುಳುನಕ್ಕರು. ಮತ್ತು ಅಂದರು, "ತಮ್ಮಾ, ಮರ್ದಾನಾ; ಈ ಗುಡ್ಡದ ಮೇಲೆ ಒಂದು ಚಿಕ್ಕಗುಡಿಸಲು ಇದೆ. ಅದರಲ್ಲಿ ವಲೀ ಕಂಧಾರಿ ಎಂಬ ಹೆಸರಿನ ಒಬ್ಬ ಬೈರಾಗಿ ವಾಸಿಸುತ್ತಿದ್ದಾನೆ. ನೀನು ಅವನ ಹತ್ತಿರ ಹೋದರೆ ನಿನಗೆ ನೀರು ಸಿಗಬಹುದು. ಈ ಪ್ರಾಂತದಲ್ಲಿ ಅವನ ಬಾವಿಯೊಂದೇ ನೀರಿನಿಂದ ತುಂಬಿರುತ್ತದೆ. ಮತ್ತೆಲ್ಲೂ ನೀರಿಲ್ಲ."

"ಮುಂದೇನಾಯಿತು ಅಮ್ಮಾ?" ನಾನು ಅಸ್ವಸ್ಥನಾಗಿ ಕೇಳುತ್ತಿದ್ದೆ. ಮರ್ದಾನಾನಿಗೆ ನೀರು ಸಿಕ್ಕಿತೋ ಇಲ್ಲವೋ—ಎಂದು ತಿಳಿದುಕೊಳ್ಳಬೇಕಿತ್ತು ನನಗೆ.

ಮರ್ದಾನಾನಿಗೆ ನೀರಡಿಕೆ ಕಟ್ಟಿ ಬಂದಿತ್ತು. ಆತ ಈ ಮಾತು ಕೇಳಿದೊಡನೆ ಆ ಗುಡ್ಡದತ್ತ ಓಡಿದನು. ಕಡು ಬಿಸಿಲಿನ ನಡು ಮಧ್ಯಾಹ್ನ. ಒಂದೆಡೆಗೆ ನೀರಡಿಕೆ, ಇನ್ನೊಂದೆಡೆಗೆ ಗುಡ್ಡವೇರುವ ನಡಿಗೆ. ಅವನ ಉಸಿರು ಕಟ್ಟಿ ಬಂದಿತು. ಇಡಿ ಮೈ ಬೆವರಿನಿಂದ ತೊಯ್ದು ಹೋಯಿತು. ಬಹಳ ಕಷ್ಟದಿಂದ ಗುಡ್ಡದಮೇಲೆ ತಲುಪಿದನು. ಅವನು ವಲೀ ಕಂಧಾರಿಗೆ ಸಲಾಂ ಮಾಡಿದನು. ಮತ್ತು ನೀರಿಗಾಗಿ ಬೇಡಿಕೊಂಡನು. ವಲೀ ಕಂಧಾರಿ ಬಾವಿಯಕಡೆಗೆ ಕೈಮಾಡಿ ತೋರಿಸಿದನು. ಆತ ಬಾವಿಯ ಕಡೆಗೆ ಹೋಗುತ್ತಿದ್ದಂತೆ ವಲೀ ಕಂಧಾರಿಯ ಮನಸ್ಸಿನಲ್ಲಿ ಏನೋ ಬಂದಿತು. ಆತ ಮರ್ದಾನಾನಿಗೆ ಕೇಳಿದ, "ಅಯ್ಯಾ, ನೀನು ಎಲ್ಲಿಂದ ಬಂದಿ ?"

ಮರ್ದಾನಾ ಉತ್ತರವಿತ್ತನು, "ನಾನು ನಾನಕ ಪೀರ (ಸಂತ)ರ ಸಂಗಾತಿ. ನಾವು ಅಲೆಯುತ್ತ ಅಲೆಯುತ್ತ ಇಲ್ಲಿಂದ ಹಾಯ್ದು ಬಂದೆವು. ನನಗೆ ಕಟ್ಟು ನೀರಡಿಕೆ ಆಯಿತು. ಮತ್ತು ಅಲ್ಲಿ ಕೆಳಗೆ ಎಲ್ಲೂ ನೀರಿಲ್ಲ!" ಬಾಬಾ ನಾನಕರ ಹೆಸರು ಕೇಳಿದೊಡನೆ ವಲೀ ಕಂಧಾರಿಗೆ ಸಿಟ್ಟುಬಂತು. ಅದೇ ಕ್ಷಣಕ್ಕೆ ಮರ್ದಾನಾ ನನ್ನು ತನ್ನ ಗುಡಿಸಲಿನಿಂದ ಹೊರಗೆ ಅಟ್ಟಿದನು. ದಣಿದು ಸೋತು ಮರ್ದಾನಾ ಕೆಳಗೆ ಬಂದು ಬಾಬಾ ನಾನಕರಲ್ಲಿ ದೂರಿಕೊಳ್ಳಹತ್ತಿದನು. ಬಾಬಾ ನಾನಕರು ಅವನ ಎಲ್ಲ ವ್ಯಥೆಯನ್ನು ಕೇಳಿಕೊಂಡರು. ಮತ್ತು ನಕ್ಕುಬಿಟ್ಟರು. "ಮರ್ದಾನಾ, ನೀನು ಮತ್ತೊಂದು ಸಲ ಹೋಗು." ಅವರು ಸಲಹೆ ಇತ್ತರು. "ಈಸಲ ನೀನು ನಮ್ರತೆಯಿಂದ ಬಗ್ಗಿದ ಮನಸ್ಸಿನೊಂದಿಗೆ ಹೋಗಬೇಕು. ನಾನು ನಾನಕ ಬೈರಾಗಿಯ ಸಂಗಾತಿ ಎಂದು ಹೇಳಬೇಕು." ಮರ್ದಾನಾನ ನೀರಡಿಕೆ ವಿಪರೀತ ವಾಗಿತ್ತು. ಬೇರೆ ಎಲ್ಲೂ ನೀರೆ ಇಲ್ಲ. ಮನಸ್ಸಿನಲ್ಲಿಯೇ ಕುದಿಯುತ್ತ, ಸಿಡುಕುತ್ತ, ಗೊರಗುಡುತ್ತ ಅವನು ಮತ್ತೆ ಗುಡ್ಡವೇರಿ ಹೋದನು. ಆದರೆ ವಲೀ ಕಂಧಾರಿ ಅವನಿಗೆ ನೀರುಕೊಡಲು ಮತ್ತೆ ಅಲ್ಲಗಳೆದ. "ಒಬ್ಬ ಕಾಫಿರನ ಸಂಗಾತಿಗೆ ನಾನು ಒಂದು ಗುಟಕೂ ನೀರು ಕೊಡಲೊಲ್ಲೆ." ಅವನು ಮರ್ದಾನಾನನ್ನು ಇದ್ದಕ್ಕಿದ್ದಂತೆ ಹಿಂದೆ ಅಟ್ಟಿದನು. ಈ ಸಲ ಗುಡ್ಡದಿಂದ ಕೆಳಗೆ ಬಂದಾಗ ಮರ್ದಾನಾನ ಅವಸ್ಥೆ ತೀರ ಕೆಟ್ಟಿತ್ತು. ಅವನ ತುಟಿಗಳು ಹೆಪ್ಪುಗಟ್ಟಿದ್ದವು. ಮೋರೆಯಿಂದ ಬೆವರು ಇಳಿಯು ತ್ತಿತ್ತು. ಈಗ ಒಂದು ಕ್ಷಣದ ನಂಟು—ಎಂಬಂತೆ ಕಾಣುತ್ತಿತ್ತು ಅವನ ಜೀವ. ಬಾಬಾ ನಾನಕರು ಎಲ್ಲವನ್ನೂ ಕೇಳಿಕೊಂಡರು. ಮತ್ತು ಮರ್ದಾನಾನಿಗೆ "ಧನ್ಯ, ನಿರಹಂಕಾರ!" ಎಂದು ಮತ್ತೊಮ್ಮೆ ವಲಿಯ ಕಡೆಗೆ ಹೋಗಲು ಹೇಳಿದರು. ಅಪ್ಪಣೆಗೆ ಕಟ್ಟುಬಿದ್ದು ಮರ್ದಾನಾ ಹೊರಟನು. ಆದರೆ ಅವನಿಗೆ ಗೊತ್ತು ದಾರಿ ಯಲ್ಲಿಯೇ ತನ್ನ ಪ್ರಾಣ ಹಾರಿಹೋಗುವದೆಂದು. ಮರ್ದಾನಾ ಮೂರನೆಯ ಸಲ ಗುಡ್ಡದ ತುದಿಗೆ ಏರಿ ಹೋದವನು ವಲೀ ಕಂಧಾರಿಯ ಪಾದದ ಮೇಲೆ ಕುಸಿದು ಬಿದ್ದನು. ಆದರೆ ಕ್ರೋಧದಿಂದ ಉರಿದೆದ್ದ ಆ ಬೈರಾಗಿಯು ಈ ಬಾರಿಗೂ ಅವನ

ಪ್ರಾರ್ಥನೆಯನ್ನು ಒದ್ದುಬಿಟ್ಟನು. "ನಾನಕ ತಾನೊಬ್ಬ ಪೀರ (ಸಂತ) ನೆಂದು ಕರೆಯಿಸಿಕೊಳ್ಳುತ್ತಾನೆ. ಮತ್ತೆ ತನ್ನ ಒಬ್ಬ ಭಕ್ತನಿಗೆ ಒಂದು ಗುಟುಕು ನೀರು ಕುಡಿಸಲಾರನೋ?" ವಲೀಕಂಧಾರಿ ಸಾವಿರ ಮೂದಲಿಕೆಯ ಮಾತುಗಳನ್ನಾಡಿದ. ಈ ಸಲ ಮರ್ದಾನಾ ಕೆಳಗೆ ತಲುಪಿದಾಗ ನೀರಡಿಕೆಯಿಂದ ಒದ್ದಾಡುತ್ತಾ, ಬಾಬಾ ನಾನಕರ ಪಾದಗಳಲ್ಲಿ ಎಚ್ಚರತಪ್ಪಿ ಬಿದ್ದನು. ಗುರುನಾನಕರು ಮರ್ದಾನಾನ ಬೆನ್ನಮೇಲೆ ಕೈ ಆಡಿಸಿದರು. ಅವನಿಗೆ ಧೈರ್ಯ ತುಂಬಿದರು. ಅವನು ಕಣ್ಣು ತೆರೆದನು. ಬಾಬಾ ಅವನಿಗೆ ಮುಂದೆ ಬಿದ್ದ ಒಂದು ಕಲ್ಲನ್ನು ಎತ್ತಲಿಕ್ಕೆ ಹೇಳಿದರು. ಮರ್ದಾನಾ ಆ ಕಲ್ಲನ್ನು ಎತ್ತಿದನು. ಮತ್ತು ಅದರ ಕೆಳಗಿನಿಂದ ನೀರಿನ ಒಂದು ಸೆಲೆ ಚಿಮ್ಮಿ ಹೊರಟಿತು—ಒಂದು ಚಿಲುಮೆಯೇ ಕಾಲುವೆಯಾಗಿ ಹರಿಯ ಹತ್ತಿದಂತೆ ಮತ್ತು ನೋಡು ನೋಡುತ್ತಿದ್ದಂತೆ ನಾಲ್ಕು ಸಿಟ್ಟಿಗೂ ನೀರೇ ನೀರಾಯಿತು. ಇಷ್ಟರಲ್ಲಿ ವಲೀಕಂಧಾರಿಗೆ ನೀರು ಬೇಕಾಯಿತು. ಹೋಗಿ ಬಾವಿಯಲ್ಲಿ ನೋಡಿದ. ಒಂದು ಹನಿಯೂ ಇದ್ದಿಲ್ಲ. ವಲೀಕಂಧಾರಿಯು ಆಶ್ಚರ್ಯಕ್ಕೆ ಮಿತಿಯೇ ಉಳಿಯಲಿಲ್ಲ. ಅತ್ತ ಗುಡ್ಡದ ಕೆಳಗೆ ನೀರಿನ ಸರೆಹಾವಳಿಯೇ ಬಂದಂತಿತ್ತು. ಚಿಲುಮೆಗಳು ಒಡೆದುಕ್ಕಿ ಹರಿಯುತ್ತಿದ್ದವು. ವಲೀಕಂಧಾರಿ ನೋಡಿದ, ದೂರ ಬಲುದೂರ ಒಂದು ಜಾಲಿ ಮರದ ಬುಡಕ್ಕೆ ಬಾಬಾನಾನಕ ಮತ್ತು ಅವರ ಸಂಗಾತಿ ಕೂತಿದ್ದರು. ಸಿಟ್ಟಿನಿಂದ ಉರಿದೆದ್ದು ವಲಿಯು ಆ ಗುಡ್ಡದ ಒಂದು ಚೂರನ್ನೇ ಮುರಿದೆತ್ತಿ ತನ್ನ ಎಲ್ಲ ಕಸುವಿನಿಂದ ಕೆಳಗೆ ಉರುಳಿಸಿದನು. ಇಡಿಯ ಗುಡ್ಡವೇ ತಮ್ಮ ಕಡೆಗೆ ಬರುವದನ್ನು ಕಂಡು ಮರ್ದಾನಾ ಕಂಗೆಟ್ಟು ಕೂಗಿದನು. ಬಾಬಾ ನಾನಕರು ಸಂಯತ ಸ್ವರದಲ್ಲಿ ಮರ್ದಾನಾನಿಗೆ 'ಧನ್ನ ನಿರಹಂಕಾರ'ವೆನ್ನಲು ಹೇಳಿದರು. ಮತ್ತು ಆ ಗುಡ್ಡದ ತುಂಡು ಅವರ ತಲೆ ಹತ್ತಿರಕ್ಕೆ ಬಂದೊಡನೆ ಗುರುನಾನಕರು ಕೈಯೆತ್ತಿ ಆ ತುಂಡನ್ನು ತನ್ನ ಅಂಗೈಯಿಂದ ತಡೆದರು. ಹಸನಅಬ್ದಾಲದಲ್ಲಿ ಇಂದಿಗೂ ಗುಡ್ಡದ ಆ ತುಂಡಿನಮೇಲೆ ಬಾಬಾ ನಾನಕರ ಅಂಗೈಯ ಗುರುತು ಉಳಿದಿದೆ. ಹಸನ ಅಬ್ದಾಲವನ್ನು ಇಂದು ಪಂಜಾಸಾಹೇಬ ಎಂದು ಕರೆಯುತ್ತಾರೆ.

ನನಗೆ ಈ ಹಳೆಯ ಕತೆ ಮಿತಿಮೀರಿ ಸ್ವಾರಸ್ಯದ್ದೆನಿಸುತ್ತಿತ್ತು. ಆದರೆ ಒಂದು ಕೈಯಿಂದ ಗುಡ್ಡ ತಡೆಹಿಡಿದ ಮಾತು ಕೇಳಿದಾಗ ನನ್ನ ಬಾಯಿಯ ರುಚಿ ಕೆಟ್ಟು ಸಪ್ಪೆ ಆಗಿಬಿಟ್ಟಿತು. ಇದು ಹೇಗೆ ಸಾಧ್ಯ? ಯಾವದೇ ಮನುಷ್ಯ ಒಂದು ಗುಡ್ಡವನ್ನೇ ಹೇಗೆ ತಡೆಗಟ್ಟಬಲ್ಲ? ಮತ್ತೆ ಆ ಗುಡ್ಡದ ಮೇಲೆ ಇಂದಿಗೂ ಬಾಬಾನಾನಕರ ಅಂಗೈಬೆರಳುಗಳ ಗುರುತು ಇದೆಯಂತೆ! ನನಗೆ ಸ್ವಲ್ಪವೂ ನಂಬಿಗೆ ಆಗಲಿಲ್ಲ. "ಆಮೇಲೆ ಯಾರಾದರೂ ಅದನ್ನು ಅಲ್ಲಿ ಕೆತ್ತಿರಬಹುದು." ನಾನು ನನ್ನ ತಾಯಿಯೊಂದಿಗೆ ಇಷ್ಟು ಹೊತ್ತು ವಾದ ಮಾಡುತ್ತಲೇ ಉಳಿದೆ. ಕಲ್ಲ ಕೆಳಗಿಂದ ನೀರು ಚಿಮ್ಮಿ ಬಂತು—ಇದನ್ನು ನಾನು ಒಪ್ಪುತ್ತೇನೆ. ವಿಜ್ಞಾನವು ಇಂಥ ತಂತ್ರ—

ಉಪಾಯುಗಳನ್ನು ಕಂಡುಹಿಡಿದಿದೆ. ಅವುಗಳ ನೆರವಿನಿಂದ ಅಡಿಗೆ ನೀರುಳ್ಳ ಸ್ಥಳಗಳ ಪತ್ತೆ ಹಚ್ಚಲು ಸಾಧ್ಯವಾಗಿದೆ. ಆದರೆ ಯಾವದೇ ಮನುಷ್ಯ ತನ್ನ ಕಡೆಗೆ ಉರುಳುತ್ತ ಬರುವ ಗುಡ್ಡವನ್ನು ತಡೆ ಹಿಡಿಯುತ್ತಾನೆ—ಇದನ್ನು ಮಾತ್ರ ನಾನು ಒಪ್ಪಲಾರೆ. ನಾನು ಇದನ್ನು ಒಪ್ಪಲು ಸಿದ್ಧನಿದ್ದಿಲ್ಲ. ನನ್ನ ತಾಯಿ ನನ್ನ ಮುಖ ನೋಡಿ ಸುಮ್ಮನಾದಳು.

"ಉರುಳುತ್ತ ಬರುವ ಗುಡ್ಡವನ್ನು ಯಾರಾದರೂ ಹೇಗೆ ತಡೆಹಿಡಿಯಬಲ್ಲ?" —ಈ ಕತೆಯ ನೆನಪು ಬಂದಾಗೆಲ್ಲ ನಾನು ಒಂದು ಮಂದಹಾಸವನ್ನು ಬೀರುತ್ತಿದ್ದೆ. ಹಲವು ಸಲ ಇದೇ ಕತೆಯನ್ನು ಗುರುದ್ವಾರದಲ್ಲಿ ಹೇಳಿದ್ದುಂಟು. ಆದರೆ ಗುಡ್ಡವನ್ನು ಅಂಗೈಯಿಂದ ತಡೆದ ಮಾತು ಕೇಳಿದಾಗ ನಾನು ತಲೆ ಅಲ್ಲಾಡಿಸುತ್ತಿದ್ದೆ.

ಕೆಲದಿನಗಳ ಮೇಲೆ ನಾವು ಕೇಳಿದೆವು. ಪಂಜಾಸಾಹಬದಲ್ಲಿ 'ಸಾಕಾ' ಜಾತ್ರೆ ಆಗಲಿದೆ. ಆಗಿನ ದಿನಗಳಲ್ಲಿ ಇಂಥ ಜಾತ್ರೆಗಳು ಬಹಳ ನಡೆಯುತ್ತಿದ್ದವು. 'ಸಾಕಾ' ನಡೆದಾಗೆಲ್ಲ ನನಗೆ ಗೊತ್ತು, ಅಂದು ನಮ್ಮ ಮನೆಯಲ್ಲಿ ಅಡಿಗೆ ಇಲ್ಲ. ಮತ್ತು ಆ ರಾತ್ರಿ ನಾವು ನೆಲದ ಮೇಲೆಯೇ ಮಲಗಬೇಕು. ಆದರೆ ಈ 'ಸಾಕಾ' ಅಂದರೆ ಏನು ?—ಇದು ನನಗೆ ಗೊತ್ತಿದ್ದಿಲ್ಲ.

ನಮ್ಮ ಊರು ಪಂಜಾಸಾಹಬದಿಂದ ಬಹಳೇನು ದೂರವಿಲ್ಲ. ಈ 'ಸಾಕೆ'ಯ ಸುದ್ದಿ ಬಂದೊಡನೆ ನನ್ನ ತಾಯಿ ಪಂಜಾಸಾಹಬಕ್ಕೆ ಹೊರಟಳು. ಜತೆಗೆ ನಾನು ನನ್ನ ತಂಗಿ ಇದ್ದೆವು. ಹಾದಿಯಲ್ಲಿ ನನ್ನ ತಾಯಿಯ ಕಣ್ಣು ಒದ್ದೆ ಆದವು. ನಮಗೆಲ್ಲ ಸೋಜಿಗ—ಕೊನೆಗೂ ಈ 'ಸಾಕಾ' ಏನು ? ಎಂದು.

ಪಂಜಾಸಾಹಬ ತಲುಪಿದ ಮೇಲೆ ನಾವು ಒಂದು ಅಪೂರ್ವ ಕಥೆಯನ್ನು ಕೇಳಿದೆವು.

ದೂರದ ಒಂದು ಪಟ್ಟಣದಲ್ಲಿ ಫಿರಂಗಿಗಳು ನಿಃಶಸ್ತ್ರ ಭಾರತೀಯರ ಮೇಲೆ ಗುಂಡು ಹಾರಿಸಿ ಕೆಲವು ಜನರನ್ನು ಕೊಂದುಹಾಕಿದ್ದರು. ಮಡಿದವರಲ್ಲಿ ಯುವಕರೂ ಇದ್ದರು, ಮುದುಕರೂ ಇದ್ದರು. ಸಾಯದೆ ಉಳಿದವರನ್ನು ರೈಲು ಗಾಡಿಗಳಲ್ಲಿ ತುಂಬಿ ತುಂಬಿ ಬೇರೊಂದು ಪಟ್ಟಣದ ಜೈಲಿಗೆ ಕಳುಹಿಸುತ್ತಿದ್ದರು. ಆ ಕೈದಿಗಳು ನೀರಡಿಸಿದ್ದರು, ಹಸಿದಿದ್ದರು. ಆದರೆ ಗಾಡಿಯನ್ನು ದಾರಿಯಲ್ಲಿ ಎಲ್ಲೂ ನಿಲ್ಲಿಸಬಾರದೆಂದು ಆಜ್ಞೆ ಆಗಿತ್ತು. ಈ ವಾರ್ತೆ ಪಂಜಾಸಾಹಬಕ್ಕೆ ಮುಟ್ಟಿದಾಗ ಅಲ್ಲಿಯ ಜನ ಅದನ್ನು ಕೇಳುತ್ತಲೆ ರೊಚ್ಚಿನಿಂದ ಉರಿಬೆಂಕಿ ಆಗಿಬಿಟ್ಟರು. ಪಂಜಾಸಾಹಬದಲ್ಲಿ ಬಾಬಾನಾನಕರು ಸ್ವಯಂ ಮರ್ದಾನಾನ ನೀರಡಿಕೆ ನೀಗಿಸಿದ್ದರು. ಅಂಥ ಪಟ್ಟಣದ ಮೇಲಿಂದ ಹಸಿವೆ-ನೀರಡಿಕೆಗಳಿಂದ ಬಳಲುವ ಪ್ರವಾಸಿಗರು ತುಂಬಿದ ಗಾಡಿ ಹಾದು ಹೋಗುವದೆಂದರೇನು ? ಕೂಡಲೇ ನಿರ್ಣಯುವಾಯಿತು. ಗಾಡಿಯನ್ನು ತಡೆಯಬೇಕು. ಸ್ಟೇಶನ್‌ಮಾಸ್ತರರಿಗೆ ಅರ್ಜಿ ಕೊಟ್ಟರು. ಟೆಲಿಫೋನ ಘಣ ಘಣಿಸಿದವು.

ತಂತಿ ಕಳಿಸಲಾಯಿತು. ಆದರೆ ಬ್ರಿಟಿಷರ ಹುಕುಮು ರೈಲು ದಾರಿಯಲ್ಲಿ ಎಲ್ಲೂ ನಿಲ್ಲಿಸಲಾಗದು. ಗಾಡಿಯಲ್ಲಿ ಕೂತ ಸ್ವಾತಂತ್ರ್ಯದ ವೀರರು ಮತ್ತು ದೇಶಭಕ್ತರು ಹಸಿದಿದ್ದರು. ಅವರಿಗಾಗಿ ನೀರಿನ ಯಾವ ವ್ಯವಸ್ಥೆಯೂ ಇದ್ದಿಲ್ಲ. ರೈಲು ಪಂಜಾಸಾಹಬದಲ್ಲಿ ನಿಲ್ಲುವದಿದ್ದಿಲ್ಲ. ಆದರೆ ಗಾಡಿಯನ್ನು ತಡೆದು ನಿಲ್ಲಿಸಲೇ ಬೇಕೆಂದು ಪಂಜಾಸಾಹಬದ ಜನರ ನಿಶ್ಚಯ ನಿಶ್ಚಲವಾಗಿತ್ತು. ನಗರದ ಜನರು ಸ್ಟೇಶನ್ನಿನಲ್ಲಿ ರೊಟ್ಟಿಗಳ, ಖೀರು, ಪೂರಿಗಳ ಮತ್ತು ಬೇಳೆ ಪಲ್ಲೆಗಳ ರಾಶಿ ಹಾಕಿದ್ದರು.

ಆದರೆ ರೈಲುಗಾಡಿ ಒಂದು ಬಿರುಗಾಳಿಯಂತೆ ಬರುವದು, ತೂಫಾನಿನಂತೆ ಹೋಗುವದು, ಅದನ್ನು ತಡೆಯುವದು ಹೇಗೆ?

ಆಗ ನನ್ನ ಅಮ್ಮನ ಗೆಳತಿಯು ನಮಗೆ ಹೇಳಿದಳು, "ಅಲ್ಲಿ ರೈಲು ಕಂಬಿಗಳ ಮೇಲೆ ಅವರು, ನನ್ನ ಮಕ್ಕಳ ತಂದೆ—ಅಡ್ಡಮಲಗಿದರು. ಆ ಮೇಲೆ ಅವರೊಂದಿಗೆ ಅವರ ಇತರ ಜತೆಗಾರರು ಅಡ್ಡಬಿದ್ದರು. ಅವರನಂತರ ನಾವು ಹೆಂಡಂದಿರು ಆಮೇಲೆ ನಮ್ಮ ಮಕ್ಕಳು ಮಲಗಿದರು. ರೈಲು ಬಂದಿತು—ದೂರದಿಂದಲೆ ಕೂಗುತ್ತ, ಕಿರಿಚುತ್ತ, ಸೀಟಿ ಊದುತ್ತ. ಗಾಡಿ ದೂರವೇ ಇತ್ತು. ಅದರ ಗತಿ ಮಂದವಾಯಿತು. ಆದರೂ ಅದು ರೈಲು ಗಾಡಿಯಲ್ಲವೇ? ತಡೆಯುತ್ತ ತಡೆಯುತ್ತ ನಿಲ್ಲುವದು. ನಾನು ನೋಡುತ್ತಿದ್ದಂತೆಯೇ ಗಾಡಿಯ ಚಕ್ರಗಳು ಅವರ ಎದೆಯ ಮೇಲೆ ಏರಿ ಬಂದವು. ಆಮೇಲೆ ಅವರ ಸಂಗಾತಿಗಳ ಎದೆಯಮೇಲೆ... ಆ ಮೇಲೆ ನಾನು ಕಣ್ಣು ತೆರೆದಾಗ ಗಾಡಿಯು ನನ್ನ ತಲೆಯಮೇಲೆ ನಿಂತಿತ್ತು. ನನ್ನ ಸಂಗಡ ಅಡ್ಡಬಿದ್ದ ಹೆಂಗಸರ ಬಾಯಿಯಿಂದ 'ಧನ್ಯ ನಿರಹಂಕಾರ', 'ಧನ್ಯ ನಿರಹಂಕಾರ' ದನಿ ಕೇಳಿ ಬರುತ್ತಿತ್ತು. ಮತ್ತು ನಾನು ನೋಡುತ್ತಿದ್ದಂತೆಯೇ ಗಾಡಿಯು ಹೊರಳಿತು ಮತ್ತು ಅದರ ಗಾಲಿಗಳ ನಡುವೆ ಬಂದ ಹೆಣಗಳು ಚೂರು ಚೂರಾದವು...

"ನಾನು ನನ್ನ ಕಣ್ಣಾರೆ ರಕ್ತದ ಹೊಳೆ ಹರಿದದ್ದು ಕಂಡೆ—ಆ ಹೊಳೆ ಹಾಗೆಯೇ ಹರಿಯುತ್ತ ಹರಿಯುತ್ತ ಕಟ್ಟಿದ ಕಾಲುವೆಯ ತನಕ ಮುಟ್ಟಿತು."

ನಾನು ಬೆರಗಿನಿಂದ ತಬ್ಬಿಬ್ಬಾಗಿ ನಿಂತುಬಿಟ್ಟೆ. ನನ್ನ ಬಾಯಿಯಿಂದ ಒಂದೂ ಮಾತು ಹೊರಡಲಿಲ್ಲ. ಆ ದಿವಸವಿಡಿ ನೀರಿನ ಒಂದು ಗುಟುಕೂ ನನ್ನ ಗಂಟಲಲ್ಲಿ ಇಳಿಯದೆ ಹೋಯಿತು.

ಸಂಜೆಗೆ ಮನೆಗೆ ಮರಳುವಾಗ ನಮ್ಮಮ್ಮ ನನ್ನ ತಂಗಿಗೆ ಪಂಜಾಸಾಹಬದ ಕತೆ ಹೇಳಲು ಆರಂಭಿಸಿದಳು, ಬಾಬಾ ನಾನಕರು ಮರ್ದಾನಾನ ಸಂಗಡ ಇತ್ತ ಕಡೆಗೆ ಹೇಗೆ ಬಂದರು; ಮರ್ದಾನಾನಿಗೆ ನೀರಡಿಕೆ ಹೇಗೆ ಆಯಿತು; ವಲಿ ಕಂಧಾರಿ ಮೂರು ಬಾರಿ ಮರ್ದಾನಾನಿಗೆ ನಿರಾಶೆಗೊಳಿಸಿ ಹಿಂದೆ ಅಟ್ಟಿದ; ಬಾಬಾ ನಾನಕರು ಮರ್ದಾನಾನಿಗೆ ಒಂದು ಕಲ್ಲನ್ನೆತ್ತಲು ಹೇಗೆ ಹೇಳಿದರು; ಅದರ ಕೆಳಗಿನಿಂದ ನೀರಿನ ಚಿಲುಮೆ ಹೇಗೆ ಒಡೆದು ಚಿಮ್ಮಿತು; ಮತ್ತು ವಲೀ ಕಂಧಾರಿಯು

ಬಾವಿಯ ನೀರೆಲ್ಲ ಗುಡ್ಡದ ಕೆಳಕ್ಕೆ ಸೆಳೆದಂತೆ ಹೋಗಾಯಿತು; ಆ ಮೇಲೆ ವಲೀ ಕಂಧಾರಿ ರೊಚ್ಚಿಗೆದ್ದು ಗುಡ್ಡದ ಒಂದು ಬಂಡೆಯನ್ನು ಹೇಗೆ ಕೆಳಗೆ ನೂಕಿದ. ಮರ್ದಾನಾ ಹೇಗೆ ಹೆದರಿ ಕಂಗೆಟ್ಟನು; ಆದರೆ ಬಾಬಾ ನಾನಕರು 'ಧನ್ನ ನಿರಹಂಕಾರ'ವೆಂದು ಹೇಳಿ ತನ್ನ ಕೈಯಿಂದ ಆ ಬಂಡೆಯನ್ನು ತಡೆಗಟ್ಟಿದರು.

"ಗುಡ್ಡವನ್ನು ಯಾರಾದರೂ ಹೇಗೆ ತಡೆಗಟ್ಟುವದು ಸಾಧ್ಯ?" ನನ್ನ ತಂಗಿ ಚಟ್ಟನೆ ಅಮ್ಮನನ್ನು ತಡೆದು ಕೇಳಿದಳು.

"ತಡೆಗಟ್ಟಲು ಯಾಕೆ ಸಾಧ್ಯವಿಲ್ಲ?" ನಾನು ನಡುವೆಯೇ ನುಡಿದೆದ್ದೆ. "ಬಿರುಗಾಳಿಯಂತೆ ಏರಿ ನುಗ್ಗಿ ಬರುವ ರೈಲು ಗಾಡಿಯನ್ನು ತಡೆಯುವದು ಸಾಧ್ಯ, ಅಂದಾಗ ಬಂಡೆಯನ್ನು ಯಾರು ತಡೆಯಲಾರರು?"

ಮತ್ತೆ ನನ್ನ ಕಣ್ಣಿನಿಂದ ಟಪ ಟಪ ನೀರು ಹನಿಯತೊಡಗಿತು,—ತಮ್ಮ ಪ್ರಾಣದ ಮೇಲೆ ಜೂಜಾಡಿ ನಿಲ್ಲಲಾರದ ರೈಲುಗಾಡಿಯನ್ನು ತಡೆದು, ತಮ್ಮ ಹಸಿದ ನೀರಡಿಸಿದ ದೇಶ ಬಾಂಧವರಿಗೆ ರೊಟ್ಟಿ ತಿನಿಸುವ ನೀರು ಕುಡಿಸುವ ಅದ್ಭುತ ಪವಾಡವನ್ನು ಎಸಗಿದ ಆ ಜನರಿಗಾಗಿ ಕಣ್ಣೀರು ಹರಿಯಿತು.

# ದಸೌಂಧಾ ಸಿಂಗ್

ದಸೌಂಧಾಸಿಂಗನಿಗೆ ಆ ರಸ್ತೆ ಗೊತ್ತಿತ್ತು. ಬಾನಿಹಾಲದಿಂದ ಹತ್ತು ಮೈಲು ಮುಂದೆ ಗುಡ್ಡದ ಏರಿಯಲ್ಲಿ ಬರುವ ಆ ಮುರುವಿನ ವರ್ಣನೆ ಆತ ತನ್ನ ಕ್ಲೀನರನಿಗೆ ಪಠಾನಕೋಟದಿಂದಲೇ ಹೇಳಲು ಆರಂಭಿಸಿಬಿಡುತ್ತಿದ್ದ. ಖರಬೂಜ ಹಣ್ಣಿನ ಹೋಳಿನಂತೆ ಇರುವ ರಸ್ತೆಯ ಆ ತುಂಡು ಬಹಳ ಕುಪ್ರಸಿದ್ಧವಾಗಿತ್ತು. ಹಿಮವೃಷ್ಟಿಯ ಹಂಗಾಮಿನಲ್ಲಿ ಜೋರಿನ ಗಾಳಿ ಬೀಸುತ್ತಿತ್ತು ಮತ್ತು ಗುಡ್ಡದ ಎತ್ತರದಿಂದ ಹಿಮ ಕೆಳಗೆ ನೂಕಲ್ಪಟ್ಟು ಹಾದಿ ಕಟ್ಟಾಗುತ್ತಿತ್ತು. ಆ ದಿನಗಳಲ್ಲಿ ಸರಕಾರದಿಂದ ಈ ಹಿಮ ವನ್ನು ಸರಿಸುವ ಕೆಲಸ ನಡೆದೇ ನಡೆಯುತ್ತಿತ್ತು—ರಸ್ತೆ ಸಾಗಾಟಕ್ಕೆ ತಡೆ ಆಗಬಾರದೆಂದು.

ಇಂದು ಹವಾಮಾನ ನಿಚ್ಚಳವಾಗಿತ್ತು. ಬಟೋತದಲ್ಲಿ ರಾತ್ರಿ ಕಳೆದಮೇಲೆ ದಸೌಂಧಾ ಸಿಂಗ್ ಸ್ಟೆಯರಿಂಗ ಹಿಡಿದುಕೊಂಡು ಕೂತ ಕೂಡಲೇ ಅಂದ, "ಬಲ್ಲೆ-ಬಲ್ಲೆ! ಎಲೋ ಈ ಹೊತ್ತು ಹೆದರಬೇಕಾಗಿಲ್ಲ, ಬಚ್ಚೂೄ." ಮತ್ತು ಕ್ಲೀನರನಿಗೆ ಮಾತುದ್ದ ಬಯ್ಗಳನ್ನು ಏರಿಸಿದ. ಯಾವ ಯಾವ ಪ್ರಾಣಿಗಳೊಂದಿಗೆ ಅವನ ಸಂಬಂಧ ಜೋಡಿಸಿದನೋ ಅವನಿಗೇ ಗೊತ್ತು. ಆ ಮೇಲೆ ಪ್ರಾರ್ಥನೆಯ ದನಿಯಲ್ಲಿ ಪಠಾಗವಾಗಿ ಅಂದ, "ವಾಹಗುರು, ಸತ್ಯಪಾದಶಾಹ! ನಿನ್ನದೇ ಆಸರೆ!"

ಗಾಡಿಯಲ್ಲಿ ಮೂವರು ಪ್ರಯಾಣಿಕರಿದ್ದರು. ಮತ್ತು ಬಹಳಷ್ಟು ಸಾಮಾನು ಹೇರಿತ್ತು. ದಸೌಂಧಾಸಿಂಗ್ ಇದುರಿನ ಕನ್ನಡಿಯಲ್ಲಿ ನೋಡಿ ಅಂದ, "ತಾವು ಮಂದಿ ವಾಹಗುರು, ಸತ್ಯಪಾದಶಾಹನ ಎರಡೂವರೆ ಮರಿಗಳು! ಇಬ್ಬರು ಗಂಡು, ಒಂದು ಹೆಣ್ಣು."

ಪ್ರಯಾಣಿಕರಲ್ಲಿ ಒಬ್ಬ ಗಂಡಸು ಅಂದ, "ಹೆಂಗಸನ್ನು ಅರ್ಧ ಪ್ರಯಾಣಿಕಳೆಂದು ಲೆಕ್ಕ ಹಾಕಿದೆಯೋ ಏನು?"

"ಹಾಗಾದರೆ ತಿಕೀಟೂ ಅರ್ಧ ಹಿಡಿಯಬೇಕು." ಹೆಂಗಸು ಬುಲ ಬುಲ ಹಕ್ಕಿಯಂತೆ ಚಿಲಿಪಿಲಿಸಿದಳು.

ಬಾನಿಹಾಲ ಗೇಟಿನಲ್ಲಿ ಗಾಡಿಗಳು ನಿಂತುಬಿಟ್ಟವು. ಗೇಟುತೆರೆಯಲು ಇನ್ನೂ ಇಪ್ಪತ್ತು ನಿಮಿಷಗಳಿದ್ದುವು. ದಸೌಂಧಾಸಿಂಹ ಹೇಳಿದ: "ಇಪ್ಪತ್ತು ಗಾಡಿಗಳು ನಮ್ಮ ಮುಂದೆ ಇದ್ದಾವೆ. ಮತ್ತು ಐದು ಗಾಡಿಗಳು ನಮ್ಮ ಹಿಂದೆ; ಒಟ್ಟೂ ಇಪ್ಪತ್ತಾರು ಆದವು. ನಾವೆಲ್ಲ ಒಟ್ಟಿಗೆ ಸಾಯುವೆವು, ಇಲ್ಲವೇ ಪಾರಾಗಿ ಹೋಗುವೆವು. ಖುಶುಮಾನವೇನೂ ಹೇಳಿಲ್ಲ." ಮತ್ತೆ ಆಕಾಶದತ್ತ ದಿಟ್ಟಿಸುತ್ತ ಆತ

ಅಂದನು, "ನಿನ್ನ ಇಚ್ಛೆ ಇಲ್ಲಿ ನೀನೇ ಬಲ್ಲೆ ; ವಾಹ ಗುರೂಜೀ! ಒಂದಲ್ಲ ಒಂದು ದಿನ ಟಿಕೀಟು ಹರಿಯುವದೇ ಇದೆ. ನಾನು ಅಲ್ಲಿಯೂ ನಿನ್ನ ಡ್ರೈವರ್ ಆಗುತ್ತೇನೆ".

"ನಾವಲ್ಲಿ ಕ್ಲೀನರ್ ಕೆಲಸ ಮಾಡಲಾರೆವು ಗುರುಗಳೇ ;" ಕ್ಲೀನರ್ ಅವನನ್ನು ತಡೆದು ಅಂದನು.

"ಸುಮ್ಮನಿರ್ ಬೇಃಃ ಆಲೂಗಡ್ಡೆ!" ದಸೌಂಧಾಸಿಂಹ ತನ್ನ ನಾಲಿಗೆಯ ಚುರುಕು ಕಾಣಿಸಿದ.

"ಗುರುಗಳೇ, ಈ ಕ್ಲೀನರ್ ಕೆಲಸ ಎಲ್ಲಿಯತನಕ ಮಾಡಿಸುವಿರಿ?" ಮುಂದಿನ ಸೀಟಿನಲ್ಲಿ ಕೂತಿದ್ದ ಕ್ಲೀನರ್ ಮೊದಲು ಹಿಂದಕ್ಕೆ ಹೊರಳಿ ಪ್ರಯಾಣಿಕರನ್ನು ನೋಡಿದ. ತಿರುಗಿ ತನ್ನ ಕಣ್ಣು ದಸೌಂಧಾಸಿಂಹನ ಮೇಲೆ ನಟ್ಟಿಟ್ಟ.

"ಸುಮ್ಮನಿರಬೇ ಕಚ್ಚೆಗಳ್ಳ." ಜಾನಿ ದಸೌಂಧಾಸಿಂಹ ಅವನಿಗೆ ಗತಿ ಕಾಣಿಸಿದ. "ನಿನಗೇನು ಬರುತ್ತೆ ಹ್ಯಾಂಡಲ್ ಹೊಡೆಯುವದೊಂದು ಬಿಟ್ಟು. ಮನಸ್ಸಿಗೆ ಬಂದಂತೆ ಹರಟೆಹೊಡೆಯುವದು."

"ಈ ಜೀವದ ಗೆಳೆಯ ಕಚ್ಚೆಗಳ್ಳನದೇನು ಕಥೆ ಸರದಾರಜೀ ?" ಹೆಂಗಸು ನಗುತ್ತ ಕೇಳಿದಳು.

ದಸೌಂಧಾಸಿಂಹ ಮುಂದಿನ ಕನ್ನಡಿಯಲ್ಲಿ ನೋಡಿ ಆ ಬಡಕಲು ಬಳಕುವ ಮೈಯ್ಯ ಹುಡುಗಿಯ ಉದ್ದನೆ ಮುಖದ ಮೇಲಿನ ದೊಡ್ಡ ದೊಡ್ಡ ಕಣ್ಣುಗಳ ಲೆಕ್ಕ ಹಾಕುತ್ತ ಅಂದ, "ದಶಮ ಬಾದಶಾಹ, (ಗುರು ಗೋವಿಂದ ಸಿಂಹ) ಹೇಳಿ ಹೋದರು ಬೀಬೀ! ಏನು ಹೇಳಿ ಹೋದರು ? ಪಂಚಕ ಕಾರಗಳನ್ನು ಧರಿಸಿರಿ: ಕಡಗ, ಕೇಶ, ಕಂಘೀ (ಹಣಿಗೆ), ಕೃಪಾಣ—ಇವು ನಾಲ್ಕು ಆದವು. ಮತ್ತು ಐದನೆಯದು ಕಚ್ಚೆ. ಒಂದುಸಲ ಸೈತಾನಗಲ್ಲಿಯಲ್ಲಿ ಕುಠಾರಿಯಿಂದ ಹಿಮವನ್ನು ಸರಿಸುವಾಗ ಇವನ ಕಚ್ಚೆ ಕಳೆದುಹೋಯಿತು. ಆಗ ನಾವು ನಮಗಾಗಿ ಜಮ್ಮುನಿಂದ ಹೊಲಿಸಿ ತಂದ ಕಚ್ಚೆಯನ್ನು ಇವನಿಗೆ ತೆಗೆದುಕೊಟ್ಟೆವು. ಅಂದಿನಿಂದ ವಾಹ ಗುರುವಿನನಾಣೆ, ಈ ನಮ್ಮ ಜಾನೀ ಕಳ್ಳ ತನ್ನ ಸಂಬಳದಿಂದ ಎಂದೂ ಕಚ್ಚೆ ಹೊಲಿಸಿಕೊಳ್ಳುವದಿಲ್ಲ. ಕಚ್ಚೆ ಹರಿದಾಗೆಲ್ಲ, ಗುರುಗಳೇ ಅಲ್ಲ ಬಾಬು ಎಂದು ಕರೆದು ಕೈ ಜೋಡಿಸುತ್ತಾನೆ!"

ಆ ತೆಳ್ಳನ ಪತಂಗ ಕನ್ನೆ ತನ್ನ ಇಬ್ಬರೂ ಸಂಗಾತಿಗಳಿಗೆ ಅಂದಳು, "ಈ ಸರದಾರಜೀಗೂ ನಮ್ಮ ಯಾವದಾದರೊಂದು ಡ್ರಾಮಾದಲ್ಲಿ ಒಂದು ಪಾರ್ಟು ಕೊಟ್ಟರೆ ಎಷ್ಟು ಚೆನ್ನಾದೀತು!"

"ನಮಗೆ ಯಾವದೇ ಡ್ರಾಮಾದಲ್ಲಿ ಪಾರ್ಟು ಆ ಮೇಲೆ ಕೊಡುವಿರಂತೆ." ದಸೌಂಧಾಸಿಂಹ ಗೇಟು ತೆರೆದ ಸುದ್ದಿ ಕೇಳಿ ಅಂದ: "ಈ ಸೈತಾನಗಲ್ಲಿಯಿಂದ ಪಾರು ಮಾಡು ಸತ್ಯಪಾದಶಾಹ! ಪಾರಾಗಿ ಬದುಕಿ ಉಳಿದರೆ ಪಾರ್ಟು ಮಾಡೋಣ."

ಮುಂದಿನ ಗಾಡಿಗಳು ಲಗು ಲಗು ಗೇಟುದಾಟಿ ಹೋಗುತ್ತಿದ್ದವು. ದಸೌಂಧಾ ಸಿಂಹನೂ ಗೇಟು ಪಾರು ಮಾಡಿದನು.

ಹೆದ್ದಾರಿಯ ರಸ್ತೆಯಲ್ಲಿ ಏರುತ್ತೇರುತ್ತ, ಗುಡ್ಡದ ಎತ್ತರದತ್ತ ನೋಡಿ ತನ್ನ ಎರಡೂ ಕೈಗಳಿಂದ ಕಿವಿಗಳನ್ನು ಮುಟ್ಟಿಕೊಂಡು ಆತ ಅಂದ, "ಸತ್‌ನಾಮು, ಶ್ರೀ ವಾಹಗುರು! ಅಲಖ ಪುರುಷ! ನಿನ್ನದೇ ಆಸರೆ!" ಮತ್ತು ಮತ್ತೊಮ್ಮೆ ಕಿವಿ ಮುಟ್ಟಿಕೊಂಡು ಗಾಡಿಯನ್ನು ನಡೆಯಿಸುತ್ತ ಅಂದ, "ಸಚ್ಚಾಬಾದಶಾಹ! ನಿನ್ನ ಉಡಿ ಆಶ್ರಯ! ಪಂಚತತ್ವದ ಮೂರ್ತಿ ಮಾಡಿದಿ. ಒಬ್ಬ ಡ್ರೈವ್ಹರ್, ಆದರೆ ಮತ್ತೊಬ್ಬ ಕ್ಲೀನರ್, ಕೆಲವರು ಡ್ರಾಮಾದಲ್ಲಿ ಆಕ್ಟರರೂ ಆಗಿದ್ದಾರೆ." ಮತ್ತೆ ಆತ ಆ ತೆಳ್ಳನ್ನ ಪತಂಗ ಕನ್ನೆಯ ಉದ್ದನ್ನ ಮೊಗದ ಉದ್ದನ್ನ ಗದ್ದದ ಮೇಲಿನ ದೊಡ್ಡ ಮತ್ತಿ (ಮಚ್ಚೆ)ಯ ಮೇಲೆ ತನ್ನ ಕಣ್ಣೆವೆಗಳನ್ನು ಹಾಸುತ್ತ ಅಂದನು, "ಬೀಬೀ, ತಾವು ಡ್ರಾಮಾ ಮಾಡ್ತೀರಾ? ತಮಗೆ ಯಾವ ಪಾರ್ಟು ಸಿಗುತ್ತದೆ?"

ತೆಳ್ಳನ್ನ ಪತಂಗ ಕನ್ನೆಯ ಒಬ್ಬ ಸಂಗಾತಿ ಸರದಾರಜಿಯ ಹೆಗಲನ್ನು ಚಪ್ಪರಿಸುತ್ತ ಅಂದ, "ಇವಳು ಗುಲಹಿಮಾ—ಹಿರಾಯಿನ್‌ಳಿಗೂ ಕಡಿಮೆಪಾರ್ಟು ಮಾಡುವದೇ ಇಲ್ಲ."

ಗುಲಹಿಮಾ ಅಂದಳು, "ಇವರು ನಮ್ಮ ಡೈರೆಕ್ಟರು, ಸರದಾರಜೀ! ಮತ್ತು ಇದು ಅವರ ಅನುಗ್ರಹ—ನನಗೆ ಹಿರಾಯಿನ್ ಮಾಡುತ್ತಾರೆಂಬುದು. ಹಾಗೆ ಸೇಠಜೀಗೂ ನನ್ನ ಕೆಲಸ ಮೆಚ್ಚಿಗೆ ಆಗುತ್ತದೆ."

ಡೈರೆಕ್ಟರ ಹುಂಜದಂತೆ ಹೊಟ್ಟೆಸೆಟೆದುಕೊಂಡು ಅಂದ, "ಗುಲಹಿಮಾ, ನೀನು ಹಿರಾಯಿನ್ ಆಗಲಿಕ್ಕೇ ಹುಟ್ಟಿಬಂದವಳು, ಕಣೇ. ಈ ಮಾತು ಸೇಠಜೀ ಹಲವು ಸಾರೆ ಹೇಳಿಬಿಟ್ಟಿದ್ದಾರೆ. ಕೊನೆಗೂ ಇದೆಲ್ಲ ಅವರ ದೌಲತ್ತಿನದೇ ಆಟ!"

ಮೂರನೆಯ ಸಂಗಾತಿ ಭಾರಿ ಮೃದುವಾಗಿ ಹೇಳಿದ, "ಗುಲಹಿಮಾಳ ಡಾಯಲಾಗ ನಾನೇ ಬರೆಯಬೇಕಾಗುತ್ತದೆ ಸರದಾರಜೀ!"

"ಅಚ್ಛಾ, ಹಾಗಾದರೆ ತಾವು ಡ್ರಾಮಾ ಬರೆಯುತ್ತೀರಾ?" ಸರದಾರಜೀ ವೇಗದಿಂದ ಸ್ಟಿಯರಿಂಗ ತಿರುಗಿಸುತ್ತ ಅಂದ, "ಓಯ್ ಬಲ್ಲೆ ಬಲ್ಲೆ! ಸಚ್ಚಾಪಾದಶಾಹ! ನಮ್ಮ ದಶಮ ಪಾದಶಾಹ (ಗುರು ಗೋವಿಂದಸಿಂಹ)ರೂ ವಿಚಿತ್ರನಾಟಕ ಬರೆದಿದ್ದರು. ಬಾಪೂಜೀ ಹೇಳುತ್ತಿದ್ದರು. ದಶಮಗುರುಗಳು ನಾರಿಯ ಎಲ್ಲ ಚರಿತ್ರ ಅದರಲ್ಲಿ ತೆರೆದು ತೋರಿಸಿದ್ದಾರೆ. ಒಂದು ಸಲ ನಮ್ಮ ಅಜ್ಜಿ ಕೇಳಿದಳು—ಮಗೂ ನನ್ನಲ್ಲಿಯೂ ನಾರಿಯ ಚರಿತ್ರ ಉಂಟೇ? ಬಾಪೂಜಿ ಅಂದರು—ನೀನು ನಮ್ಮ ತಾಯಿ. ಆದ್ದರಿಂದ ಒಂದೆರಡು ಕಡಿಮೆ ಒಂದೆರಡು ಹೆಚ್ಚು ಇರಬಹುದು." ಮತ್ತೆ ದಸೌಂಧಾ ಸಿಂಹ ಗುಡ್ಡದ ಎತ್ತರದ ವಿಚಾರ ಮಾಡುತ್ತಾ ಅಂದ, "ಈಗ ನೈತಾಸಗಲ್ಲಿ ದೂರ ಎಲ್ಲ; ನಮ್ಮ ಎರಡೂವರೆ ಮರಿಗಳ ಹೊಣೆ ನಿನ್ನ ಮೇಲೆಯೋ—ಸಚ್ಚಾಪಾದಶಾಹ!

ಇಂದು ಸೈತಾನಗಲ್ಲಿಯ ನಾಟಕದೊಳಗಿಂದ ಸುರಕ್ಷಿತವಾಗಿ ಪಾರಾಗಿ ಹೋಗಿರಿ. ಹಿಮದೊಂದಿಗೆ ಎಂಥ ಗೆಳೆತನ? ಓಯ್ ಒಲ್ಲೆ ಒಲ್ಲೆ! ನಮ್ಮ ಗೆಳೆತನ ಇದ್ದದ್ದು ಬೆಂಕಿಯ ಸಂಗಡ—ಅದು ಪಂಚತತ್ವದ ಮೂರ್ತಿಯ ತಾಯಿಯೂ ಹೌದು, ಅವನನ್ನು ತಿನ್ನುವವಳೂ ಹೌದು."

ಹಾದಿಯ ಅಂಚಿಗೆ ಒಂದು ಸ್ಥಳದಲ್ಲಿ ದಸೌಂಧಾಸಿಂಹ ಗಾಡಿ ನಿಲ್ಲಿಸಿದ. ಹಿಂದಿನ ಗಾಡಿಗಳು ಮುಂದೆ ಸಾಗಿಹೋದವು.

"ಏಕೆ ನಿಂತಿರಿ ಯಾಕೆ, ಸರದಾರಜೀ?" ಗುಲಹಿಮಾ ಚಕಿತಳಾಗಿ ಕೇಳಿದಳು.

ದಸೌಂಧಾಸಿಂಹ ಗಾಡಿಯಿಂದ ಹೊರಗೆ ಬಂದು ಅಂದ, "ಓಯ್ ಕಚ್ಚೆಗಳ್ಳ, ಜಾನೀ, ಹೊರಗೆ ಬಾ ನೋಡು. ಗಾಳಿಯ ನಾಡಿ ಏನು ಹೇಳುತ್ತದೆ?"

ಜಾನೀಕಳ್ಳ ಹೊರಗೆ ಬರುವಾಗ ಕಿಟಕಿಯಲ್ಲಿ ಸಿಲುಕಿ ಅವನ ರುಮಾಲು ರಸ್ತೆಯಲ್ಲಿ ಹೋಗಿಬಿತ್ತು. ಅವನು ಎರಡುಸಲ ಮಂಡೆಯನ್ನು ಗಂಟಿಕ್ಕಿಕೊಂಡು ಬಣ್ಣಬಣ್ಣದ ರುಮಾಲನ್ನು ತಲೆಗೆ ಬಿಗಿದು ಸುತ್ತುತ್ತ ಅಂದ, "ಗಾಳಿ ಏನು ಹೇಳ್ತದೆ ಗುರುಗಳೇ? ನಿನ್ನ ಈ ಸಂಶಯ ಯಾವಾಗ ದೂರವಾಗುವದೋ?"

ಗುಲಹಿಮಾ ಅಂದಳು, "ಮಹೇಶಜೀ, ನಮ್ಮ ಮುಂದಿನ ಡ್ರಾಮಾದಲ್ಲಿ ಒಂದೆರಡು ಡಾಯಲಾಗ ಜಾನಿಯದೂ ಬರಬೇಕು." ಮತ್ತೆ ಡೈರೆಕ್ಟರನ ಕಡೆಗೆ ಕಣ್ಣು ಹೊರಳಿಸಿ ಅಂದಳು, "ಅಖ್ತರ ಸಾಹೇಬರೇ, ನಮ್ಮ ಬರುವ ಯಾವದೇ ಡ್ರಾಮಾದಲ್ಲಿ ಈ ಕಚ್ಚೆಗಳ್ಳ ಸಾಬೂನಿನ ನೊರೆಯಂತೆ ಎದ್ದು ಒಂದು ಕ್ಷಣ ತನ್ನ ಬಣ್ಣ ಕಾಣಿಸಿ ಕೂತುಬಿಟ್ಟರೆ ಅದ್ಭುತವಾದೀತು! ಬಸ್ ಭಾರಿ ಮಜಾ ಬಂದುಬಿಟ್ಟೀತು!"

"ನಾನಂತೂ ಸರದಾರಜೀಗಾಗಿ ಒಳ್ಳೇಪಾತ್ರ ಆಲೋಚನೆ ಮಾಡುತ್ತಾ ಇದ್ದೆ." ಅಖ್ತರನ ದನಿ ಏರುತ್ತ ಹೋಯಿತು. ಮತ್ತು ಗಾಡಿಯ ಮೇಲ್ಭಾಗದ ಕಡೆ ದಿಟ್ಟಿಸುತ್ತ ದನಿಯನ್ನು ತಿರುಗಿ ಸಮಕ್ಕೆ ತಂದು ಅಂದ, "ನಿನ್ನ ವಿಚಾರವೇನು ಗುಲಹಿಮಾ?" ಡೈರೆಕ್ಟ್ ಮಾಡುತ್ತ ಅವನಿಗೆ ಹಲವಾರು ದನಿಗಳನ್ನು ಬದಲಿಸುವ ಅಭ್ಯಾಸವಾಗಿಬಿಟ್ಟಿತ್ತು.

"ಅದು ಮಹೇಶಜೀಗೆ ಕೇಳಿರಿ. ಡಾಯಲಾಗಿನ ಒಡೆಯರು ಅವರು;" ಗುಲಹಿಮಾಳ ತುಟಿಗಳಲ್ಲಿ ಮುಗುಳುನಗೆ ಉಬ್ಬಿಬಂತು—ಹಾಡಿನ ನುಡಿಯಲ್ಲಿ ಹೊಸ ಉಪಮೆಯೊಂದು ಮೂಡಿ ಹೋಗುವಂತೆ.

"ನಾನು ನಿನ್ನ ಡಾಯಲಾಗ ಜೋಡಿಸುತ್ತಿದ್ದೆ ಗುಲಹಿಮಾ!" ಮಹೇಶ ಗಂಭೀರನಾಗಿ ಹೇಳಿದ: "ನಿನ್ನ ತಾಯಿ ನಿನ್ನನ್ನು ಚಿನಾರದ ತರಗೆಲೆಗಳ ರಾಶಿಯ ಮೇಲಿಂದ ಎತ್ತಿ ತಂದಿದ್ದಳು. ಈ ಮಾತನ್ನು ನೀನು ಸ್ಟೇಜಿನ ಮೇಲೆ ನಿನ್ನ ಬಾಯಿಯಿಂದಲೇ ಹೇಳಿದರೆ ತುಂಬ ಸೊಗಸಾದೀತು."

ಅಖ್ತರ ಅನ್ನಹತ್ತಿದ, "ಎಲ್ಲ ಮಕ್ಕಳೂ ಇದೇ ರೀತಿ ಸಿಗುತ್ತವೋ? ಕೆಲವು ಚಿನಾರದ ತರಗೆಲೆಗಳ ರಾಶಿಯ ಮೇಲೆ ಮತ್ತೆ ಕೆಲವು ಹುಲ್ಲು ತುಂಬಿದ ಕೋಣೆಯಲ್ಲಿ. ಶಕುಂತಲೆಯೂ ಕಣ್ವಋಷಿಗೆ ಅಡವಿಯ ಒಂದು ಮೂಲೆಯಲ್ಲಿ ಎಲೆಗಳ ರಾಶಿಯಮೇಲೆ ಸಿಕ್ಕಿದ್ದಳು."

ದಸೌಂಧಾಸಿಂಹ ಮುಂದೆ ಸಾಗುವ ಬದಲು ಹಿಂದೆ ಹೋಗುವ ವಿಚಾರ ಪ್ರಸ್ತಾಪಿಸುತ್ತಿದ್ದ.

ಕಳ್ಳಜಾನೀ ಅಂದ, "ಇದೆಲ್ಲ ಬರೇ ನಿಮ್ಮ ಸಂಶಯ. ಗುರುಗಳೇ, ರಸ್ತೆಯಲ್ಲಿ ಎಲ್ಲೂ ಹಿಮದ ಹೇಳ ಹೆಸರೇ ಇಲ್ಲ. ಗಾಳಿ ಚೆನ್ನಾಗಿ ಬೀಸುತ್ತಿದೆ. ಇಷ್ಟು ಹೊತ್ತಿನಲ್ಲಿ ನಾವು ಸುರಂಗ ಪಾರುಮಾಡಿ ಹೋಗುತ್ತಿದ್ದೆವು."

"ನಿಮ್ಮ ಜಾನೀಕಳ್ಳ ಅನ್ನೋದು ಸರಿ ಸರದಾರಜೀ," ಗುಲಹಿಮಾ ಸೀಟಿನಲ್ಲಿ ಕೂತಲ್ಲಿಯೇ ಕಣ್ಣು ಮಿಟುಕಿಸಿದಳು. ಈಗ ಹೊರಡಬೇಕು. ನಮ್ಮ ಅಡ್ವಾನ್ಸ ಸ್ಕ್ವಾಡ್ ಶ್ರೀನಗರದಲ್ಲಿ ನಮ್ಮ ದಾರಿ ಕಾಯುತ್ತಿರಬೇಕು."

"ಬೀಬೀ ನಿಮಗೆ ಗೊತ್ತಿಲ್ಲ." ದಸೌಂಧಾಸಿಂಹ ಎರಡೂ ಕೈಗಳಿಂದ ಕಿವಿ ಮುಚ್ಚಿಕೊಂಡು ಅಂದ: "ಗಾಳಿಯಲ್ಲಿ ದನಿ ಬರುತ್ತಾ ಉಂಟು. ಯಾರೋ ಜಪದ ಪಾಠ ಹೇಳುತ್ತಿದ್ದಂತೆ. ಇದೇ ಸ್ಥಳದಲ್ಲಿ ಕಳೆದವರ್ಷ ನನ್ನ ಗೆಳೆಯ ಡ್ರೈವರ್ ಅಜಿತ ಹಿಮದಡಿಗೆ ಹೂಳಿಬಿದ್ದು ಸತ್ತಿದ್ದ. ಮೂರು ತೊಲೆ ಚಿನ್ನದ ಬೆಂಡೋಲೆಗಳನ್ನು ಮಾಡಿಸಿಕೊಂಡು ತಂದಿದ್ದ. ಅದೇ ದಿನ ಅವನ ಸ್ವರ್ಣಾಳ ಹುಟ್ಟಿದ ದಿನವಿತ್ತು. ಅಜೀತ ಜಪಜೀಯ ಪಾಠ ಮಾಡುತ್ತಾ ಸತ್ತಿದ್ದ. ನಿಮಗೆ ಅಜೀತನ ದನಿ ಕೇಳಿ ಬರುವದಿಲ್ಲವೇ?"

"ನಾನು ಇವೆಲ್ಲ ಮಾತು ನನ್ನ ಡ್ರಾಮಾದಲ್ಲಿ ಜೋಡಿಸಬಲ್ಲೆ" ಮಹೇಶ ತಲೆಗೂದಲಲ್ಲಿ ಬೆರಳುಗಳನ್ನೇ ಬಾಚಣಿಗೆಯಂತೆ ಆಡಿಸುತ್ತ ಅಂದ.

ಕ್ಲೀನರ್ ಮತ್ತು ಅಖ್ತರ್ ಸರದಾರಜಿಯನ್ನು ಒತ್ತಾಯಪಡಿಸಹತ್ತಿದರು— ಗಾಡಿಯನ್ನು ಹೊರಡಿಸಬೇಕೆಂದು.

"ಚಪ್ಪಾಳೆ ಬಾರಿಸಿರಿ, ಎರಡೂವರೆ ಮರಿಗಳೇ?" ದಸೌಂಧಾಸಿಂಹ ತನ್ನ ಹಟ ಬಿಡುತ್ತ ಅಂದ ಮತ್ತು ಗಾಡಿಯನ್ನು ಮುಂದೆ ನಡೆಯಿಸಹತ್ತಿದ.

ಗುಲಹಿಮಾ ಚುಟಕಿ ಬಾರಿಸಿ ಅಂದಳು, "ಸರದಾರಜೀ ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಆ ಸೈತಾನಗಲ್ಲಿ ಸುರಂಗವನ್ನು ಪಾರುಮಾಡಿಬಿಡುವರು!"

ಗಾಡಿ ಸೈತಾನಗಲ್ಲಿಯ ನಟ್ಟ-ನಡುವೆ ಮುಟ್ಟಿದೊಡನೆ ಗುಲಹಿಮಾ ಕೂಗಿದಳು, "ಸರದಾರಜೀ, ಗಾಡಿ ನಿಲ್ಲಿಸಿ."

ಗಾಡಿ ನಿಂತೊಡನೆ ಗುಲಹಿಮಾ ಹೊರಗೆ ಬಂದು "ಬೆಟ್ಟದ ಈ ನೋಟವಾದರೂ

ಎಷ್ಟು ಭಾರಿ ಚೆಂದ! ಮುಂದಿನಸಲ ನಾವು ಸೇಠಜಿಯನ್ನೂ ಸಂಗಡ ಕರಕೊಂಡು ಬರೋಣ."

ಅಖ್ತರ್ ಅಂದ, "ಒಬ್ಬ ಆರ್ಟಿಸ್ಟನನ್ನೂ ಜತೆಗೆ ತರಬೇಕು—ಈ ದೃಶ್ಯವನ್ನು ತೆರೆಯ ಮೇಲೆ ಮೂಡಿಸಲಿಕ್ಕೆ."

ನೋಡು ನೋಡುತ್ತ ಗುಡ್ಡದ ಇಳುಕಲಿನ ಮೇಲಿಂದ ಹಿಮದ ತುಂಡುಗಳು ಬೀಳಹತ್ತಿದವು. ದಸೌಂಧಾಸಿಂಹ ಗಾಬರಿಯಾಗಿ ಅಂದ, "ಹವಾಮಾನ ಕೆಟ್ಟು ಹೋಯಿತು. ಹವೆ ಸೈತಾನನ ರೂಪಕ್ಕೆ ಇಳಿದಿದೆ. ಇಂದು ಕ್ಷೇಮವಿಲ್ಲ, ಸತ್ಯ ಪಾದಶಾಹ! ನಿನ್ನ ಸಂಕಲ್ಪ ಸವಿಯಾಗಲು ಇಂದು ಹಿಮದ ಅಡಿಗೇ ನಮ್ಮ ಹಸೆ ಹಾಸುವದು." ಮತ್ತು ಆತ ಗಾಡಿಯನ್ನು ನಡೆಯಿಸಲು ವ್ಯರ್ಥಪ್ರಯತ್ನ ಮಾಡ ತೊಡಗಿದ. ಜಾನೀಗೆಳೆಯ (ಕ್ಲೀನರ) ಹ್ಯಾಂಡಲ್ ಹೊಡೆಯುತ್ತಿದ್ದ.

ದಸೌಂಧಾಸಿಂಹ ಗಾಡಿಯ ಮೇಲೆ ಬೈಗಳ ಸುರಿಮಳೆಗರೆಯುತ್ತಿದ. "ಸತ್ತವಳೇ, ನಿನಗೀಗ ಅಟ್ಟ ತುಂಬುವ ಕಾಲ ಬಂದಿದೆ. ನಿನ್ನ ವಾತಕ್ಕೆ, ಕೆಮ್ಮು-ದಮ್ಮಿಗೆ ನಮ್ಮಲ್ಲಿ ಮದ್ದೇ ಇಲ್ಲ."

ಕ್ಲೀನರ್ ಕುಠಾರಿಯಿಂದ ಹಿಮವನ್ನು ಸರಿಸಲು ಹೆಣಗಾಡುತ್ತಿದ್ದ. ದಸೌಂಧಾಸಿಂಹ ಹೇಳುತ್ತಿದ್ದ, "ಈಗೇನುಮಾಡೋದು ಬೀಬೀ? ಇಂಜನ್ನಿನ ಯಾವದೇ ಯಂತ್ರ-ಕೀಲ ಮುರಿದಿದ್ದರೆ ವಾಹಗುರುವಿನ ಆಣೆಯಾಗಿಯೂ ನನ್ನ ಹಲ್ಲು ಕಿತ್ತು ಅಲ್ಲಿ ಜೋಡಿಸಿಬಿಡುತ್ತಿದ್ದೆ. ಟಾಯರು ಹರಿದರೆ ಟಾಯರು ಇಲ್ಲದೆಯೇ ಗಾಡಿಯನ್ನು ಸುರಂಗದ ಬಾಯಿಗೆ ಒಯ್ಯುತ್ತಿದ್ದೆ." ಮತ್ತೆ ಆತ ಆಕಾಶದತ್ತ ದಿಟ್ಟಿಸಿ ಅಂದ, "ಸತ್ಯಪಾದಶಾಹ! ತಾವಂತೂ ಹಿಮದಿಂದ ಇಂಜಿನ್ನನ್ನೇ ತಣ್ಣಗೆ ಮಾಡಿ ಬಿಟ್ಟಿರಿ!".

ಗುಲಹಿಮಾ ಅಂದಳು, "ನನ್ನದು ಯಾವಾಗಿನಿಂದಲೂ ಒಂದು ಇಚ್ಛೆ ಇತ್ತು—ನನ್ನ ಸಾವು ಯಾವದೇ ಗುಡ್ಡದ ತಳದಲ್ಲಿ ಆಗಬೇಕು. ಕೆಲವು ನನ್ನ ಆಪ್ತರು ನನ್ನ ಜತೆಗೆ ಆಗ ಇರಬೇಕು. ಅಖ್ತರ, ಆ ಹೊತ್ತು ಈಗ ಬಂದಿದೆ."

ದಸೌಂಧಾಸಿಂಹ ಕೆಳಗೆ ಇಳಿದು ಹೋದನು. ಮತ್ತು ಕ್ಲೀನರ ಜಾನಿಯನ್ನು ಕೊರಳಿಗೆ ಅಪ್ಪಿಕೊಂಡು ಅಂದನು, "ಜಾನೀ, ನೀ ನನ್ನ ಪ್ರಾಣ! ಓಯ್! ಇದುರಿಗೆ ಸಾವು ನಿಂತಿದೆಯೋ ಮಗನೇ!"

ಮಹೇಶ ದಸೌಂಧಾಸಿಂಹನ ಕಣ್ಣಿನಲ್ಲಿ ಕಂಬನಿ ಕಂಡನು. ಆತ ಅಂದ, "ನೋಡಿದೆಯಾ ಗುಲಹಿಮಾ? ಆದರೆ ನನಗೆ ಸಾವು ಅಪ್ಪಿಕೊಳ್ಳಲಿಕ್ಕೆ ಒಂದು ರವೆಯಷ್ಟೂ ದುಃಖ ಆಗಬಾರದು. ನಾನು ನನ್ನ ಡ್ರಾಮಾದ ಹಿರಾಯಿನ್‌ಳ ಸಂಗಡ ಇದ್ದೇನಲ್ಲ!"

"ಮಹೇಶ ಯಾವಾಗಲೂ ಎಚ್ಚರದಿಂದ ನೋಡಿಕೊಂಡು ಮಾತನಾಡು." ಅಖ್ತರ್ ಉಪದೇಶದ ತೆರೆಯ ಮರೆಯಲ್ಲಿ ತನ್ನ ಈರ್ಷೆಯ ಉರಿಯನ್ನು ಅಡಗಿಸುತ್ತ ಅಂದ, "ತುಸು ವಿಚಾರಮಾಡು. ನಾವು ಎಲ್ಲಿ ಹೋಗುವವರು, ಏನು ಮಾಡುವವರು!"

ದಸೌಂಧಾಸಿಂಹ ಹೇಳುತ್ತಲೇ ಇದ್ದ, "ಸತ್ಯವಾದಶಾಹ! ನನ್ನ ಡ್ರಾಮಾ ಇಷ್ಟು ಪೂರ್ತಿ ಆಗಲಿ, ಆಮೇಲೆ ಬೇಕಾದರೆ ತೆರೆ ಇಳಿಯಲಿ."

ಮಹೇಶ ಅಂದ, "ಸರದಾರಜೀ, ತಾವು ನಮ್ಮ ಡ್ರಾಮಾದ ಹೀರೋ."

ದಸೌಂಧಾಸಿಂಹ ಜೋಲುಮೋರೆ ಹಾಕಿ ಅಂದ. "ಗಡ್ಡದವ ಎಂದಾದರೂ ಹೀರೋ ಆಗುವದುಂಟೇ? ಓ ಯಾರೋ. ಎದೆಯಾಸೆ ಒಂದು ಉಳಿದುಬಿಟ್ಟಿತು." ತಿರುಗಿ ಆತ ಆಶ್ಚರ್ಯದಿಂದ ಅಂದ: "ಇದೇನು? ಇಲ್ಲಿಯೂ ಅಜೀತನ ಜಪದ ಪಾಠದ ದನಿ ಕೇಳಬರಹತ್ತಿದೆ?"

ಮಹೇಶ ಸರದಾರಜೀಯ ಮಾತನ್ನು ಕೇಳಿಯೂ ಕೇಳದಂತೆ ನಟಿಸಿ ಅಂದ, "ಗುಲಹಿಮಾ! ಏನಿದು? ಗಾಡಿಯ ಗಾಲಿಗಳು ನಿಂತುಬಿಟ್ಟಂತೆ ನಿನ್ನ ತುಟಿಯ ಮೇಲಿನ ಮುಗುಳುನಗೆಯೂ ಹೆಪ್ಪುಗಟ್ಟುವಂತಿದೆ!"

ಅಖ್ತರ್ ಅಂದನು, "ನಾವು ಸತ್ತ ಮೇಲೆ ಇಲ್ಲಿಂದ ಹಾದುಹೋಗುವವರಿಗೆ ನಮ್ಮ ಡಾಯಲಾಗ ಕೇಳಿ ಬರಹತ್ತುವದು. ಆದ್ದರಿಂದ ಸ್ವಲ್ಪ ಜೋಕೆಯಿಂದ ನಿನ್ನ ಡಾಯಿಲಾಗ ಜೋಡಿಸು ತಮ್ಮಾ!"

"ಬದುಕುಳಿಯುವದೇ ನಮ್ಮ ಭೋಗವಾಗಿದ್ದರೆ ಸಾಯಲು ಬಯಸುವವರು ಯಾರು?" ಮಹೇಶ ಅಂದನು, "ಏಕೆ ಗುಲಹಿಮಾ?"

ದಸೌಂಧಾಸಿಂಹ ಹೇಳುತ್ತಿದ್ದ, "ಓಯೆ ಜಾನೀ, ನೀನು ಸ್ವಲ್ಪ ಜಪಪಾಠ ಹೇಳು ಮತ್ತು ನಿನ್ನ ಸಾಯುವ ಗಳಿಗೆಯನ್ನು ಸುಧಾರಿಸಿಕೋ." ತಿರುಗಿ ಆಕಾಶದತ್ತ ದಿಟ್ಟಿಸುತ್ತ ಆತ ಅಂದ "ಓಯೆ ವಾಹಗುರುವೇ, ನಿನ್ನ ಸೇವಕ ತಪ್ಪುಗಾರ! ನಮ್ಮಿಂದ ನಿನ್ನ ನಾಮಜಪ ಮಾಡಲಾಗುವದಿಲ್ಲ!"

ಕಳ್ಳಚಾನೀ ಇದೇ ತಾನೇ ಕುಠಾರಿ ಎತ್ತಿಕೊಂಡು ಹಿಮವನ್ನೆತ್ತಿ ಹಾಕುತ್ತಿದ್ದ. ಆತ ದನಿಯೇರಿಸಿ ಅಂದ, "ನಮ್ಮದೂ ಒಂದು ಮಾತು ಕೇಳಿ ಗುರುಗಳೇ, "ಬೆಂಕಿಯಲ್ಲಿ ಸುಟ್ಟು ಸಾಯುವದಕ್ಕಿಂತ ಹಿಮದಡಿಗೆ ಅಡಸಿ ಸಾಯುವದು ಸಾವಿರಪಾಲು ಒಳ್ಳೆಯದು!"

ಗುಲಹಿಮಾ ಮಹೇಶನತ್ತ ನೋಡಿ ಅಂದಳು, "ಈ ಡಾಯಲಾಗನ್ನು ನೋಟ ಮಾಡಿಕೊಳ್ಳಿ."

"ಇದಕ್ಕನ್ನುತ್ತಾರೆ ಡ್ರಾಮಾ." ಅಖ್ತರ ತನ್ನ ಜ್ಞಾನದ ದರ್ಪ ಬೀರಿದ.

'ಮಂಚದ ಮೇಲೆ ಹಿಮ್ಮಡ ತಿಕ್ಕಿ ತಿಕ್ಕಿ ಸಾಯುವದಕ್ಕಿಂತ ಈ ಸಾವು ಲೇಸು. ಏಕೆ ಗುಲಹಿಮಾ, ನಿನ್ನ ಹೆಸರು 'ನೋಶಲಬ' ಎಂದಿದ್ದರೆ ಹೇಗಿತ್ತು?"

ದಸೌಂಧಾಸಿಂಹ ಹೇಳುತ್ತಿದ್ದ, "ಅಜೀತ ಜಪಜಿಯ ಪಾಠ ನಿಲ್ಲಿಸಿರಿ. ನಮಗೆ ಗುಲಹಿಮಾಳ ಮಾತು ಕೇಳಗೊಡಿ."

ಅಖ್ತರ್ ಅಂದ. "ನನ್ನ ಹೆಂಡತಿ ಮಕ್ಕಳ ಗತಿ ಏನಾಗುವದು? ಇದು ಸೈತಾನಗಲ್ಲಿ. ಈ ಬಿರುಗಾಳಿಯ ಸಂಜೆ ಮತ್ತು ಈ ಗುಲಹಿಮಾ—ಇವುಗಳ ಹೆಸರು 'ನೋಶಲಬ' ಎಂದಿರಬೇಕಿತ್ತು.

"ನಾವೆಲ್ಲ ರಿಹರ್ಸಲ್ ಮಾಡಲು ಒಟ್ಟು ಕೂಡಿದ್ದೇವೆ. ನಾನು ಡೈರೆಕ್ಟರರ ಸೂಚನೆಯಂತೆ ಕುಣಿಯಬೇಕಾಗಿದೆ—ಎಂದು ತಾವು ತಿಳಿದಂತಿದೆ." ಗುಲಹಿಮಾಳ ಗಹಗಹಿಸಿದ ನಗು ಉಪಹಾಸದ ಹದ್ದನ್ನು ಮುಟ್ಟ ಹತ್ತಿತು.

ಮಹೇಶನೂ ಸುಮ್ಮನುಳಿಯಲಾರ. "ಗುಲಹಿಮಾ, ನನಗೆ ಹೆಂಡತೀನೂ ಇಲ್ಲ, ಮಕ್ಕಳು ಮರಿನೂ ಇಲ್ಲ. ನಾನಂತೂ ಸತ್ತಮೇಲೆಯೂ ಇದನ್ನೇ ಹೇಳುವೆ, ಶೇಕ್ಸಪಿಯರನಂತೆ ನಾನು ಹ್ಯಾಮಲೆಟ ಬರೆಯಲಾರದೇ ಹೋದೆ!"

ಗುಲಹಿಮಾ ಅಂದಳು, "ಸರದಾರಜೀ ಹೀರೋ—ಬಹಳ ದೊಡ್ಡ ಹೀರೋ ಅವರೊಂದಿಗೆ ಬದುಕು ಚೇಷ್ಟೆಮಾಡಿದೆ. ಯಾರು ಹೀರೋ ಆಗಬೇಕಿತ್ತೋ ಅವರು 'ಬಿ' ಕ್ಲಾಸ ಬಸ್ಸಿನ ಡ್ರೈವರ್‌ರಾಗಿದ್ದಾರೆ! ಮತ್ತು ಯಾರು ನಿಜವಾಗಿಯೂ ಡ್ರೈವರ್ ಅಲ್ಲ, ಕ್ಲೀನರ್ ಆಗಿರಬೇಕೋ ಅವರು ಹೀರೋ ಆಗಿ ಕೂತಿದ್ದಾರೆ! ಈ ಪ್ರಪಂಚವಾದರೂ ಒಂದು ವಿಚಿತ್ರ ಅದ್ಭುತ ಸ್ಥಳ!"

ಗಾಳಿಯೊಂದಿಗೆ ಇಷ್ಟು ಮಬ್ಬು ಎಲ್ಲಿಂದ ಬಂದಿತ್ತೋ, ರಸ್ತೆಯೇ ಕಾಣುತ್ತಿದ್ದಿಲ್ಲ. ಮತ್ತೆ ಮೆಲ್ಲಮೆಲ್ಲಗೆ ಹಿಮವೃಷ್ಟಿ ಆಗಹತ್ತಿತು. ಈಗ ಬೇರೆ ಉಪಾಯವೇ ಇದ್ದಿಲ್ಲ—ಈ ಎರಡೂವರೆ ಮರಿಗಳಂತೆಯೇ ದಸೌಂಧಾಸಿಂಹ ಮತ್ತು ಜಾನೀಕ್ಲೀನರ ಗಾಡಿಯೊಳಗೇ ಮುದುಡಿಕೊಂಡು ಕುಳಿತಿರಬೇಕು.

ಅಖ್ತರ್ ಪೂರಾ ತೆಪ್ಪಗಾಗಿಬಿಟ್ಟ. ಗುಲಹಿಮಾ ಮತ್ತೆ ಮತ್ತೆ ಕರೆದರೂ ಮಾತಾಡಲು ಒಪ್ಪಲಿಲ್ಲ. ಆತ ಕೂತಲ್ಲಿಯೇ ಸಿಗರೇಟಿನ 'ದಮ್ಮು' ಎಳೆಯಹತ್ತಿದ.

ಮಹೇಶ ಗುಲಹಿಮಾಳ ಇನ್ನೂ ಹತ್ತಿರಕ್ಕೆ ಸರಿದು ಅಂದ, "ಜೀವನ ಮತ್ತು ಮರಣಗಳ ನಡುವೆ ಕೆಲವೇ ಮೋಗಳ ಅಂತರ ಉಳಿದುಬಿಟ್ಟಿದೆ. ಸಂಜೆಯ ಕತ್ತಲೆ ಇಳಿಯಹತ್ತಿದೆ. ಗುಲಾಬೋ ಗೂಜರೀಯ ನೆನವು ಯಾಕೆ ಬರತ್ತಾ ಇದೆ? ಅವಳು ಜಾತ್ರೆಯ ಮಿಠಾಯಿಗಾರನಿಗೆ ಹಾಲು ಕೊಡಲಿಕ್ಕೆ ಬರುತ್ತಿದ್ದಳು. ಮತ್ತು ನಾನು ನನ್ನ ಡಾಯಲಾಗ ಜೋಡಿಸಲಿಕ್ಕೆ ಒಂದು ಪಾವು ಹಾಲಿಗಾಗಿ ಆ ಅಂಗಡಿಯಲ್ಲಿ ನಿಂತಿರುತ್ತಿದ್ದೆ. ಅಂದಿನಿಂದ ಇಂದಿಗೆ ಹತ್ತುವರ್ಷದ ಅಂತರವಿದೆ. ಆದರೆ ಇದೆಂಥ ಮಾತು, ಗುಲಹಿಮಾ, ನಿನ್ನ ಕಿರುನಗೆಯಲ್ಲಿ ಗುಲಾಬೋಳದೇ ಉಸುರಿನ ಕಂಪು

ಅರಗಿ ಬಿರಿತಂತೆ ಅನಿಸುತ್ತದೆ! ನನಗೆ ನೆನಪಿದೆ, ಗುಲಹಿಮಾ, ನೀನೊಮ್ಮೆ ಹೇಳಿದ್ದಿ, 'ಮಹೇಶ ನಾನು ಬೆಂಕಿ. ಯಾರು ನನ್ನ ಹತ್ತಿರಕ್ಕೆ ಬರುತ್ತಾರೋ ಅವರು ಭಸ್ಮವಾಗಿ ಬಿಡುತ್ತಾರೆ.'—ಇಂದು ನನಗೆ ಇಚ್ಛೆಯಾಗಿದೆ—ಈ ಬೆಂಕಿಯಲ್ಲಿ ಭಸ್ಮವಾಗಿ ಬಿಡಬೇಕು."

ಗುಲಹಿಮಾ ನಗುತ್ತ ಅಂದಳು, "ಹೆಸರು ಗುಲಹಿಮಾ. ಅಂದರೆ ಹಿಮದ ಹೂವು. ಆದರೆ ನಿಜವಾಗಿಯೂ ನಾನು ನನ್ನ ಎದೆಯಲ್ಲಿ ಒಂದು ಬೆಂಕಿಯನ್ನು ಅಡಗಿಸಿಕೊಂಡು ಕೂತಿದ್ದೇನೆ."

ಮಹೇಶ ಕೇಳಿದ, "ಹಿಮವನ್ನು ಬೆಂಕಿಯೇ ಇದುರಿಸಬಲ್ಲುದು. ಇದು ನಿಜವೇ?"

ಹೊರಗೆ ಹಿಮವೃಷ್ಟಿ ಆಗುತ್ತಲೇ ಇತ್ತು.

ದಸೌಂಧಾಸಿಂಹ ಮತ್ತು ಕ್ಲೀನರ್ ಜಾನೀ ಇಬ್ಬರೂ ಗರಬಡಿದವರಂತೆ ತಬ್ಬಿಬ್ಬಾಗಿದ್ದರು. ಅಖ್ತರನೂ ಸಿಗರೇಟನ್ನು ಸಂದಿಸಿದ್ದನು.

ಮಹೇಶ ಅಂದನು, "ಗುಲಹಿಮಾ, ನೀನು ನನ್ನ ಸಂಗಡ 'ವಾರ್ ಎಂಡ್ ಪೀಸ್' ಚಿತ್ರ ನೋಡುವಾಗ ಅಂದಿದ್ದಿ—ನೀನು ಪಿಯಾರೆಗೆ ಹೇಗೆ ಹೋಲುತ್ತೀ, ಮಹೇಶ! ನೀನು ಪಿಯಾರೆಯಂತೆ ಉದ್ದನೂ ಆಗಿದ್ದರೆ... ನಿನ್ನ ಕಣ್ಣ ಮೇಲೆ ದೊಡ್ಡ ಕಾಜಿನ ಕನ್ನಡಕವೂ ಏರಿದ್ದರೆ..." ಈಗ ಈ ಬಿರುಗಾಳಿಯಿಂದ ಪಾರಾದರೆ ನಾನು ಅಂಥ ಒಂದು ಕನ್ನಡಕ ಏರಿಸಿಕೊಂಡೇ ಬಿಡುತ್ತೇನೆ. ಇನ್ನು ಉಳಿದ ಪ್ರಶ್ನೆ ಉದ್ದವಾಗುವದು, ಅದಕ್ಕೆ ನಾನು ಎತ್ತರದ ಪ್ಲಾಟಫಾರ್ಮಿನ ಮೇಲೆ ನಿಂತು ಮಾತಾಡುವೆ."

ಗುಲಹಿಮಾ ನಕ್ಕುಬಿಟ್ಟಳು—ಕೊಳಲಿನ ಗಾನ ಸಮದಿಂದ ಪಂಚಮಕ್ಕೆ ಏರಿದಂತೆ.

ಹೊರಗೆ ಹಿಮವೃಷ್ಟಿ ಆಗುತ್ತಲೇ ಇತ್ತು. ದಸೌಂಧಾಹಿಂಹ ಮೌನದ ಮಾರ್ಗ ಬಿಟ್ಟು ಒಮ್ಮೊಮ್ಮೆ 'ಅಕಾಲಪುರುಷ' (ದೇವರು) ನನ್ನು ಕೂಗುತ್ತಿದ್ದ.

ಅಖ್ತರ ಸೋತು ಹೊಸ ಸಿಗರೇಟು ಹೊತ್ತಿಸಿದನು. ಮತ್ತು ಉದ್ದವಾಗಿ 'ಝುಂರುಕಿ' ಎಳೆದು ಅದನ್ನು ಸಂದಿಸಿ ಇಟ್ಟನು.

ದಸೌಂಧಾಸಿಂಹ ಘೋಷಿಸಿದನು, "ನಿಮ್ಮ ನಿಮ್ಮ ದೇವರ ಹಾಗೂ ಗುರುಗಳ ಧ್ಯಾನ ಮಾಡಿರಿ. ಮಿತ್ರರೇ ಸಾವಿನೊಂದಿಗೆ ಭೆಟ್ಟಿ ಆಗಲು ಇನ್ನು ಬಹಳ ತಡವಿಲ್ಲ."

ಗುಲಹಿಮಾ ಅಂದಳು, "ತಾವಂತೂ ನಮ್ಮ ಹೀರೋ!"

ಮಹೇಶ ಗುಲಹಿಮಾಳ ಹತ್ತಿರಕ್ಕೆ ಬಗ್ಗಿ ಅಂದ, "ನಿನ್ನ ದನಿಯಲ್ಲಿ ಮಾರ್ದವದೊಂದಿಗೆ ಮೊನಚೂ ಇದೆ. ಅದು ನಾನು ಎಲ್ಲಿಂದ ತರಲಿ? ಕಲ್ನಾರಲ್ ಡೆಲಗೇಶನ್ನಿನೊಂದಿಗೆ ಸಮುದ್ರದಾಚೆಗೆ ಹೋಗುವಾಗ ನನಗೆ ನನ್ನ ಪ್ರೇಮದ ಜರತಾರೀ

ರುಮಾಲನ್ನು ಜತೆಗೆ ಒಯ್ಯಬೇಡ. ನಾನಂತೂ ಪ್ರೇಮದ ಪ್ರತೀಕವನ್ನು ಶ್ರೀನಗರದ ಕೆಂಪು ಚೌಕದಲ್ಲಿ ನಿಂತುಕೊಂಡು ಒಂದು ಗೋಲ್ಡ ಫ್ಲೇಕ ಡಬ್ಬಿಗಾಗಿ ಮಾರಲು ಸಿದ್ಧ."

ಗುಲಹಿಮಾ ಗಂಭೀರಳಾಗಿ ಅಂದಳು, "ಶ್ರೀನಗರದ ಕೆಂಪು ಚೌಕದಲ್ಲಿ ಯಾರದೋ ಕೆಂಪು ರುಮಾಲು ಯಾರು ಮಾರುವವರು? ಒಂದು ರುಮಾಲಿನ ಬಿನ್ನಹದಲ್ಲಿ ನೀವು ಬಹುಶಃ ಇಡಿ ಬಾಳು ಚಡಪಡಿಸುವಿರಿ."

ಮಹೇಶ ಗೋಲ್ಡಫ್ಲೇಕದ ಡಬ್ಬಿಯೊಳಗಿಂದ ಕೊನೆಯ ಸಿಗರೇಟ ತೆಗೆದು ಹೊತ್ತಿಸಿ ಅಂದನು, "ನಾನು ಎಷ್ಟು ಸಂಭಾವಿತನಾಗಿ ಕಾಣುವೆನೋ ಬಹುಶಃ ಅಷ್ಟು ಒಳ್ಳೆಯವನಿಲ್ಲ. ಗುಲಹಿಮಾ, ನಾನು ನನ್ನ ಬಾಳಿನಲ್ಲಿ ಹದಿಮೂರು ಬಾರಿ ಪ್ರೀತಿ ಮಾಡಿದ್ದೇನೆ. ಸಮುದ್ರದಾಚೆಗೆ ನಗೆ ಅಟ್ಟಹಾಸ ಬೀರುತ್ತಿರುವಾಗ ನಮ್ಮನ್ನು ನೆನಪಿನಲ್ಲಿ ತರುತ್ತಿರು."

ದಸೌಂಧಾಸಿಂಹ ನೆನಪಿನ ಗಾಡಿಯನ್ನು ಹಿಂದಕ್ಕೆ ಹೊರಳಿಸಿ ಹೇಳಿದ, "ನಿನ್ನ ಈ ಮೇಳದ ಯಜಮಾನರಿಗೆ ಮಾತುಕತೆ ಮಾಡಲು ಬರುವದಿಲ್ಲವೆಂದು ತೋರುತ್ತಿದೆ. ಸತ್ಯಪಾದಶಾಹ, ವಾಹ ಗುರೂಜೀ, ಗುಲಾಬೋ ಗೂಜರಿಯನ್ನು ಹಿಮದ ಹೂವಾಗಿ ಮಾಡಿದ್ದು ನಿಜವೇ ಸರಿ. ನೋಡಿ, ಪ್ರೇಮದ ದಾರಿ ಬೆಂಕಿಯ ದಾರಿ. ನಾವು ಯಾವಾಗಾದರೂ ಯಾರಿಗಾದರೂ ಪ್ರೇಮ ಮಾಡಿದ್ದುಂಟು. ಮತ್ತು ಅವರದೇ ನೆನಪಿನಲ್ಲಿ ಈಗ ರಸ್ತೆಯಲ್ಲಿ ಗಾಡಿ ಓಡಿಸುತ್ತಿದ್ದೇನೆ. ಈಗ ನಮ್ಮ ಪ್ರೇಮ ಕಿಕ್ಕರ ಸೇಂದಿಯೊಂದಿಗೆ ಕೂಡಿಬಿಟ್ಟಿದೆ; ಸತ್ಯಪಾದಶಾಹರೇ, ಒಂದು ಮಾತು, ನಾವು ಆ ಜರೂರ ತಿಳಿದಿರುತ್ತೇವೆ. ಕಿಕ್ಕರ ಸೇಂದಿ ಬೆಂಕಿ. ಮತ್ತು ಹಿಮದಲ್ಲಿ ಬೆಂಕಿಯು ಅಗತ್ಯವಿರುತ್ತದೆ." ಆಮೇಲೆ ನೆನಹುಗಳ ಅಗಷ್ಟಿಗೆಯಲ್ಲಿ ಉರುವಲ ಒಟ್ಟುವವನಂತೆ ಅಂದ "ಅವಳೂ ಇದೇ ರಸ್ತೆಯಲ್ಲಿ ಸಿಕ್ಕಿದ್ದಳು. ಹೂವಿನ ಜೀವ! ಅವಳ ಹೆಸರಿತ್ತು ಲಾಲಾರುಖ! ಬಟೋತದ ಡಾಕ ಬಂಗಲೆಯಲ್ಲಿ ಆರಾಮಕುರ್ಚಿಯಲ್ಲಿ ಕೂತು ಸವಿ ಸವಿ ಮಾತಾಡುತ್ತಿದ್ದಳು."

ಗುಲಹಿಮಾ ಅಂದಳು, "ನಾವೆಲ್ಲರೂ ನಮ್ಮ ನಮ್ಮ ಡ್ರಾಮಾ ಆಡುತ್ತಿದ್ದೇವೆ."

"ಮತ್ತೂ ನಾವು ಒಬ್ಬರೊಬ್ಬರ ಪಾತ್ರಗಳ ಜತೆಗೆ ನಗಬಲ್ಲೆವು, ಅಳಬಲ್ಲೆವು" ಮಹೇಶ ಆಶ್ವಾಸನವಿತ್ತ.

"ಆದರೆ ಸರದಾರಜೀ ಒಂದು ಡ್ರಾಮಾದ ಹಿರಾಯಿನ್‌ಳನ್ನು ಇನ್ನೊಂದು ಡ್ರಾಮಾದ ಹಿರಾಯಿನಳೊಂದಿಗೆ ಬೆರಸಿದಂತೆ ಕಾಣುತ್ತದೆ." ಅಖ್ತರನಿಗೆ ಸುಮ್ಮ ನಿರಲು ಆಗಲಿಲ್ಲ. "ವಾಹ ಸರದಾರಜೀ, ತಮ್ಮದೇನು ಅಂಬೋಣ?"

ದಸೌಂಧಾಸಿಂಹ ನೋಡಿದ. ಗುಡ್ಡದ ಮೇಲಿಂದ ಜಾರುವಷ್ಟು ಹಿಮವೆಲ್ಲ ಜಾರಿ ಬಿಟ್ಟಿತ್ತು. ಹಿಮವೃಷ್ಟಿಯೂ ನಿಂತುಬಿಟ್ಟಿತ್ತು. ಒಮ್ಮೆಲೆ ಗುಡ್ಡದ ಅಡಿಯಿಂದ

ಕೆಳಗಡೆಯಿಂದ ಒಂದು ಬೆಳಕು ಕಂಡಿತು. ಆತ ತನ್ನ ಕೈಗಳನ್ನು ಮೇಲೆತ್ತಿ ಉಚ್ಚ ಸ್ವರದಿಂದ ಕೂಗಿದ : " ಬೆಂಕಿ ! ಬೆಂಕಿ ! ನಾವು ಪಾರಾದಿವಿ. ಹೂವಿನ ಜೀವವೇ ನಾವು ಬದುಕುಳಿದಿವಿ. ಓಯೆ ಭಲೆ ಭಲೆ ! ಓಯೆ ಭಲೆ ಭಲೆ ! "

ಆತ ಹೊರಗೆ ಬಂದು ನೋಡಿದ. ಹಿಮವೃಷ್ಟಿ ಪೂರ್ತಿ ನಿಂತಿತ್ತು. ಮತ್ತು ಮುಸುಕಿದ ಮಬ್ಬೂ ಕಡಿಮೆಯಾಗಿತ್ತು. ಹಿಮದ ಮೇಲೆ ನಿಂತು ಆತ ಗುಣಗುಣಿಸ ಹತ್ತಿದ.

ಕುಡಿಯೆ ಬಂಗಾಲದೀಯೆ

ನೀ ದುಖ ತೈನೂ ಕೇಡೀ ಗಲದಾ ?

ಮತ್ತೆ ಆತ ಖುಷಿಯಿಂದ ಜಿಗಿದು ಹಾರಿ ಅಂದ, " ಓಯೆ ಬುಲ್‌ಬುಲ್‌ದ ಲಾಂದ್ರೇ, ಲೇಡೀಜ ಎಂಡ ಜೈಂಟಲ್ ಮೆನ್ ! ಪ್ರಾಣ ಉಳಿಯಿತು, ಚೆಲುವರೇ ! "

ಎರಡೂವರೆ ಮರಿಗಳೂ ಗಾಡಿಯಿಂದ ಹೊರಗೆ ಬಂದಿದ್ದರು. ಗುಲಹಿಮಾ ನಕ್ಕು ಅಂದಳು, " ಸರದಾರಜೀ, ನಿಮ್ಮ ಡೈಲಾಗ ಮತ್ತೊಮ್ಮೆ ಹೇಳಿರಿ ! "

ದಸೌಂಧಾಸಿಂಹ ಆ ಖುಷಿಯಲ್ಲಿ ಅರ್ಧ ದನಿಯಲ್ಲಿ ಹೇಳಿದ, " ಎಲ್ಲಿ ಹೊಲಸು ಕಚ್ಚಾ ಕನ್ಸೆ ! ಎಲ್ಲಿ ಹೂವಿನ ಜೀವ ! ಎಲ್ಲಿ ಬುಲ್‌ಬುಲ್‌ದ ಲಾಂದ್ರು ! ಬೆಂಕಿಯ ಹತ್ತಿರವಾದರೂ ಒಮ್ಮೆ ಹೋಗಿ ಮುಟ್ಟೋಣ. ಆಮೇಲೆ ಇಂಥ ಮಾತು ಕೇಳಿಸು ತ್ತೇನೆ, ಇಂಥ ಗೆಜ್ಜೆ ನುಡಿಸುತ್ತೇನೆ. ನಿಮ್ಮ ಈ ಇಬ್ಬರೂ ಡ್ರಾಮಾಕಾರರು ಅದರ ಮುಂದೆ ಗೂಗೆ ಆಗದಿದ್ದರೆ ನನ್ನ ಹೆಸರನ್ನೆಲ್ಲ ಬದಲಿಸಿ ಬಿಡುತ್ತೇನೆ, ಹೂವಿನ ಪ್ರಾಣವೇ ! "

ಗುಲಹಿಮಾಳ ನಗೆ ಈಗ ತಡೆಯುವಂತೆ ಆಗಲೇ ಇಲ್ಲ.

ಅಖ್ತರ ಸಿಗರೇಟ ಹೊತ್ತಿಸಿ ಎಳೆದ ಮತ್ತು ಮಹೇಶನ ಹೆಗಲ ಮೇಲೆ ಕೈ ಹೊಡೆದು ಅಂದ : " ನನಗೆ ಇನಕ್ರಿಮೆಂಟ ಸಿಕ್ಕಿಬಿಡುವದು. "

ಜಾನೀ ಕುಠಾರಿ ಎತ್ತಿಕೊಂಡು ರಸ್ತೆ ಬಿಟ್ಟು ಕೆಳಗಡೆಗೆ ಹಾದಿ ಮಾಡಲು ಹತ್ತಿದ. ಯಾವದೋ ಕಲ್ಲಮೇಲೆ ಹೆಜ್ಜೆ ಬಿದ್ದದರಿಂದ ಆತ ಜಾರಿ ಬಿದ್ದ—ಎರಡು ಮೂರು ಕೆಳಗೆ ಜಾರಿ ಹಿಮದಲ್ಲಿ ಮಂಡಿಯೂರಿ ಹೊಕ್ಕಿ ಕೂತ. ಬಹಳೇ ಕಷ್ಟದಿಂದ ಆತ ತನ್ನನ್ನು ಸಾವರಿಸಿಕೊಂಡ. ಅಖ್ತರ ಮತ್ತು ಮಹೇಶ ಮೂರು ನಾಲ್ಕು ಡಬ್ಬಿ ಎತ್ತಿಕೊಂಡು ಜಾನಿಯ ಹಿಂದೆ ಓಡಿದರು. ಕಷ್ಟವಿತ್ತು ಗುಲಹಿಮಾಳಿಗೆ. ಬೆಂಕಿ ಎಷ್ಟು ಹತ್ತಿರವೋ ಹಾದಿ ಅಷ್ಟೇ ಕಠಿಣವಿತ್ತು.

ದಸೌಂಧಾಸಿಂಹ ಕಿಕ್ಕರಿ ಸೇಂದಿ ಡಬ್ಬಿಯಲ್ಲಿ ಇಟ್ಟ. ಮತ್ತು ಗುಲಹಿಮಾಳಿಗೆ ಅಂದ : " ಪಥ್ಯದ ದಶಮಿ ತಿನ್ನುವವರು ನಿನ್ನನ್ನು ಹೇಗೆ ಎತ್ತಬಹುದು. ಹೂವಿನಾ ಜೀವಾ ? ವಾಹಗುರುವಿನ ಆಣೆ ! ನಿನ್ನ ಹೊತ್ತು ನಡೆಯುವ ಕೆಲಸ ತಂದೂರಿ ರೊಟ್ಟಿ ತಿನ್ನುವವನೇ ಮಾಡಬಲ್ಲ. ನೀ ಹೆದರುವದಿಲ್ಲವಷ್ಟೇ ಹೂವಿನ ಜೀವಾ ? "

ಈಗ ಗುಲಹಿಮಾ ದಸೌಂಧಾಸಿಂಹನ ತೋಳುಗಳಲ್ಲಿ ಇದ್ದಳು. ಆತ ಅನ್ನುತ್ತಲೇ ನಡೆದಿದ್ದ, "ಹೂವಿನ ಜೀವಾ! ಜೀವದ ಹೂವೇ! ನಿನಗೆ ಹೂವಿನ ಹಾಗೆ ಆಚೆಗೆ ಹೊತ್ತೊಯ್ದು ಇಳಿಸುತ್ತೇನೆ. ಓಯೆ ಬುಲ್‌ಬುಲ್‌ದ ಲಾಂದ್ರೆ, ಲೇಡೀ ಎಂಡ ಜೈಂಟಲಮನ್!"

ಇಬ್ಬರ ಮೈಗಳ ಕಾವೂ ಎಷ್ಟು ಹಿಮವನ್ನು ಕರಗಿಸಿ ಬಿಟ್ಟಿತೋ ಗೊತ್ತಾಗಲಿಲ್ಲ.

ಅಗಷ್ಟಿಗೆ ಹಿಡಿದಿದ್ದ ಗೂಜರ (ಗೊಲ್ಲ) ಮುದುಕ ತನ್ನ ಹೆಸರು ರಹೀಮೂ ಎಂದು ಹೇಳಿದ. ಅವನ ನಾಯಿ ಬೊಗಳುತ್ತಾ, ಒಳಗೆ ಬರುವ ಅತಿಥಿಗಳ ಸ್ವಾಗತ ಮಾಡುತ್ತಿತ್ತು.

ದಸೌಂಧಾಸಿಂಹನಿಂದ ಗಾಡಿ ಹಿಮದಲ್ಲಿ ಹುಗಿದುಬಿದ್ದ ಕತೆ ಕೇಳಿ ರಹಿಮೂ ಅಂದ, "ಹಿಮದಿಂದ ಬದುಕಿ ಉಳಿಯಲಿಕ್ಕೆ ಎಲ್ಲರಿಗೂ ಸುದೈವದಿಂದ ಬೆಂಕಿ ಸಿಕ್ಕಿದೆ." ಮತ್ತು ಆ ನಾಯಿಯೂ ಉದ್ಧದನಿ ತೆಗೆದು ತನ್ನ ಒಡೆಯನ ಮಾತಿನ ಸಮರ್ಥನೆ ಮಾಡಿತು.

ದಸೌಂಧಾಸಿಂಹ ಡಬ್ಬಿಯಿಂದ ಕಿಕ್ಕರ ಸೇಂದಿ ಹೊರಗೆ ತೆಗೆದ. ಮತ್ತು ಜೇಬಿನಿಂದ ಒಂದು ಗ್ಲಾಸು ತೆಗೆದ. ಅವನು ಅಂದ: "ಓಯೆ ಚಾಚಾ ರಹಿಮೂ, ಇದು ನಮ್ಮ ಬೆಂಕಿ. ನಾವು ಪತಿಯಾಲಾ ಪೆಗ್ ಕುಡಿಯೋರು."

ಆತ ಪೆಗ್ ಮುಂದೆ ಮಾಡುತ್ತ ಅಂದ, "ಮೊದಲಿಗೆ ನೀವೇ ನಮ್ಮ ಬೆಂಕಿಯ ನೈವೇದ್ಯ ತಕ್ಕೊಳ್ಳಿ, ಹೂವಿನ ಜೀವಾ!"

ಸೂಚನೆ ತಿಳಿದು ರಹಿಮೂ ನಾಲ್ಕು ಲೋಟಾ ಮತ್ತು ನೀರಿನ ತಂಬಿಗೆ ಎತ್ತಿ ತಂದನು.

ಮೊದಲನೆಯ ಪೆಗ್ ಗುಲಹಿಮಾಳ ಕೈತನಕ ತಲುಪಿತ್ತು. ಆ ಮೇಲೆ ಎಲ್ಲರಿಗೂ ಅವರವರ ಪೆಗ್ ಸಿಕ್ಕಿತು. ಚಾಚಾ ರಹಿಮೂ ಸರಾಯಿ ಕುಡಿಯಲು ಸಿದ್ಧನಾಗಲಿಲ್ಲ.

ದಸೌಂಧಾಸಿಂಹ ಕಿಕ್ಕರ ಸೇಂದಿಯ ನಾಲ್ಕು ಗುಟುಕು ತುಂಬಿಕೊಂಡು ಅಂದ, "ಓಯೆ ಚಾಚಾ, ಬಿಳಿ ಗಡ್ಡದ ಪೀರ ಬಿಳಿ ಕುದುರೆಯ ಮೇಲೆ ನಮ್ಮ ಬಿಕ್ಕಟ್ಟುಗಳನ್ನು ಬಿಡಿಸಿ ಸರಿಮಾಡಲಿಕ್ಕೆ ಯಾಕೆ ಬರಲಿಲ್ಲ? ಈಗಿತ್ತಲಾಗಿ ಕುದುರೆ ಸವಾರಿ—ಪೀರನಿಗೆ ಒಗ್ಗುವದಿಲ್ಲವೇ?"

ಚಾಚಾರಹಿಮೂ ಅಂದ, "ಸರದಾರ, ಹೊರಗೆ ಬಂದಾಗ ಹಿಮ ಸುರಿಯ ಹತ್ತುವದು. ಆಗ ಪೀರ ತನ್ನ ಬಿಳಿ ಕುದುರೆಯಮೇಲೇರಿ ಬಂದು ನಮಗೆ ತನ್ನ ಮೋರೆ ತೋರಿಸುತ್ತಾನೆ. ಆಗ ಪೀರನಿಗಾಗಿ ದಾರಿ ತೆರೆಯುತ್ತದೆ. ಆದರೆ ಈಗಂತೂ ಪೀರನಿಗೆ ಸುರಂಗ ಕೊರೆಯಲಾಗಿದೆ. ಮತ್ತು ಪೀರನ ರಸ್ತೆ ಹನ್ನೆರಡು ತಿಂಗಳೂ ನಡೆದೇ ಇರುತ್ತದೆ."

ದಸೌಂಧಾಸಿಂಹ ತನ್ನ ಲೋಟಾದಿಂದ ಎರಡು ಗುಟುಕು ಕುಡಿದು ಅಂದ, "ಓಯೆ ಚಾಚಾ, ಪೀರನ ಮರ್ಜಿ ಇಲ್ಲದಿದ್ದರೆ ಸುರಂಗ ತಯಾರಾಗುತ್ತಿದ್ದಿಲ್ಲ. ವಾಹಗುರುವಿನ ಆಣೆ. ಪ್ರಯಾಣಿಕರು ಗಾಡಿಯಲ್ಲಿ ಕೂತದ್ದು ನೋಡಿ ನೋಡಿ ಪೀರ ಸುಸ್ತಾಗಿಬಿಟ್ಟಿದ್ದಾನೆ. ಆತ ಕುದುರೆಯ ಸವಾರಿ ಬಿಟ್ಟುಕೊಟ್ಟಿದ್ದಾನೆ."

ಜಾನೀ ತೂರಾಡುತ್ತಾ ಅಂದ, "ಪೀರನ ಗಡ್ಡ ಹಿಮದಂತೆ ಬಿಳಿದಾಗಿ ಹೋಗಿದೆ! ಈಗ ಅವನಲ್ಲಿ ಪ್ರಾಯದ ಜೋರು ಉಳಿದಿಲ್ಲ."

ಅಖ್ತರ ಅಂದ, "ಪೀರ ಕೂತುಬಿಟ್ಟ, ಮತ್ತು ಅಂದ, 'ನನ್ನ ಮೇಲಿಂದ ಹೋಗುವಿರಾದರೆ, ನನ್ನ ಎದೆ ಸೀಳಿ ಹೊರಬಿದ್ದು ಹೋಗಿರಿ' ಆಗಲೇ ಈ ರಸ್ತೆ ಸಿಕ್ಕಿದ್ದು."

ಮಹೇಶನಿಗೂ ಸುಮ್ಮನೆ ಇರಲು ಆಗಲಿಲ್ಲ.

"ಮಂದಿಯ ಕಲ್ಪನೆ ಇತ್ತು—ಪೀರನ ಎದೆ ಸೀಳಿದಾಗ ಭಾರಿ ನೀರು ಹೊರ ಚಿಮ್ಮಿ ಹರಿದು ಈ ಕೊಳ್ಳವೇ ಮುಳುಗಿ ಹೋಗಿ ಒಂದು ಸರೋವರವೇ ಉಂಟಾಗುವದು—ಹಿಂದಿನಕಾಲದಲ್ಲಿ ಇದ್ದಂತೆ ಎಂದು. ಆದರೆ ಅಂಥ ಆಪತ್ತು ಏನೂ ಬರಲಿಲ್ಲ."

ಗುಲಹಿಮಾ ಕಿರಿದಾಗಿ ನಕ್ಕು ಅಂದಳು, "ನಾ ಹೇಳ್ತೇನೆ ಬಿಡಿರಿ ಆ ಕಥೆ, ಚಳಿ ಅನ್ನುತ್ತದೆ—ಇಂದೇ ಬರುತ್ತೇನೆ. ಹಸಿವೆ ಅನ್ನುತ್ತದೆ—ಇಂದೇ ತಾಗ್ತೇನೆ!"

ಕಿಕ್ಕರ ಸೇಂದಿಯೊಂದಿಗೇ ಅವಳು ಡಬ್ಬಿಯೊಳಗೆ ತುಂಬಿದ್ದ ತಿಂಡಿ-ತೀರ್ಥಗಳ ಸಾಮಾನೆಲ್ಲ ಮುಗಿಸಿಬಿಟ್ಟಳು.

ದಸೌಂಧಾಸಿಂಹ ತೂರಾಡುತ್ತ ಅಂದ, "ಜಾನೀ, ಈಗ ನೀನೇ ಡ್ರೈವರ್ ಆಗಿಬಿಟ್ಟೆ!"

ಚಾಚಾರಹಿಮೂ ಅಗಷ್ಟಿಗೆಯಲ್ಲಿ ಸೌದೆ ಒಟ್ಟುತ್ತಿದ್ದ. ದಸೌಂಧಾಸಿಂಹ ತಲೆಯ ರುಮಾಲು ಇಳಿಸಿ ಕೊರಳಿಗೆ ಸುತ್ತಿಕೊಂಡ. ಮತ್ತು ಮಂಡೆಯ ಗಂಟಿಕ್ಕಿಕೊಳ್ಳುತ್ತ ಅಂದ, "ನನ್ನ ಗಡ್ಡ ಇನ್ನೂ ಖಚಡಿಯನ್ನೇ ತಿನ್ನುತ್ತಿದೆ. ಹೂವಿನ ಜೇವಾ! ಆದರೆ ನನ್ನ ಕೂದಲ ಮೇಲೆ ಪೀರನ ಹಿಮ ಬಿದ್ದಿದೆ—ಇನ್ನು ಪೀರನ ಹಿಮ ಇನ್ನೂ ಹೆಚ್ಚು ಬೀಳುವದು. ವಾಹ ಗುರುವಿನ ಆಣೆ. ಇನ್ನೂ ನಮ್ಮ ರಟ್ಟೆಗಳಲ್ಲಿ ಪ್ರಾಣವಿದೆ." ಹೀಗೆಂದು ಅವನು ಲೋಟಾದೊಳಗಿನ ಕೊನೆಯ ಎರಡು—ಮೂರು ಗುಟುಕು ನಾಯಿಯ ಬಾಯಿಯಲ್ಲಿ ಹಾಕಿಬಿಟ್ಟ. ನಾಯಿ ದಸೌಂಧಾಸಿಂಹನಿಗೆ ಧನ್ಯವಾದವನ್ನರ್ಪಿಸಿತು.

ಗುಲಹಿಮಾ ನಕ್ಕು ಅಂದಳು, "ನಾವು ಇನ್ನೂ ಹಲವು ಡ್ರಾಮಾ ಆಡುವದಿದೆ." ಮತ್ತು ಅವಳು ತನ್ನ ಪೆಗ್ ಬಂದುಮಾಡಿದಳು.

ದಸೌಂಧಾಸಿಂಹ ಅವಳ ಗ್ಲಾಸಿನಲ್ಲಿ ಕಿಕ್ಕರ ಸೇಂದಿಯನ್ನು ಸುರಿದನು. ಅದರ ಗುಟುಕು ತುಂಬಿಕೊಂಡು ಅವಳೆಂದಳು, "ಇನ್ನೂ ನಾವು ಬಹಳ ದೂರಹೋಗುವದಿದೆ."

"ಜೀವದ ಹೂವೆ ಹೂವಿನ ಜೀವಾ! ನನ್ನ ಕೊರಳಾಣೆ. ನೀನೊಂದುಮಾಯೆ, ಅನಂತ! ಅಕಾಲಪುರುಷನ ಮಾಯೆ ನೋಡಲೋ, ನಿನ್ನದೋ? ವಾಹಗುರುವಿನ ಆಣೆ. ಹೂವಿನ ಜೀವಾ! ಡ್ರಾಮಾಕಾರನಿಂದ ಬರೇ ನಿನ್ನ ಪಾಡನ್ನೇ ಬರೆಯಿಸಿಕೊಳ್ಳುವಿಯೋ, ನನ್ನದೂ ಅದರಲ್ಲಿ ಬರುವದೋ ಚೆಲುವೇ?" ಇದನ್ನು ಕೇಳಿ ಎಲ್ಲರೂ ನಕ್ಕುಬಿದ್ದರು.

ಎಲ್ಲರ ಮಾತೂ ಮುಗಿದು ಹೋದಂತೆ ಅನಿಸುತ್ತಿತ್ತು. ನಿದ್ದೆ ದಣದಣ ಏರಿ ಬರುತ್ತಿತ್ತು.

ನಾಯಿ ಬಹಳ ಮುದ್ದಿನಿಂದ ಬಾಲ ಅಲ್ಲಾಡಿಸುತ್ತ ದಸೌಂಧಾಸಿಂಹನ ಮೈಗೆ ತನ್ನ ಬೆನ್ನು ತಿಕ್ಕುತ್ತಿತ್ತು.

ಎಲ್ಲರೂ ಕೂರಹತ್ತಿದರು. ಎಲ್ಲರಿಗೂ ಮುಂಚೆ ಚಾಚಾ ರಹಿಮೂ ಗೊರಕೆ ಹೊಡೆಯಹತ್ತಿದ—ಅವನೇ ಸ್ವಯಂ ಪೀರ ಪಾಂಚಾಲ (ಕಾಶ್ಮೀರದಲ್ಲಿ ಹಿಮಾಲಯದ ಒಂದು ಪರ್ವತಶ್ರೇಣಿ) ನಿದ್ದಂತೆ.

ದಸೌಂಧಾಸಿಂಹನ ಕಣ್ಣು ಮುಚ್ಚಲಿಲ್ಲ. ನಾಯಿ ಅವನ ಬೆನ್ನಿಗೆ ತನ್ನ ಬೆನ್ನು ತಿಕ್ಕುತ್ತಿತ್ತು. ದಸೌಂಧಾಸಿಂಹ ಕಿಕ್ಕರ ಸೇಂದಿಯ ಕೊನೆಯ ಪೆಗ್ ಅದರ ಬಾಯಿಗೆ ಸುರುವುತ್ತ ಅಂದ, "ತಕೋ, ನನ್ನ ಮಗನೆ. ಮಜೇಲಿ ಮಲಗಿ ನಿದ್ದೆಹೋಗು. ಈ ಹೊತ್ತು ಕನಸಿನಲ್ಲಿ ಎಲ್ಲಾದರೂ ಪೀರ ಪಾಂಚಾಲ ಸಿಕ್ಕರೆ ಹೇಳು, 'ಓಯೆ ಪೀರಾ ಫಕೀರಾ, ನಿನ್ನ ರಾಜ್ಯದಲ್ಲಿ ದಸೌಂಧಾಸಿಂಹ ಡ್ರೈವರನಿಗೆ ತೊಂದರೆ ಆಗಬಾರದು!'"

ಆ ನಾಯಿ ಬಹಳ ಉಪಕಾರ ತುಂಬಿದ ಕಣ್ಣಿನಿಂದ ದಸೌಂಧಾಸಿಂಹನ ಕಡೆಗೆ ನೋಡಹತ್ತಿತು. ಮತ್ತು ಅದೂ ನಿದ್ದೆಹೋಯಿತು.

ದಸೌಂಧಾಸಿಂಹ ಗುಣಗುಣಿಸಹತ್ತಿದ :

ನಿನ್ನ ಇದುರಿಗೆ ಕೂತು ಅಳುವೆ
ದುಃಖವದು ಹಬ್ಬದಿರಲಿ—ಅನುವೆ.

ದಸೌಂಧಾಸಿಂಹನ ದೃಷ್ಟಿ ಮತ್ತೆ ಮತ್ತೆ ಗುಲಹಿಮಾಳ ಕಡೆಗೆ ಹರಿಯುತ್ತಿತ್ತು. ಅವಳ ಮುಖಚರ್ಯೆ ನಂದುವ ಬೆಂಕಿಯ ಬೆಳಕಿನಲ್ಲಿ ಇನ್ನೂ ಮುದ್ದಾಗಿ ಕಾಣುತ್ತಿತ್ತು. ಬೆಂಕಿ ಹಿಮದಲ್ಲಿ ಹೊಕ್ಕುತ್ತಿದ್ದಂತೆ, ಹಿಮ ಬೆಂಕಿಯಲ್ಲಿ ಇಳಿಯುತ್ತಿದ್ದಂತೆ. ಅವನ ಮನಸ್ಸಿನಲ್ಲಿ ಬಂತು—ಅವಳನ್ನು ಎಬ್ಬಿಸಿ ಅವಳ ಕತೆಯನ್ನು ಕೇಳಿಬಿಡಬೇಕು. ಆದರೆ ಈ ರಸ್ತೆಯಲ್ಲಿ ಯಾರಿಗೆ ಗೊತ್ತು ಲಾಲಾರುಖ ಯಾವ ಯಾವ ರೂಪದಲ್ಲಿ ದರ್ಶನ ಕೊಡುವಳೋ—ಎಂಬ ವಿಚಾರ ಬಂದು ಸುಮ್ಮನಾದ.

ಅವನ ದೃಷ್ಟಿ ಗುಲಹಿಮಾಳ ಮೇಲೆ ಹಾಯುವಾಗ ಅವನ ಕೈ ಹೋದ ನಾಯಿಯ ಬೆನ್ನಮೇಲೆ ತಿರುಗುತ್ತಿತ್ತು. ಅದಕ್ಕೆ ನಿದ್ದೆಬರಹತ್ತಿತ್ತು.

ಗುಲಹಿಮಾ ಮಗ್ಗಲು ಮುರಿದು ಅರೆತೆರೆದ ಕಣ್ಣುಗಳಿಂದ ದಸೌಂಧಾಸಿಂಹನ ಕಡೆಗೆ ನೋಡಿದಳು. ಆತ ದುರುದುರು ಅವಳನ್ನೇ ನೋಡುತ್ತಿದ್ದ.

# ಗರಿಕೆ ಹುಲ್ಲು

ಪಾಕಿಸ್ತಾನ ಅಸ್ತಿತ್ವಕ್ಕೆ ಬಂದು ಇನ್ನೂ ಮೂರು-ನಾಲ್ಕು ತಿಂಗಳಾಗಿದ್ದವು. ಇಲ್ಲಿ ಪ್ರತಿಯೊಂದೂ ಕಿತ್ತು ಕಿತ್ತು ಬಿದ್ದಂತೆ ಅನಿಸುತ್ತಿತ್ತು. ಪೋಲೀಸಠಾಣೆ, ಗ್ರಾಮ ಚಾವಡಿ ಚೌಕಿಗಳಲ್ಲಿ ಸಾಮಾನುಗಳ ರಾಶಿ ಬಿದ್ದಿದ್ದುವು. ಟ್ರಂಕು, ಪಲ್ಲಂಗ, ತೊಟ್ಟಿಲು, ಮೇಜು, ಸೋಫಾಸೆಟ್, ಚಿತ್ರ-ತಸಬೀರು—ಎಲ್ಲವೂ ತಮ್ಮ ತಮ್ಮ ಸ್ಥಾನಗಳಿಂದ ಕಿತ್ತು ಈ ಠಾಣೆಗಳಲ್ಲಿ ಬಂದು ಬಿದ್ದಿದ್ದುವು. ಇಲ್ಲವಾದರೆ ತಸಬೀರು ತೊಟ್ಟಿಲುಗಳಿಗೆ ಈ ಠಾಣೆಗಳಲ್ಲಿ ಏನು ಕೆಲಸ? ಈ ವಸ್ತುಗಳಿಗೆ ಮನೆಗಳಲ್ಲಿ ಸ್ವಂತದ ಸ್ಥಾನಗಳು ಇದ್ದಿರಬಹುದು. ಆಗ ಮನೆಯ ಮುಂದಿಗೆ ಆನಿಸಿರಬಹುದು, ಈ ವಸ್ತುಗಳನ್ನು ಅವುಗಳ ನಿರ್ದಿಷ್ಟ ಸ್ಥಾನಗಳ ಹೊರತು ಬೇರೆಡೆಗೆ ಎಲ್ಲಾದರೂ ಇದ್ದರೆ ಇವು ಬಹಳೇ ಅಂದಗೆಟ್ಟಂತೆ ವಿದ್ರೂಪ ಕಾಣಬಹುದು. ಆದರೆ ಈ ಸಮಯದಲ್ಲಿ ಈ ಸಾಮಾನುಗಳು ಇಲ್ಲಿ ರಾಶಿಯಾಗಿದ್ದುವು. ಮನೆಯ ಪಾತ್ರೆ ಪೊಗಡೆ, ಬೀರು-ಕಪಾಟು, ಅಟ್ಟ, ಅಡಿಗೆಯ ಮನೆಗಳಿಂದ ಹೊರ ಬಿದ್ದು ಈ ಸರಕಾರಿ ಕಚೇರಿಗಳ ಇದುರಿಗೆ ರಾಶಿ ಬಿದ್ದಿದ್ದುವು. ಈಗ ಇವುಗಳನ್ನು ಯಾರೂ ತಿಕ್ಕಿಲ್ಲ, ತೊಳೆದಿಲ್ಲ. ಮಿರಿಮಿರಿ ಹೊಳೆಯುವಂತೆ ಮಾಡಿಲ್ಲ, ಎಣಿಸಿದ್ದೂ ಇಲ್ಲ. ಎಷ್ಟೋ ತಿಂಗಳಿಂದ ಯಾವ ಹೆಂಗಸಾಗಲಿ ಗಂಡಸಾಗಲಿ ಇವುಗಳನ್ನು ಮುಟ್ಟಿಯೇ ಇಲ್ಲ.

ಪಾಕಿಸ್ತಾನದಲ್ಲಿ ಪ್ರತಿಯೊಂದು ವಸ್ತುವೂ ಕಿತ್ತು ಕುಸಿದುಬಿದ್ದಿತ್ತು. ಕೆಲವು ಮನೆಗಳಲ್ಲಿ ಅವರ ದಾವಣಿಯ ಗೂಟಗಳಿಂದ ಕಿತ್ತು ಬಂದ ದನಗಳಿದ್ದವು. ಮುಗ್ಧ ಕಣ್ಣುಗಳಿಂದ ಅವು ಅತ್ತಿತ್ತ ನೋಡುತ್ತಿದ್ದವು. ಅಪರಿಚಿತ ಸ್ಥಳಗಳಲ್ಲಿ ಅಂಜಿ ಅಂಜಿ ಹೆಜ್ಜೆ ಇಡುತ್ತಿದ್ದವು. ಈ ತಿರುವುಮುರುವುಗಳ ರದ್ದು-ಬದಲುಗಳ ನಡುವೆ ನೆಲವೊಂದೇ ತನ್ನ ಸ್ಥಾನದಲ್ಲಿ ಗಟ್ಟಿಯಾಗಿತ್ತು. ಮತ್ತು ಈ ನೆಲದ ಮೇಲಿಂದ ಗೂಳಿಕಿತ್ತು ಹೊರಟ ಅಗಣಿತ ಶರಣಾರ್ಥಿಗಳು ಕಾಲೆಳೆದು ಸರಿಯುತ್ತಿದ್ದರು. ವಾಗಾದ ದೊಡ್ಡ ಶಿಬಿರದಿಂದ ಇವರನ್ನು ಮುಂದೆ ಅಟ್ಟಲಾಗುತ್ತಿತ್ತು. ಆಮೇಲೆ ಈ ಶರಣಾರ್ಥಿಗಳು ಕಾಲ್ನಡಿಗೆಯಿಂದ ಅಥವಾ ಎತ್ತಿನ ಬಂಡಿಗಳಲ್ಲಿ ಹೊಸ ನೆಲವನ್ನು ಹುಡುಕುತ್ತ ಅಲೆದಾಡಹತ್ತಿದ್ದರು.

ಈ ಶರಣಾರ್ಥಿಗಳ ಮಾತು ಒತ್ತಟ್ಟಿಗಿರಲಿ, ಹಳೆಯ ಜನರೂ ಬೇರು ಕಿತ್ತಂತೆ ಆಗಿದ್ದರು. ಬಳಗವುಳ್ಳವರ ಬಳಗಗಳೇ ಕಳೆದು ಹೋಗಿದ್ದವು. ಹಾಗೆಯೇ ಆಪ್ತ ಮಿತ್ರರುಳ್ಳವರ ಆಪ್ತಮಿತ್ರರೂ ಕಳೆದು ಹೋಗಿದ್ದರು. ಗಿರಣಿ ಒಡೆಯರು ಕಳೆದು ಹೋಗಿದ್ದರು. ಗಿರಣಿ ಕೆಲಸಗಾರರು ಕಳೆದು ಹೋಗಿದ್ದರು. ಈ ಎಲ್ಲ ಮಂದಿಯ

ಸ್ಥಾನದಲ್ಲಿ ಹೊಸಮಂದಿ ಬಂದಿದ್ದರು. ಈ ಹೊಸ ಮಂದಿ ಎಂಥ ಮಾದರಿ? ಹೊಲಸು ಮಂದಿ! ಕೆರಳುವ ಮಂದಿ! ಈ ಮಂದಿ ಹಳೆಯ ಮಂದಿಯೊಂದಿಗೆ ಕೂಡಿ ಒಡನಾಡಿ ಹೋಗಲಾರರು. 'ಸಮಸ್ಕಾರ' (ಸಲಾಂ ಆಲೇಕುಂ) ಎಂದು ಹತ್ತಿರ ಕೂತು ಮಾತಾಡಿಸುವವರಲ್ಲ; ಬದಲಾಗಿ ಬಾಗಿಲ ಹೊರಗೆ ತಲೆಹಾಕಿ ನೋಡುತ್ತ ನಿಲ್ಲುವವರು. ಕರೆದರೂ ಈ ಜನ ಮಾತಾಡುತ್ತಿದ್ದಿಲ್ಲ. ಈ ಜನರಂತೂ ಊರುಗಳ ಬುಡಬೇರು ಸಡುಗಿಸಿಬಿಟ್ಟರು. ಹಳೆಯ ರಹವಾಸಿಗಳಿಗೂ ತಮ್ಮ ಊರು ಅಪರಿಚಿತ ವೆನಿಸಹತ್ತಿತು. ಏಕೆಂದರೆ ಅವರು ಹುಟ್ಟಿ ಬೆಳೆದ ಅವರ ಊರು ಅವರದಾಗಿ ಉಳಿದಿದ್ದಿಲ್ಲ. ಅವರ ಮಹಡಿಮನೆಗಳ ಹತ್ತಿರದಿಂದ ಹರಿಯುವ ಹಳ್ಳ ಕಾಲುವೆಗಳೂ ಬಣ್ಣಗೆಟ್ಟು ಹೋಗಿದ್ದವು. ಅವರು ಅವುಗಳನ್ನು ಬಳಸುವಂತೆ ಇದ್ದಿಲ್ಲ. ಹಲವು ದಿನಗಳ ತನಕವೂ ಅವುಗಳಲ್ಲಿ ಕಣ್ಣೀರು ಬರುತ್ತಲೇ ಇತ್ತು, ಮತ್ತು ಕೆಲವು ಇಡಿಯ ಹೆಣಗಳೂ, ಕೆಲವು ಹೆಣಗಳ ಕಾಲು ತೋಳುಗಳೂ ಬಳಿದು ಒರುತ್ತಲೇ ಇದ್ದವು. ಇಂಥ ನೀರಿನಿಂದ ಉಪಯೋಗ ಪಡೆಯುವದಾದರೂ ಹೇಗೆ? ಜನ ತಮ್ಮ ಮಕ್ಕಳನ್ನು ಈ ಕಾಲುವೆಗಳಲ್ಲಿ ಮೀಯಲು ಕೊಡುತ್ತಿದ್ದಿಲ್ಲ, ಅಡ್ಡಿಮಾಡುತ್ತಿದ್ದರು. ವಾಸ್ತವ ವಾಗಿ ಪ್ರತಿಯೊಂದು ತಿರುವು ಮುರುವಾಗಿ ಹೋಗಿತ್ತು. ತಿರುಗಿ ತನ್ನ ಹಳೆಯ ಸ್ಥಿತಿಗೆ ತಿರುಗಲು ಹೆಣಗುತ್ತಿತ್ತು. ಪ್ರತಿಯೊಂದು ವಸ್ತುವೂ ತನ್ನ ತನ್ನ ಸ್ಥಳದಲ್ಲಿ ನೆಲೆಸಲಿಕ್ಕೂ, ತಳ ಊರಿ ನಿಲ್ಲಲಿಕ್ಕೂ ಹೆಣಗುತ್ತಿತ್ತು. ಪ್ರತಿಯೊಂದು ವಸ್ತುವೂ ಪೂರ್ತಿ ಪೂರ್ವಸ್ಥಿತಿಯನ್ನು ಸ್ಥಾಪಿಸಲು ಬಯಸುತ್ತಿತ್ತು.

"ದೇಶವಂತೂ ಗೋಳಾಡುತ್ತಿದೆ"—ಒಬ್ಬ ತರುಣ ಜಾಟ ಆಜೆ ಈಜೆಯ ಉಧ್ವಸ್ತ ದೃಶ್ಯವನ್ನು ಕಂಡು ತನ್ನ ಮುದಿತಂದೆಗೆ ಅಂದನು,

"ಗೋಳಾಡುತ್ತಿರುವದಂತೂ ನಿಜವೇ. ಆದರೆ ತುಸು ಕಣ್ಣಿಟ್ಟು ನೋಡು. ಜನ ಬೇರೆ ಬೇರೆ ಸ್ಥಳಗಳಲ್ಲಿ ತಿರುಗಿ ನೆಲೆಸುತ್ತಿದೆ. ಎಲ್ಲ ಸೆಟ್ಟಗಾಗುವದು."

"ಇದು ಬರೆ ಮಾತು. ಈ ಬಡವರು ತಿರುಗಿ ನೆಲೆಸುವದಾದರೂ ಎಲ್ಲಿ? ಒಂದು ರೊಟ್ಟಿಯ ಚೂರು ಮುರಿದು ಬಾಯಿಯಲ್ಲಿ ಹಾಕಿಕೊಳ್ಳುವ ಬಲವೂ ಇವರಿಗೆ ಉಳಿದಿಲ್ಲ."

"ಇಲ್ಲ ತಮ್ಮಾ, ಮಳ್ಯಾ, ಮೇಲ್ಮೇಲಿಂದ ನೋಡಿದರೆ ಹೀಗೆಯೇ ಅನಿಸುತ್ತದೆ. ಆದರೆ ತುಸು ನೋಡಿಯಾದರೂ ನೋಡು. ಗದ್ದೆಯಲ್ಲಿ ಗರಿಕೆ ಹುಲ್ಲು ಇರುತ್ತದಲ್ಲ. ರಂಟೆ ಹೂಡುವಾಗ ಅದರ ಪರಿವೆಯೇನೂ ಮಾಡಲಾಗುವದಿಲ್ಲ, ಅಲ್ವೇ? ಅದೆಲ್ಲ ವನ್ನೂ ಬುಡಗೂಡಿ ಕಿತ್ತುಕಿತ್ತು ಗದ್ದೆಯ ಹೊರಗೆ ಒಗೆಯುತ್ತೇವೆ. ಆದರೆ ಹತ್ತು ದಿನಗಳ ಮೇಲೆ ಒಂದಲ್ಲ ಒಂದು ಬುಡಹಿಡಿದು ಚಿಗುರೊಡೆಯುತ್ತದೆ. ಮತ್ತು ಒಂದು ತಿಂಗಳ ಕೊನೆಗೆ ಗದ್ದೆಯಲ್ಲಿ ನೇಗಿಲು ಹೊಡೆದೇ ಇಲ್ಲವೆಂಬಂತೆ ಕಾಣುತ್ತದೆ!"

ನಿಜವಾಗಿಯೂ ಈ ಮುದುಕನ ಮಾತಿನಲ್ಲಿ ಕೆಲವುಕಡೆ ಸತ್ಯವೇ ಕಂಡು

ಬಂದಿತ್ತು. ಯಾರಿಗೆ ಜಮೀನು ಸಿಗುತ್ತಿತ್ತೋ ಆ ಜನ ಸ್ಥಿರಸ್ಥಾವರರಾಗುತ್ತಿದ್ದರು. ಕಚ್ಚಾ ಎಲಾಟಮೆಂಟಿನ ಗದ್ದೆಗಳು ಅವರ ಆತ್ಮಕ್ಕೆ ಧೈರ್ಯ ತುಂಬುತ್ತಿದ್ದವು. ತಮ್ಮ ಹೊಸ ಬಿಡಾರದ ಆವಾರಗಳ ಬಳಿಗೆ ಚಿಕ್ಕಚಿಕ್ಕ ಹೊಂಡ ತೋಡಿ ಅವುಗಳಲ್ಲಿ ಬೆರಣಿಗಳ 'ಧೂನಿ' (ಬೆಂಕಿ) ಹೊತ್ತಿಸಿಟ್ಟು ಮನ ಬಂದಾಗ ಗುಡುಗುಡಿ ತುಂಬಿಕೊಂಡು ಒಟ್ಟಾಗಿ ಕೂತು ಸೇದುತ್ತಿದ್ದರು. ಮೆಲ್ಲಮೆಲ್ಲಗೆ ಅವರ ಎಮ್ಮೆಗಳ ಅಂಜಿಕೆಯು ಕಡಿಮೆ ಆಗುತ್ತ ಹೋಗುತ್ತಿತ್ತು. ಬಿಡಾರಗಳ ಒಳಗಡೆ ಅವು ಟೊಂಗೆಗಳಿಂದ ತಲೆ ತುರಿಸಿಕೊಳ್ಳುತ್ತ ಒಮ್ಮೊಮ್ಮೆ ಒಳ್ಳೆ ಖುಶಿಯಲ್ಲಿ ಬಂದು ಬಿಡಾರದ ಗೋಡೆಗೆ ತಮ್ಮ ಮೈ ತಿಕ್ಕಿಕೊಳ್ಳುತ್ತಿದ್ದವು. ಒಂದೊಮ್ಮೆ ತಹಶೀಲದಾರನೋ ಇನ್ನಾವ ಅಮಲದಾರನೋ ಈ ಜನರ ಹೊಸ ವಸತಿಗೆ ಭೆಟ್ಟಿ ಇತ್ತಾಗ, ಇವರಲ್ಲಿ ಯಾರಾದರೂ ತಮಗೆ ತಾವೇ ಊರ ಪಂಚರೆಂದು ಕರೆಯಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದರು. ಊರಿನ ದುಃಖ ಕಷ್ಟಗಳನ್ನು ತಹಶೀಲದಾರರೆದುರಿಗೆ ತೋಡಿಕೊಳ್ಳುತ್ತಿದ್ದರು ಮತ್ತು ಈ ರೀತಿ ಎಲ್ಲ ಜನರಲ್ಲಿ ಪ್ರದರ್ಶನಮಾಡಿ ಊರಿನಲ್ಲಿ ತಮ್ಮ 'ಪುಡಾರಿ' ಯನ್ನು ಆರಂಭಿಸುತ್ತಿದ್ದರು. ಸಾಮಾನ್ಯ ಮಾತುಗಳ ನಿಮಿತ್ತ ಮಂದಿಯನ್ನು ಹಿಂದೆ ಕೂಡ್ರಿಸಿ ಒಬ್ಬ ವ್ಯಕ್ತಿ ಮುಂದಾಗಿ ಮಾತಾಡಿ ಆಫೀಸರುಗಳಿಗೆ 'ಹುಕ್ಕಾ-ಪಾನಿ'ಯ ಸರಬರಾಜು ನಡೆಯಿಸಿ ಅವರ ಲಕ್ಷ್ಯ ತನ್ನ ಕಡೆಗೆ ಸೆಳೆದುಕೊಳ್ಳುತ್ತಿದ್ದನು. ಇವೆಲ್ಲ ಸಂಗತಿಗಳಿಂದ ಸ್ಪಷ್ಟವಾಗುತ್ತಿತ್ತು, ಈ ಆಘಾತವೂ ಅವರನ್ನೂ ಪೂರ್ತಿ ತಣ್ಣಗೆ ಬಿದ್ದಿರುವಂತೆ ಮಾಡಿದ್ದಿಲ್ಲ.

ಈ ರೀತಿ ಉಧ್ವಸ್ತವಾದ ಪುನಃ ವಸತಿ ಹೊಂದಿದ ಪಾಕಿಸ್ತಾನದಲ್ಲಿ ಭಾರತ ಸರಕಾರದ ಪರವಾಗಿ ನಾನು ಸಂಪರ್ಕಾಧಿಕಾರಿಯಾಗಿ ನೇಮಕಗೊಂಡಿದ್ದೆ. ಬಲಾತ್ಕಾರದಿಂದ ಓಡಿಸಿಕೊಂಡು ಹೋದ ಹೆಂಗಸರನ್ನು ಜುಲುಮೆಯಿಂದ ಮುಸ್ಲಿಂ ರನ್ನಾಗಿ ಮಾಡಿದ ಕುಟುಂಬಗಳನ್ನು ತಿರುಗಿ ಭಾರತಕ್ಕೆ ಒಯ್ದು ತಲುಪಿಸುವದೇ ನನ್ನ ಕೆಲಸವಾಗಿತ್ತು. ಭಾರತ ಸೈನ್ಯದ ಒಂದು ದಲವೂ ಪಾಕಿಸ್ತಾನದ ಸ್ಪೆಶಲ್ ಪೋಲೀಸರ ಕೆಲವು ಪೇದೆಗಳೂ ನನ್ನ ಸಹಾಯಕ್ಕೆ ಹಚ್ಚಿಕೊಡಲಾಗಿತ್ತು.

ಕಳೆದು ಹೋದ ಇತರ ವಸ್ತುಗಳ ಶೋಧದಂತೆ ಹುಡುಗಿಯರ ಶೋಧದ ಕೆಲಸ ಕಠಿಣವೂ ಇತ್ತು, ಸುಲಭವೂ ಇತ್ತು. ಕೆಲವೊಮ್ಮೆ ಯಾವಳೊಬ್ಬ ಹುಡುಗಿ ಸ್ವಲ್ಪವೇ ಪ್ರಯತ್ನದಿಂದ ಸಿಕ್ಕಿಬಿಡುತ್ತಿದ್ದಳು. ಮತ್ತೆ ಕೆಲವುಸಲ ಇನ್ನೊಬ್ಬ ಹುಡುಗಿ ಬಹಳಷ್ಟು ಶೋಧಮಾಡಿದರೂ ಕೈಗೆ ಸಿಗುತ್ತಿದ್ದಿಲ್ಲ. ಪಾಕಿಸ್ತಾನಿ ಪೋಲೀಸಿನವರು ಆ ಹುಡುಗಿಯರನ್ನು ತಿರುಗಿ ಒಪ್ಪಿಸುವದರಲ್ಲಿ ನಿಃಸಂದೇಹವಾಗಿಯೂ ಹೆಚ್ಚು ಕಡಿಮೆ ಸಹಾಯಮಾಡುತ್ತಿದ್ದರು. ಆದರೆ ಸ್ವತಃ ಆ ಹುಡುಗಿಯರ ಬಗೆಗೆ ಅವರು ತಿಳುವಳಿಕೆ ಕೊಡುವುದೇ ಕಡಿಮೆಯಾಗಿತ್ತು. ಆದಾಗ್ಯೂ ಅವರು ಪ್ರಾಮಾಣಿಕ ಮನಸ್ಸಿನಿಂದ ನನ್ನ ಸಂಗಡ ಹೊರಟರೆಂದರೆ ನನ್ನ ಕೆಲಸ ಒಮ್ಮೆಲೆ ಸುಲಭವಾಗಿಬಿಡುತ್ತಿತ್ತು.

ಈ ಬಾರಿ ಫಿರ್ಕೆಯ ಠಾಣೇದಾರನು (ಫೌಜದಾರನು) ನನ್ನ ಕೂಡ ಬಂದನಷ್ಟೇ ಅಲ್ಲ, ಯಾರೋ ಓಡಿಸಿಕೊಂಡು ಹೋದ ಹೆಂಗಸಿನ ಪತ್ತೆಯನ್ನು ಅವನೇ ನನಗೆ ತಿಳಿಸಿದನು. ಆ ಹೆಂಗಸು ಅದೇ ಠಾಣೆಗೆ ಒಳಪಟ್ಟ ಒಂದು ಹಳ್ಳಿಯ ಜಮೀನದಾರ ನೊಬ್ಬನ ಸೊಸೆಯಾಗಿದ್ದಳೆಂಬುದನ್ನು ಆತನು ಹೇಳಿದನು. ನಾವು ಹೋಗಲು ಹೊರಟ ಹಳ್ಳಿಯು ಪಕ್ಕಾ ರಸ್ತೆಯಿಂದ ಬಹಳ ದೂರವಿತ್ತು. ಬಹಳ ಹೊತ್ತು ನಾವು ಕಚ್ಚಾ ರಸ್ತೆ ಕಾಲುದಾರಿಗಳ ಮೇಲಿಂದ ಸಾಗುತ್ತಿದ್ದೆವು.

ನಾವು ಆ ಹಳ್ಳಿಯನ್ನು ಮುಟ್ಟಿದಾಗ ಹಳ್ಳಿಯ ಚೌಧರಿಗಳೆಲ್ಲ ಠಾಣೇದಾರರ ಸ್ವಾಗತಕ್ಕೆ ನೆರೆದಿದ್ದರು. ಪಾಕಿಸ್ತಾನದಲ್ಲಿ ಆಗಿನ ದಿನಗಳಲ್ಲಿ ಸರಕಾರದ ದರ್ಪ ದೊಡ್ಡದಿತ್ತು. ಠಾಣೇದಾರನು ಆ ಹೆಂಗಸಿನ ಪತ್ತೆ ಕೇಳಿದನು. ಕೂಡಲೇ ಆ ಶ್ರೇಷ್ಠಿ ಗಳು ಒಂದು ಕೊಠಡಿಯನ್ನು ಕಾಣಿಸಿದರು. ಆ ಚಿಕ್ಕ ಕೊಠಡಿ ದೊಡ್ಡದೊಂದು ಜಗಲಿಯ ಮೂಲೆಯಲ್ಲಿ ಇತ್ತು. ಠಾಣೇದಾರನೂ ಇತರ ಜನರೂ ಹೊರಗೇ ಉಳಿದರು. ನಾನೊಬ್ಬನೇ ಕೊಠಡಿಯೊಳಗೆ ಹೋದೆನು. ಅದು ಕಚ್ಚಾ ಕೋಣೆ (ಮಣ್ಣಿನ ಗೋಡೆಗಳಿಂದ ಮಾಡಿದ್ದು) ಒಳಗೆ ಬರೆ ಮೂರು ಮಂಚಗಳನ್ನು ಹಾಸುವಷ್ಟೇ ಅವಕಾಶ. ಒಂದು ಕಡೆಗೆ ಒಂದು ಮರದ ಸ್ಟ್ಯಾಂಡಿನ ಮೇಲೆ ಕೆಲವು ಬಟ್ಟಲುಗಳು, ಲೋಟಾಗಳು, ಮತ್ತು ತಟ್ಟೆಗಳೂ ಇದ್ದುವು. ಕೋಣೆಯ ಒಂದು ಮೂಲೆಯಲ್ಲಿ ಕೆಲವು ಹಾಸಿಗೆಗಳು ಮತ್ತು ಇನ್ನೂ ಕೆಲವಷ್ಟು ಸಾಮಾನುಗಳಿದ್ದವು.

ಒಬ್ಬ ಹೆಂಗಸು ಮಂಚದ ಮೇಲೆ ಮಲಗಿದ್ದಳು. ಕೆಲವು ದಿನಗಳಿಂದ ಅವಳಿಗೆ ಜ್ವರ ಬರುತ್ತಿತ್ತು. ಅವಳ ಒಂದು ಕೈಯ ಮೇಲೆ ಪಟ್ಟಿ ಕಟ್ಟಿದ್ದರು. ಅಲ್ಲಿ ಬಾವು ಬೊಕ್ಕೆ ಏನಾದರೂ ಎದ್ದಿರಬೇಕು. ಆ ವೇಳೆಗೆ ಅವಳು ವಿಪರೀತ ಅಶಕ್ತಳಾಗಿದ್ದಳು. ಬಹಳ ತಗ್ಗಿದ ದನಿಯಲ್ಲಿ ನಿಧಾನವಾಗಿ ಮಾತಾಡುತ್ತಿದ್ದಳು. ನಾನು ಅವಳ ಬದಿಯಲ್ಲಿದ್ದ ಮಂಚದ ಮೇಲೆ ಕೂತೆನು.

"ಏನು ಸಮಾಚಾರ?" ನಾನು ಅವಳ ಸ್ಥಿತಿಗತಿ ತಿಳಿದುಕೊಳ್ಳಲಿಕ್ಕೆ ನೇರ ವಾಗಿಯೇ ಪ್ರಶ್ನೆ ಹಾಕಿದೆನು.

"ನಾಲ್ಕೈದು ದಿನಗಳಿಂದಲೂ ಜ್ವರವಿದೆ."

"ನಿಮ್ಮನ್ನು ನೋಡಿಕೊಳ್ಳಲಿಕ್ಕೆ ಇಲ್ಲಿ ಯಾರೂ ಹೆಂಗಸು ಇಲ್ಲವೇ?"

"ಇಲ್ಲ, ಹತ್ತಿರವೆಲ್ಲೂ ಯಾರೂ ಹೆಂಗಸು ಇಲ್ಲ."

"ಇದಕ್ಕೂ ಮುಂಚೆ ನಾನು ಕಂಡ ಓಡಿಸಿಕೊಂಡೊಯ್ದ ಹುಡುಗಿಯರ ಹಾಗೂ ಹೆಂಗಸರ ಇದುರಿಗೆ ಈ ಹೆಂಗಸಿನ ಹಿನ್ನೆಲೆ ಕೇವಲ ಭಿನ್ನವಾಗಿತ್ತು. ಆ ಹೆಂಗಸರ ಹತ್ತಿರ ಸುತ್ತಲು ಗಂಡಸರೂ ಹೆಂಗಸರೂ ಇರುತ್ತಿದ್ದರು. ಅವರು ಯಾರದಾದರೂ ಒಬ್ಬರ ಕಣ್ಣಾಕೆಳಗೆ ಮೇಲ್ವಿಚಾರಣೆಯಲ್ಲಿ ಇರುತ್ತಿದ್ದರು; ಮತ್ತು ಅದೇ ಸ್ಥಿತಿಯಲ್ಲಿ ಅವರನ್ನು ನನಗೆ ಕಾಣಿಸಲಾಗುತ್ತಿತ್ತು. ಆದರೆ ಇಲ್ಲಿ ನನಗೆ ಹೀಗೆ

ಅನುಭವವಾಯಿತು. ಈ ಕೊಠಡಿಯಲ್ಲಿ ಇವಳೊಬ್ಬಳೇ ವಾಸಿಸುತ್ತಿದ್ದಳು. ಮತ್ತು ಜನರು ಅವಳನ್ನು ಅವಳ ಪಾಡಿಗೆ ಬಿಟ್ಟುಕೊಟ್ಟಿದ್ದರು. ಆದರೆ ಹೀಗೂ ಅನಿಸುತ್ತಿತ್ತು; ಜನರು ಇವಳಿಗೆ ನೆರವನ್ನು ನೀಡಿದ್ದರು. ಅವಳ ಊರಿನ ಹಾಗೂ ಮನೆಯ ಮಂದಿಯೆಲ್ಲ ಹೇಗೆ ಕೊಲೆಯಾದರು ಎಂಬುದನ್ನು ನಾನು ಕೇಳಿದ್ದೆ. ಇನ್ನೊಮ್ಮೆ ಅವಳ ಬಾಯಿಯಿಂದ ಆ ಸಂಗತಿಗಳನ್ನು ಕೇಳುವದರಲ್ಲಿ ಯಾವ ಲಾಭವೂ ಇದ್ದಿಲ್ಲ. ನನಗೆ ಹೆಚ್ಚಿನ ಸ್ವಾರಸ್ಯ ಅವಳ ವರ್ತಮಾನ ಪರಿಸ್ಥಿತಿಯಲ್ಲಿಯೇ ಇತ್ತು.

"ನೀವು ಇಲ್ಲಿ ಉಳಿದು ಎಷ್ಟು ಕಾಲವಾಯಿತು ?"

"ಯಾವ ದಿನ ಹಳ್ಳಿ ಹಾಳಾಯಿತೋ ಆ ದಿನದಿಂದ ನಾನು ಇಲ್ಲಿ ಇದ್ದೇನೆ."

"ಈ ಪಾತ್ರೆ ಈ ಬಟ್ಟೆ ನಿಮಗೆ ಯಾರು ಕೊಟ್ಟರು ?"

"ಶಾವು ಶುದ್ಧ ಮೂರ್ಖರು !"

ನನಗೆ ಅರ್ಥವಾಯಿತು. ಅವಳು ಒಂಟಿಯಾಗಿದ್ದಿಲ್ಲ. ಇಲ್ಲಿ ಬಿದ್ದಿರುವ ಸಾಮಾನೂ ಅವಳದಾಗಿದ್ದಿಲ್ಲ. ಈ ಕೊಠಡಿ ಈ ಸಾಮಾನು ಮತ್ತು ಈ ಹೆಂಗಸಿನ ದೇಹದ ಒಡೆಯನು ಇಲ್ಲಿ ಇದುರಿಗೆ ಮಾತ್ರ ಕಂಡುಬರುತ್ತಿದ್ದಿಲ್ಲ.

ಇಲ್ಲಿ ಈ ಮಾತನ್ನು ನಾನು ಸುಲಭವಾಗಿ ಸಹಜವಾಗಿ ಬರೆಯುತ್ತಿದ್ದೇನೆ. ಆದರೆ ಆ ವೇಳೆಗೆ ಇದನ್ನು ತಿಳಿದಾಗ ನನ್ನ ಮನಸ್ಸಿಗೆ ಪ್ರಚಂಡ ಆಘಾತವಾಯಿತು. ಪೋಲೀಸರ ಹಾಗೂ ಜನರ ಸಹಾಯದಿಂದಾಗಿ ಈ ಪ್ರಪಂಚ ಮತ್ತು ಪ್ರಪಂಚದ ಮಂದಿಯ ವಿಷಯ ನನ್ನ ಮನಸ್ಸಿನಲ್ಲಿ ಆ ದಿನವೆಲ್ಲ ಬರುತ್ತಿದ್ದ ವಿಚಾರಗಳೆಲ್ಲವೂ ಆಗ ನನ್ನ ಪರಲು ಹರಿದುಕೊಂಡು ಎಲ್ಲೋ ಮಾಯವಾಗಿಬಿಟ್ಟವು. ಆಗ ಕಟುವಾದ ಸತ್ಯಗಳನ್ನು ನಾನು ಇದುರಿಸುತ್ತಿದ್ದೆ. ಆ ಕಚ್ಚಾ ಮಣ್ಣಿನ ಕೋಣೆಯಲ್ಲಿ, ಯಾರೋ ಓಡಿಸಿ ತಂದ ಯಾರದೋ ಹೆಂಡತಿ ನನ್ನ ಮುಂದೆ ಮಂಚದ ಮೆಲೆ ಅಸಹಾಯಳಾಗಿ ಬಿದ್ದಿದ್ದಳು. ನನ್ನ ದೃಷ್ಟಿಯಲ್ಲಿ ಅವಳು ಮಾನವನು ಮಾನವನಿಗೆ ಮಾಡಿದ ಜುಲುಮೆಯ ಅತಿ ಕಠೋರ ಚಿತ್ರವಾಗಿದ್ದಳು.

ಹಿಂಡಿ ಹಿಪ್ಪೆಯಾಗಿ ಜ್ವರಗ್ರಸ್ತಳಾಗಿ ಅವಳು ಬಿದ್ದಿದ್ದಳು. ಅವಳ ಜಾತಿಯ, ಬಳಗದ, ಊರಿನ, ಧರ್ಮದ ಯಾರೂ ಅಲ್ಲಿ ಇದ್ದಿಲ್ಲ. ಆಕೆ ತನ್ನ ಅಗಲಿಹೋದ ಆಪ್ತ-ಇಷ್ಟರನ್ನು ಸಂಬಂಧಿಕರನ್ನು ತಿರುಗಿ ಸೇರಲು ಶಕ್ಯವಿತ್ತೆಂದು ಅವಳಿಗೆ ಯಾರೂ ಹೇಳಿದ್ದಿಲ್ಲ. ಯಾರಾದರೂ ಹೇಳಿದರೂ ಆ ಮಾತನ್ನು ಒಪ್ಪಲು ಅವಳು ಸಿದ್ಧಳಿದ್ದಿಲ್ಲ. ಕೊನೆಗೂ ಇಂಥ ದೊಡ್ಡ ಬಲಾಢ್ಯ ಪಾಕಿಸ್ತಾನದೊಳಗಿಂದ ಅವಳನ್ನು ಯಾರು ಹೇಗೆ ಹೊರಗೆ ಒಯ್ಯಬಲ್ಲರು ? ಈ ಮಾತನ್ನು ಕುರಿತು ವಿಚಾರಿಸುವದೇ ವ್ಯರ್ಥವಾಗಿತ್ತು.

ಆ ಸಮಯ ಅವಳನ್ನು ತಿರುಗಿ ಒಯ್ಯುವ ಪ್ರಶ್ನೆಯೇನೂ ಏಳುವಂತಿದ್ದಿಲ್ಲ. ಪುಷ್ಯ-ಮಾಘದ ಚಳಿಯಲ್ಲಿ ಈ ಬೇನೆಯ ಅವಸ್ಥೆಯಲ್ಲಿ ಅವಳನ್ನು ಅಲ್ಲಿಂದ ಚಲಿಸುವದು ಒಳಿತಿದ್ದಿಲ್ಲ. ಆ ಜನರು ಈಗ ಅವಳನ್ನು ಊರಿನಿಂದ ಮಾಯಮಾಡು

ವಂತಿದ್ದಿಲ್ಲ. ಏಕೆಂದರೆ ನಾವು ಅವಳನ್ನು ಕಂಡಿದ್ದೆವು. ಮತ್ತು ನಾವು ಕಂಡಿದ್ದು ಅವರಿಗೂ ಗೊತ್ತಿತ್ತು.

"ಒಳ್ಳೇದು, ಬೀಬೀ ಇನ್ನೊಮ್ಮೆ ಒಂದುದಿನ ಭೆಟ್ಟಿಯಾಗುತ್ತೇನೆ." ಇನ್ನೊಮ್ಮೆ ಭೆಟ್ಟಿಯಾಗುವೆನೆಂದುದಕ್ಕೆ ನನ್ನ ಅರ್ಥ ಅವಳನ್ನು ನಾನು ಅಲ್ಲಿಂದ ತಿರುಗಿ ಒಯ್ಯುವೆನೆಂದಿತ್ತು. ಆದರೆ ಈ ಸಂಗತಿ ಬಹುಶಃ ಅವಳ ಕನಸ್ಸಿನಲ್ಲಿಯೂ ಶಕ್ಯವಿದ್ದಿಲ್ಲ.

"ಈಗ ನೀವು ಹೋಗುವಿರಾ?"

"ಹೌದು."

"ತುಸು ಕೂಡ್ರಿ, ನನ್ನದೊಂದು ಮಾತು ಕೇಳಿಕೋಗಿ."

ನಾನು ತಿರುಗಿ ಪಕ್ಕದ ಮಂಚದ ಮೇಲೆ ಕೂತೆ.

"ನಾನು ನಿಮ್ಮೆದುರು ಒಂದು ವಿನಂತಿ ಮಾಡಬಯಸುತ್ತೇನೆ. ನೀವು ಪೂರೈಸು ವಂತಿದ್ದರೆ ನಿಮಗೆ ಅದೊಂದು ಕೆಲಸ."

"ಏನು ಕೆಲಸವದು?"

"ನೀವು ನನ್ನ ಸಿಖ್ಖ ಸೋದರರು. ನಾನೂ ಒಮ್ಮೆ ಸಿಖ್ಖಳಾಗಿದ್ದೆ. ಈಗ ನಾನು ಮುಸಲ್ಮಾನಳಾಗಿದ್ದೇನೆ. ಈ ಹೊತ್ತು ಈ ಲೋಕದಲ್ಲಿ ನನ್ನವರು ಯಾರೂ ಉಳಿದಿಲ್ಲ. ನಾನು ಬಹಳ ದುಃಖಿ. ನೀವು ನನ್ನ ಕೈಹಿಡಿದು ನೆರವಾಗಿರಿ. ನನಗೊಬ್ಬ ಕಿರಿಯ ನಾದಿನಿ ಇದ್ದಾಳೆ. ಅವಳನ್ನು ಹನ್ನೊಂದು ಮೋಸಗಾರರು ಎತ್ತಿಕೊಂಡು ಹೋದರು. ಆ ದಿನದ ದಾಳಿಯಲ್ಲಿ ಎಲ್ಲಕ್ಕೂ ದೊಡ್ಡ ಗುಂಪು ಅವರದೇ ಇತ್ತು. ಅವರೇ ನನ್ನ ನಾದಿನಿಯನ್ನು ಎಳೆದೊಯ್ದರು. ನನಗೆ ಅನಿಸುತ್ತದೆ, ಈ ಸಮಯ ನಿಮ್ಮ ಅಧಿಕಾರದ ಪ್ರಭಾವ ತುಂಬ ಬಲವಾಗಿದೆ. ನೀವು ಅವಳನ್ನು ಇಲ್ಲಿ ನನ್ನ ಕಡೆಗೆ ತಂದು ಬಿಡಿರಿ. ಎಲ್ಲ ಮಂದಿ ನಿಮ್ಮನ್ನು ಮನ್ನಿಸುತ್ತಾರೆ. ಪೋಲೀಸಿನವರೂ ನಿಮ್ಮ ಮಾತು ಕೇಳುತ್ತಾರೆ. ನನ್ನ ಪತಿಯಿಂದಲೂ ನೀವು ಅವಳ ಹತ್ತಿರ ಬೇಡಿ ಕೊಳ್ಳಬೇಕು. ನಾನು ಅವಳಿಗೆ ಹಿರಿಯ ಅತ್ತಿಗೆ, ನಾನು ಅವಳನ್ನು ನನ್ನ ಕೈಯಿಂದ ಪಾಲನೆ ಮಾಡಿದ್ದೇನೆ. ನಾನು ಅವಳಿಗೆ ತಾಯಿಯ ಸಮಾನ. ಅವಳು ಅಗತ್ಯ ನನ್ನ ಬಳಿಗೆ ಬರುವಳು. ನಾನೇ ನನ್ನ ಕೈಯಿಂದ ಅವಳನ್ನು ಇಲ್ಲಿ ಯಾವದೇ ಸೆರಗಿಗೆ ಕಟ್ಟುವೆನು. ನನ್ನ ಬಾಳಿನ ಸಂಜೆ ಬೆಳೆಯುವದು. ನನಗೂ ನಾಲ್ಕು ಕೈ ಬಂದಂತೆ ಆಗುವದು. ಒಬ್ಬರನ್ನಾದರೂ ನನ್ನವಳೆಂದು ಕರೆಯಬಲ್ಲೆ."

ಆ ಮುದಿ ಜಾಟನ ಮಾತು ನನ್ನ ತಲೆಯಲ್ಲಿ ಸುತ್ತುತಿರುಗಹತ್ತಿತು, "ನೋಡು, ಗದ್ದೆಯಲ್ಲಿ ಆ ಗರಿಕೆ ಹುಲ್ಲು ಇರುತ್ತದಲ್ಲ, ರಂಟೆ ಹೂಡುವಾಗ ಅದನ್ನು ಕಿತ್ತು ಒಗೆಯುವದರಲ್ಲಿ ಏನೂ ಕಡಿಮೆ ಮಾಡಲಾಗುವದಿಲ್ಲ. ಇಡಿಯದನ್ನೆ ಬುಡಗೂಡಿ ಕಿತ್ತು ಗದ್ದೆಯ ಹೊರಗೆ ಒಗೆಯಲಾಗುತ್ತದೆ. ಆದರೆ ಹತ್ತು ದಿನಗಳ ಮೇಲೆ ಅದರ ಯಾವದಾದರೂ ಬೇರಿಗೆ ಚಿಗುರೊಡೆದೇ ಒಡೆಯುತ್ತದೆ.

# ಉದ್ಗಾರ

ಲೋಟಾದಲ್ಲಿ ಮಜ್ಜಿಗೆಯನ್ನು ಹಾಕಿಸಿಕೊಂಡು ಕರಮೋ ಅದು ಅರ್ಧಕ್ಕಿಂತ ಹೆಚ್ಚು ಖಾಲಿಯಾಗಿರುವದನ್ನು ಕಂಡು ಅಂದಳು, "ಈಹೊತ್ತು ಹಿರಿ ಸರದಾರಿಣಿ ಕಾಣಲಿಲ್ಲ. ಚೆನ್ನಾಗಿದ್ದಾರಲ್ಲ?"

ಸರದಾರಿಣಿ ನಿಹಾಲಕೌರ ಅದೇ ಆಗ ಕೆಲವು ನಿಮಿಷ ಮುಂಚೆ ಅಡುಗೆಯ ಕೋಣೆಯಲ್ಲಿ ಬಂದಿದ್ದಳು. ಒಲೆಯ ಮೇಲೆ ಕುದಿಯುತ್ತಿರುವ ಪಾಯಸದ ಕೆಳಗೆ ಸೌದೆಯ ತೀವ್ರ ಜ್ವಾಲೆಯನ್ನು ಕಂಡು ಅವಳು ಸೌದೆಯ ಕೊಳ್ಳಿಗಳನ್ನು ಹಿಂದಕ್ಕೆ ಜಗ್ಗುತ್ತ ಅಂದಿದ್ದಳು, "ವೀರೋ. ಹುಯ್ಮಾಲಿ; ಈಗ ಇಷ್ಟು ಜೋರು ಬೆಂಕಿಯ ಮೇಲೂ ಪಾಯಸ ಬೇಯಿಸುತ್ತೀರಾ? ಪಾಯಸದಡಿಗೆ ಬಹಳ ಮಂದ ಬೇಗೆ ಉರಿಯುತ್ತಿರಬೇಕು." ಹೀಗೆಂದು ಅವಳು ಒಲೆಯ ಹತ್ತಿರ ಮಣೆಯನ್ನೊಂದು ಹಾಕಿಕೊಂಡು ಕುಳಿತುಬಿಟ್ಟಳು. ಮತ್ತು ಪಾಯಸದ ತಪೇಲಿಯಲ್ಲಿ ಸಟ್ಟುಗವನ್ನು ತಿರುವುತ್ತ ಉಳಿದಳು. ಮುಂಜಾನೆ ಮೊಸರ ಗಡಿಗೆಯನ್ನು ಅವಳು ತಾನೇ ಕಡೆದಿದ್ದಳು. ಮತ್ತು ಮಜ್ಜಿಗೆಯಿಂದ ಬೆಣ್ಣೆಯನ್ನು ತೆಗೆಯುತ್ತ ಅವಳು ವೀರೋಳಿಗೆ ಅಂದಿದ್ದಳು, "ನಾನೀಗ ಒಂದು ಕ್ಷಣ ಆರಾಮು ತೆಗೆದುಕೊಳ್ಳುತ್ತೇನೆ. ಯಾರಾದರೂ ಆಳು-ಕೀಳು ಜನ ಬಂದರೆ ನೀನೇ ಅವರಿಗೆ ಮಜ್ಜಿಗೆ ಕೊಟ್ಟುಬಿಡು."

ಬೇರೆ ಆಳು ಮಂದಿ ಮಜ್ಜಿಗೆಗಾಗಿ ಬಂದಾಗಲೂ ಇದೇ ಮಾತು ಕೇಳಿರಬಹುದು. ಆದರೆ ನಿಹಾಲಕೌರಗಳಿಗೆ ಅದು ಗೊತ್ತಿದ್ದಿಲ್ಲ. ಅವಳು ಒಳಗಿನ ಕೋಣೆಯಲ್ಲಿ ಇದ್ದಳು. ಆದರೆ ಈಗ ಅವಳು ಅಡುಗೆಯ ಕೋಣೆಯಲ್ಲಿ ಕೂತಿದ್ದಳು. ಆದ್ದರಿಂದ ಹೊಸ್ತಿಲ ಹೊರಗೆ ಕೂತ ಕರಮೋಳ ದನಿ ಅವಳೇ ಕೇಳಿದಳು.

"ಚೆನ್ನಾಗಿದ್ದೇನೆ. ಕರಮೋ ನೀನು ಚೆನ್ನಾಗಿದ್ದೀಯಾ?" ನಿಹಾಲಕೌರ ಒಳಗಿನಿಂದಲೇ ಹೇಳಿದಳು.

ಕರಮೋ ಲಗು ಹೊಸ್ತಿಲ ಹತ್ತಿರಕ್ಕೆ ಬಂದು ಒಳಗೆ ಇಣಕಿ ನೋಡಹತ್ತಿದಳು. ಮತ್ತು ಒಂದು ಕೈಯಿಂದ ತಲೆಯನ್ನು ಮುಟ್ಟಿಕೊಂಡು ಅಂದಳು, "ನಿಮಗೆ ಎಳು ಕಲ್ಯಾಣವಾಗಲಿ, ಸರದಾರಿಣಿಯರೇ! ಇಂದು ನಿಮ್ಮನ್ನು ಕಂಡಿದ್ದಿಲ್ಲ. ನನಗೆ ಚಿಂತೆ. ನನ್ನ ಸರದಾರಿಣಿ ಚೆನ್ನಾಗಿಲ್ವೇ?—ಎಂದು."

ಎಲ್ಲ ಆಳು-ಹೋಳು-ಕೆಳಮಟ್ಟದ ಜನ ನಿಹಾಲಕೌರಳ ಅನುವು-ಆಪತ್ತುಗಳ ಬಗೆಗೆ ಚಿಂತೆ ತೋರಿಸುತ್ತಿದ್ದರು. ಇದೇನೂ ಹೊಸ ಸಂಗತಿಯಲ್ಲ. ಆದರೂ ಇಂದು ನಿಹಾಲಕೌರಳಿಗೆ ಅನಿಸಿತು. ಮಜ್ಜಿಗೆ ಒಡೆಯುವಾಗ ಕರಮೋ ತನ್ನ ನೆನವು

ಮಾಡಿದ್ದರಲ್ಲಿ ಏನೋ ಅಗತ್ಯದ ಮಾತು ಇರಬೇಕು. ನಿಹಾಲಕೌರ ಕರಮೋಳ ಕಡೆಗೆ ನೋಡಿದಳು. ಆಗ ಕರಮೊ ತನ್ನ ಲೋಟಾದ ಬಾಯಿ ವಾರೆ ಮಾಡಿ ಅವಳ ಕಡೆಗೆ ಹಿಡಿದಳು. ನಿಹಾಲಕೌರಳಿಗೆ ಗೊತ್ತಾಗಿಬಿಟ್ಟಿತು, ಅವಳು ವೀರೋಳಕಡೆಗೆ ನೋಡಿ ಅಂದಳು, "ನಾನಂದೆ ಕರಮೋಳಿಗೆ ಲೋಟಾ ತುಂಬಿ ಕೊಡುತ್ತಿರು. ಎಂತ—ಅವಳಿಗೆ ಸಣ್ಣಸಣ್ಣ ಮಕ್ಕಳು—ಅವು ಮಜ್ಜಿಗೆ ಕುಡಿಯುತ್ತವೆ."

"ದೇವರು ನಿಮಗೆ ತುಂಬಿ ತುಂಬಿ ಕೊಡಲಿ! ನಿಮ್ಮ ಕೈ ಇಷ್ಟು ಒಳ್ಳೇದು. ನನ್ನ ಮಕ್ಕಳು ಎರಡೆರಡು ಸಲ ಮಜ್ಜಿಗೆ ಸುರಿಯುತ್ತವೆ!" ಮಜ್ಜಿಗೆ ತೆಗೆದು ಕೊಳ್ಳುವಾಗ ಕರಮೋ ಅಂದಳು. ಆಗ ಅವಳಿಗೆ ಮಜ್ಜಿಗೆ ಕೊಡುವ ಕೈ ವೀರೋಳ ದಾಗಿತ್ತು. ಆದರೂ ಅವಳು ಅನ್ನುತ್ತಿದ್ದುದು ನಿಹಾಲಕೌರಳ ಕೈಗಳ ಬಗೆಗೇ ಇತ್ತು.

ಕರಮೋ ಹೊರಟು ಹೋದಳು. ನಿಹಾಲಕೌರ ಅವಳ ಆಶೀರ್ವಾದ ಮರೆತು ಹೋದಳು. ಆದರೆ ಒಂದು ಮಾತು ನೆನಪಿನಲ್ಲಿ ಉಳಿಯಿತು—'ಹಿರಿಯ ಸರದಾರಿಣಿ.'

ನಿಹಾಲಕೌರ ಒಂದೇ ದಿನದಲ್ಲಿ ಸರದಾರಿಣಿ ಇದ್ದವಳು ಹಿರಿಯ ಸರದಾರಿಣಿ ಆಗಿಬಿಟ್ಟಿದ್ದಳು. ಅವಳನ್ನು ಹಾಗೆ ಕರೆಯುವ ವಿಚಾರ ಯಾರಿಗೆ ಮೊದಲು ತೋಚಿತೋ ಗೊತ್ತಿಲ್ಲ. ಬಹುಶಃ ಎಲ್ಲವರಿಗೂ ಒಟ್ಟಾಗಿಯೇ ಒಮ್ಮೆಲೇ ಆ ವಿಚಾರ ಬಂದಿರಬೇಕು. ಮನೆಯ ಹೊಲತಿಯಿಂದ ಹಿಡಿದು ಕಾರಖಾನೆಯ ಮುನ್ಷಿ, ಮುನೀಮ ಮತ್ತು ಕೆಳದರ್ಜೆಯ ಆಳುಕಾಳುಗಳೆಲ್ಲರೂ ಅವಳನ್ನು ಸರದಾರಿಣಿಯೆಂದು ಕರೆಯಹತ್ತಿದ್ದರು. ಮನೆಯ ಯಜಮಾನ ಸರದಾರರೂ ಕೂಡ ನಿನ್ನೆ ಅವಳನ್ನು ಹಿರಿಯ ಸರದಾರಿಣಿಯೆಂದು ಕರೆದಿದ್ದರು. ಮತ್ತೆ ನಿಹಾಲಕೌರಳಿಗೆ ನೆನಪಾಯಿತು. ಅವಳೇ ಸ್ವತಃ ಹೊಲತಿಗೆ ಹೇಳಿದ್ದಳು, "ಹೋಗು, ಕಿರಿ ಸರದಾರಿಣಿಯನ್ನು ಅವಳ ಕೋಣೆಯಿಂದ ಕರೆದುತಾ" ಅಂದಾಗ ಒಬ್ಬಳು ಕಿರಿ ಸರದಾರಿಣಿಯೆಂದು ಆದಾಗ ಇನ್ನೊಬ್ಬಳು ಹಿರಿ ಸರದಾರಿಣಿ ತಾನೇ ಆಗಿಬಿಟ್ಟಂತೆ. ನಿಹಾಲಕೌರಳಿಗೆ ವಿಚಾರ ತೊಳೆಯಿತು, ಮತ್ತು ಎಷ್ಟೋ ಬೇರೆ ವಿಚಾರಗಳು ಚಿಕ್ಕ ಚಿಕ್ಕ ಅಕ್ಕಿಕಾಳುಗಳಂತೆ ಅವಳ ಮನಸ್ಸಿನ ಹಾಲಿನಲ್ಲಿ ಮರಳಹತ್ತಿದವು.

ಆ ಮರಳುವ ವಿಚಾರಗಳಲ್ಲಿ ಒಂದು ವಿಚಾರ ಹೀಗೂ ಇತ್ತು; ವೀರೋ ಅವಳ ಮನೆಗೆ ಕಿರಿ ಸರದಾರಿಣಿಯಾಗಿ ಬಂದಂದಿನಿಂದ ಅವಳು ರಾತ್ರೆ ಮಲಗುವ ಹೊತ್ತಿಗೆ ನೇಮವಿಟ್ಟಂತೆ ನಿಹಾಲಕೌರಳ ಕೋಣೆಗೆ ಬರುತ್ತಿದ್ದಳು. ಮತ್ತು ಅವಳ ಮಂಚದಮೇಲೆ ಕಾಲಿನ ಭಾಗದಲ್ಲಿ ಕುಳಿತು ಅವಳ ಕಾಲನ್ನು ಒತ್ತುತ್ತಿದ್ದಳು. ನಿಹಾಲಕೌರಳು ಮಗಳನ್ನು ಡೋಲಿಯಲ್ಲಿ ಬೀಳ್ಕೊಡುವದಿದ್ದಿಲ್ಲ. ಮಗನ ಮದು ಮಗಳನ್ನು ಮನೆಗೆ ತರುವದೂ ಇದ್ದಿಲ್ಲ. ಆದರೆ ತನ್ನ ಸವತಿ ತಾನೇ ತನ್ನ ಕೈಯಿಂದ ಮದುವೆಮಾಡಿಸಿ ತಂದವಳು, ತನ್ನ ಕಾಲು ಒತ್ತುತ್ತಿರುವಾಗ ನಿಹಾಲಕೌರಳಿಗೆ ತಾನೀಗ ಮಗಳ ಸುಖವನ್ನು ಕಂಡುಕೊಂಡೆ, ಸೊಸೆಯ ಸುಖವನ್ನು ಕಂಡೆ—

ಎಂದೆನಿಸುತ್ತಿತ್ತು. ಮತ್ತು ನಿಹಾಲಕೌರ ಒಂದು ಆಳವಾದ ಉಸಿರೆಳೆದು ದೊಡ್ಡ ನಗುವ ತುಟಿಗಳಿಂದ ತನ್ನೊಳಗೆ ಬಡಬಡಿಸಿಕೊಂಡಿದ್ದಳು,—ನನಗೆ ವೀರೋ ಮಗಳೂ ಸರಿ, ಸೊಸೆಯೂ ಸರಿ.

ನಿಹಾಲಕೌರಳು ತನ್ನ ಯಜಮಾನನ (ಸರದಾರನ) ಎಂಟನೆಯ ಮದುವೆಗಾಗಿ ಈ ಹುಡುಗಿ ವೀರೋಳನ್ನು ತಾನೆ ಹುಡುಕಿ ತೆಗೆದಿದ್ದಳು. ಒಳ್ಳೇ ಮನೆತನಗಳ ನೆಂಟಸ್ತಿಕೆ ಸಿಗುವಂತಿತ್ತು. ಆದರೆ ಆ ನೆಂಟಸ್ತಿಕೆ ಸರದಾರನಿಗೆ ಅಲ್ಲ, ಸರದಾರನ ಹವೇಲಿ (ದೊಡ್ಡಮನೆ)ಗೆ ಸಿಗುತ್ತಿತ್ತು. ಸರದಾರನ ವೃದ್ಧಾಪ್ಯಕ್ಕೆ ಅಂಜಿ ನೆಂಟಸ್ತಿಕೆಗಾಗಿ ಬರುವ ಯಾರೊಬ್ಬನೂ ನೆಂಟಸ್ತಿಕೆಯ ಮಾತಿಗಿಂತ ಮೊದಲೆ ಹವೇಲಿಯನ್ನು ತಮ್ಮ ಮಗಳ ಹೆಸರಿಗೆ ಮಾಡಿಸಿಕೊಳ್ಳಲಿಕ್ಕೇ ಇಚ್ಛಿಸುತ್ತಿದ್ದರು. ಸರದಾರನಿಗೆ ತನ್ನ ಹವೇಲಿಗೆ ಒಬ್ಬ ಉತ್ತರಾಧಿಕಾರಿ ಬೇಕೆಂಬುದಿತ್ತು. ಆದರೆ ಯಾರ ಗರ್ಭದಲ್ಲಿ ಉತ್ತರಾಧಿಕಾರಿ ಎಂದು ಹುಟ್ಟಿ ಬರುವವನಿದ್ದನೋ ಅಂಥ ಒಬ್ಬ ಹೆಂಗಸಿನ ಹೆಸರಿಗೆ ಆತ ತನ್ನ ಹವೇಲಿಯನ್ನು ಹಚ್ಚಿಸಲಾರ. ಇನ್ನು ಉತ್ತರಾಧಿಕಾರಿಯ ಮಾತು ಬರೇ ಭವಿಷ್ಯವಾಣಿಯಾಗಿತ್ತು.

ಎಂಟನೇ ಮದುವೆ ಮಾಡಿಕೊಳ್ಳಲು ಸರದಾರ ಒಪ್ಪಿದ್ದೇ ಇಲ್ಲ. ಆದರೆ ಈ 'ಸ' ಕಾರದಲ್ಲಿ ಒಂದು ವೇದನೆಯ ಉದ್ಗಾರವಡಗಿತ್ತು. ನಿಹಾಲಕೌರ ಈ ಉದ್ಗಾರವನ್ನು ಕೇಳಿದ್ದಳು. ಮತ್ತು ಅವಳು ಒಂದು ಬಡ ಮನೆತನದ ಈ ವೀರೋಳನ್ನು ಹುಡುಕಿ ತಂದು ತನ್ನ ಸರದಾರನಿಗೆ ಕೊಟ್ಟಿದ್ದಳು. ಮತ್ತು ಅವನ ಬದಲು ತಾನೇ ಈಗ ವೇದನೆಯ ಉದ್ಗಾರಗಳನ್ನು ತೆಗೆಯುತ್ತಿದ್ದಳು.

ಒಂದು ದಿನ ಸರದಾರನು ಗೋಡೆಯೊಳಗೆ ಕೂಡಿಸಿದ ತನ್ನ ಉಕ್ಕಿನ ಕವಾಟನ್ನು ತೆರೆದು ಅದರ ಇದುರಿಗೆ ಬಹಳ ಹೊತ್ತು ನಿಂತು ಏನೋ ವಿಚಾರ ಮಾಡುತ್ತಲೇ ಉಳಿದ. "ಹಿರಿ ಸರದಾರಿಣಿ ಎಲ್ಲಿ ಹೋದಳು?"—ತಾಳ್ಮೆಗೆಟ್ಟ ಸರದಾರ ವೀರೋಳಿಗೆ ಕೇಳಿದ. ಹಿರಿ ಸರದಾರಿಣಿ ಆಗ ಮನಿಯೊಳಗೆ ಇದ್ದಿಲ್ಲ. ಸರದಾರ ಕವಾಟನ್ನು ಮುಚ್ಚಿ ಕೀಲಿಯನ್ನು ಜೇಬಿನಲ್ಲಿಟ್ಟುಕೊಂಡನು. ಮತ್ತು ಕಾರಖಾನೆಗೆ ಹೋಗುವ ಮೊದಲು ವೀರೋಳಿಗೆ ಹೇಳಿಟ್ಟು ಹೋದ--ನಿಹಾಲಕೌರ ಯಾವ ಹೊತ್ತಿಗೂ ಮನೆಗೆ ಮರಳಲಿ, ಅವಳು ಒಂದೊಡನೆಯೇ ಕೆಳಗೆ ಮುನ್ನಿಗೆ ಕಳಿದು ಹೇಳಿ ತನಗೆ ಕಾರಖಾನೆಯಲ್ಲಿ ಆ ಸಮಾಚಾರ ತಿಳಿಸಬೇಕು. ನಿಹಾಲಕೌರ ಹಿಂದಿರುಗಿ ಬಂದಾಗ ವೀರೋ ಹೊರಗಿನ ಕಟ್ಟೆಯ ಮೇಲೆ ಗಾಬರಿಗೊಂಡು ಕುಳಿತಿದ್ದಳು. ಅವಳಿಗೆ ಅದೇತಾನೆ ವಾಂತಿ ಆಗಿತ್ತು.

ನಿಹಾಲಕೌರ ವೀರೋಳ ಭುಜ ಹಿಡಿದಳು, ಹೆಗಲು ಒತ್ತಿದಳು. ಮತ್ತು ಅವಳನ್ನು ಮಂಚದ ಮೇಲೆ ಮಲಗಿಸಿದಳು. ಆದರೆ ವೀರೋ ನಡುಗುತ್ತ ಕೆಳಗೆ ಇಳಿದು ಬಂದು ಬಾಗಿ ನಿಹಾಲಕೌರಳ ಪಾದಗಳನ್ನು ಹಿಡಿದಳು.

"ಸರದಾರಿಣೀ, ಒಂದು ದಿನ ನೀನು ನನಗೆ ಹೇಳಿದ್ದಿ—ನಾನು ನಿನ್ನ ಮಗಳೂ ಹೌದು, ಸೊಸೆಯೂ ಹೌದು—ಎಂದು. ಇಂದು ನನ್ನನ್ನು ಉಳಿಸು.—ಮಗಳೆಂದೇ ತಿಳಿ. ಅಥವಾ ಸೊಸೆಯೆಂದೇ ತಿಳಿ." ವೀರೋ ಅಳುತ್ತ ಎದ್ದಳು. ಅಳುತ್ತ ಅಳುತ್ತಲೇ ನಿಹಾಲಕೌರಳಿಗೆ ಹೇಳಿದಳು: ಕೆಲದಿನ ಹಿಂದೆ ಅವಳ ಅಣ್ಣ ಅವಳ ಭೆಟ್ಟಿಗೆ ಬಂದಾಗ ಅವನಿಗೆ ಕೆಲವು ರೂಪಾಯಿಗಳ ಅತ್ಯಂತ ಅವಶ್ಯಕತೆ ಇತ್ತು. ವೀರೋ ಅವನಿಗೆ ಕೆಲವು ರೂಪಾಯಿ ಕೊಟ್ಟಳು. ಆದರೆ ಅವಳ ಹತ್ತಿರ ರೂಪಾಯಿ ತುಸು ಕಡಿಮೆ ಇದ್ದವು. ಆದ್ದರಿಂದ ಅವಳು ಸರದಾರನ ಜೇಬಿನಿಂದ ಕಪಾಟಿನ ಕೀಲಿ ಕದ್ದು ತೆಗೆದು ಆ ಉಕ್ಕಿನ ಕಪಾಟವನ್ನು ತೆರೆದು ಅದರೊಳಗಿನ ಬೆಳ್ಳಿಯ ಪಾತ್ರೆತೆಗೆದು ಅವನ್ನು ಅಣ್ಣನಿಗೆ ಕೊಟ್ಟುಬಿಟ್ಟಿದ್ದಳು!

"ಇದು ನಿನ್ನದೇ ಸ್ವತಃ ಮನೆ, ವೀರೊ! ನಿನ್ನ ಮನೆಯನ್ನು ನಿನ್ನದೀ ಕೈಯಿಂದ ನೀನು ಹಾಳು ಮಾಡಿದರೂ..." ಇನ್ನೂ ನಿಹಾಲಕೌರ ತನ್ನ ಮಾತು ಮುಗಿಸಿದ್ದೇ ಇಲ್ಲ. ನಡುವೆಯೇ ವೀರೋ ಸಿಡಿಮಿಡಿಯಾಗಿ ಎದ್ದಳು. "ಈ ಮನೆ ನನಗೆ ಯಾವಾಗಲೂ ನನ್ನದೆನಿಸಲಿಲ್ಲ. ಎನಿಸಲಿಕ್ಕೂ ಇಲ್ಲ. ಆದರೆ ನಾನು ನಿನ್ನಲ್ಲಿ ಶಪಥಮಾಡಿ ಹೇಳುತ್ತೇನೆ. ನಿನ್ನ ಇದುರಿನಿಂದ—ಸರದಾರಿಣಿಯು ಇದುರಿನಿಂದ—ನಾನು ಎಂದೂ ಈ ಮನೆಯ ಯಾವದೇ ವಸ್ತುವನ್ನು ಯಾರಿಗೂ ಕೊಡುವದಿಲ್ಲ. ನಾನು ಆ ದಿನವೂ ತಪ್ಪು ಮಾಡಿದ್ದೆ. ಆ ಮೇಲೆ ನನಗೆ ಪಶ್ಚಾತ್ತಾಪವಾಯಿತು. ನಿನಗೆ ಗೊತ್ತಿದೆ. ನನ್ನ ಮದುವೆಯ ಸಮಯ ನನ್ನ ಅಣ್ಣನ ವ್ಯವಹಾರಗಳ ಸಲುವಾಗಿ ನನ್ನ ತಂದೆ ನಿನ್ನ ಇದುರು ದುಂಬಾಲು ಬಿದ್ದು ನಿನ್ನಿಂದ ಎರಡು ಸಾವಿರರೂಪಾಯಿ ಬೇಡಿಕೊಂಡಿದ್ದ. ನೀನು ಎರಡುಸಾವಿರ ರೂಪಾಯಿ ಕೊಟ್ಟುಬಿಟ್ಟಿ. ಆ ಎರಡು ಸಾವಿರ ರೂಪಾಯಿಗಳ ಸಲುವಾಗಿ ನನ್ನನ್ನು ಈ ಮುದಿ ಸರದಾರನ ಕೊರಳಿಗೆ ಕಟ್ಟಿದರು. ನನ್ನ ತಂದೆ ನನ್ನ ಅಣ್ಣ ಇವರೂ ನನ್ನ ಖಾಸಾ ಸಂಬಂಧಿಕರಾಗಲಿಲ್ಲ. ...ಈಗ ನಾನು ಯಾರದಾದರೂ ಮನೆಯನ್ನು ಹಾಳುಮಾಡಿ ಅವರ ಮನೆ ಏಕೆ ತುಂಬಲಿ?"

"ವೀರೋ!..." ತಬ್ಬಿಬ್ಬಾಗಿ ನಿಹಾಲಕೌರ ವೀರೋಳ ಮುಖವನ್ನೇ ನೋಡಹತ್ತಿದಳು.

ನಿಹಾಲಕೌರ ವೀರೋಳ ಮರ್ಯಾದೆ ಉಳಿಸಿದಳು. ಸರದಾರನಿಗೆ ಹೇಳಿಬಿಟ್ಟಳು. ಕಪಾಟಿನಲ್ಲಿಟ್ಟ ಆ ಬೆಳ್ಳಿಯ ಪಾತ್ರೆಗಳು ಹಳೆಯ ಮಾದರಿಯವಿದ್ದವು. ಆದ್ದರಿಂದ ಆ ಪಾತ್ರೆಗಳ ಜತೆಗೆ ತನ್ನ ಕೈಯಿಂದ ಸ್ವಲ್ಪ ಬೆಳ್ಳಿಹಾಕಿ ಹೊಸ ಪಾತ್ರೆಗಳನ್ನು ತಯಾರಿಸಲು ಸೊನಗಾರನ ಕಡೆಗೆ ಕಳುಹಿಸಲಾಗಿದೆ.

ಸರದಾರನ ಚಿಂತೆ ಹರಿಯಿತು. ಆದರೆ ನಿಹಾಲಕೌರ ವೀರೋಳ ಮೋರೆಯನ್ನು ನೋಡಿದಾಗೆಲ್ಲ ಅವಳ ಮನಸ್ಸಿನಲ್ಲಿ ಒಂದು ಚಿಂತೆ ಹುಟ್ಟುತ್ತಿತ್ತು. ವೀರೋಳ ಕಣ್ಣು

ತುಂಬಿಗಳಂತೆ ಕಪ್ಪಾಗಿದ್ದವು. ಮೈ ಬಣ್ಣ ತುಸು ಶ್ಯಾಮಲವಿತ್ತು. ಆದರೆ ಆ ಶ್ಯಾಮಲ ಬಣ್ಣದಲ್ಲಿ ಯೌವನವು ಜಡಿದು ಹಿಟ್ಟಿನಂತೆ ನಾದಿ ಮೆದ್ದಿ ತುಂಬಿತ್ತು. ಅವಳ ತೋಳುಗಳು ಲಟ್ಟಣಿಗೆಯಂತೆ ದುಂಡಗೆ ಬಡಕಲು ಆಗಿದ್ದವು. ತೋಳು ಗಳನ್ನು ಚಿವುಟಿದರೆ ಮಾಂಸವೆದ್ದು ಬರುತ್ತಿದ್ದಿಲ್ಲ. ನಿಹಾಲಕೌರಳಿಗೆ ಅನಿಸಿತು, ತಾನು ತನ್ನ ಹೊಣೆಯೆಂದು ವಹಿಸಿಕೊಂಡಿದ್ದ ಸರದಾರನ ಮನೋವೇದನೆಯ ಉದ್ಗಾರವನ್ನು ಈಗ ವೀರೋ ವಹಿಸಿಕೊಂಡು ತನ್ನ ಎದೆಯೊಳಗೆ ಇಟ್ಟು ಕೊಂಡಿದ್ದಾಳೆ.

ಮತ್ತೆ ವೀರೋಳಿಗೆ ದಿನ ತುಂಬುತ್ತ ನಡೆದವು. ಹವೇಲಿ ಬಹಳ ದೊಡ್ಡದಿತ್ತು. ಆದರೆ ಇಷ್ಟು ಉಡುಗೊರೆಗಳು ಬಂದವು—ಹವೇಲಿಯಲ್ಲಿ ಅವು ಹಿಡಿಸುತ್ತಿದ್ದಿಲ್ಲ. ಸರದಾರನ ಕಾಲು ನೆಲಕ್ಕೆ ತಾಗುತ್ತಿದ್ದಿಲ್ಲ. ಮತ್ತು ನಿಹಾಲಕೌರ ವೀರೋಳಿಗೂ ನೆಲದ ಮೇಲೆ ಕಾಲಿಡಲು ಕೊಡುತ್ತಿದ್ದಿಲ್ಲ. ಆದರೆ ಜನರು ಸರದಾರ ಮತ್ತು ವೀರೋ ಇವರಿಬ್ಬರಿಗಿಂತ ನಿಹಾಲಕೌರಳಿಗೇ ಹೆಚ್ಚು ಧನ್ಯವಾದಗಳನ್ನು ಕೊಡುತ್ತಿದ್ದರು.

"ಹುಟ್ಟಿದ ಕೂಡಲೇ ನಾನು ನನ್ನ ಜೋಳಿಗೆಯಲ್ಲಿ ಹಾಕಿಕೊಳ್ಳಬೇಕು. ಆಮೇಲೆ ಹೇಳೋಣವಿಲ್ಲ. ನಾನು ಹಿರಿ ಸರದಾರಿಣಿ. ನೀನು ಕಿರಿ ಸರದಾರಿಣಿ ಮೊದಲನೆಯ ಹುಡುಗ ಹಿರಿಯನೇ ಆಗುತ್ತಾನೆ, ಆಮೇಲೆ ಹುಟ್ಟಿದವೆಲ್ಲ ನಿನ್ನವು..." ನಿಹಾಲಕೌರ ನಗುನಗುತ್ತಲೇ ವೀರೋಳಿಗೆ ಹೇಳುತ್ತಿದ್ದಳು. ನಿಹಾಲಕೌರಳಿಗೇ ಸ್ವತಃ ಗೊತ್ತಾಗುತ್ತಿದ್ದಿಲ್ಲ. ತನ್ನ ಮನಸ್ಸಿನಲ್ಲಿ ಎಲ್ಲೂ ಏನೂ ದುಃಖ ಅಪ್ಪಿತಪ್ಪಿಯೂ ಕದ್ದುಮುಚ್ಚಿಯೂ ಏಕೆ ಅನಿಸುತ್ತಿದ್ದಿಲ್ಲವೆಂದು. ಅವಳು ತನ್ನ ಕೈಯಿಂದಲೇ ತನ್ನ ಯಜಮಾನನನ್ನು ಒಬ್ಬ ಹೆರವರ ಮನೆಯ ಹೆಣ್ಣಿಗೆ ಒಪ್ಪಿಸಿದ್ದಳು. ಮತ್ತು ಈಗ ಅವಳು ತನ್ನ ಎಲ್ಲ ಜಮೀನು—ಆಸ್ತಿಪಾಸ್ತಿಯನ್ನು ಆ ಹೆರವರ ಹೆಂಗಸಿನ ಮಗನ ಹೆಸರಿಗೆ ಮಾಡಲು ಹೊರಟಿದ್ದಳು.

"ಅಲ್ಲೆ, ಯಾವ ಗಳಿಗೆಗೆ ನಿನ್ನ ನಾನು ಮಗಳೂ ಸೊಸೆ ಎಂದು ಕರೆದಿದ್ದೆನೋ ಆಗ ನಾನು ನಿಜವಾಗಿಯೂ ಒಬ್ಬ ಅತ್ತೆಯಂತೆ ತಾಯಿಯಂತೆ ಸಂತುಷ್ಟಳಿದ್ದೇನೆ. ನನಗೆ ಎಂದೆಂದಿಗೂ ನೆನಪಾಗುವದಿಲ್ಲ ನೀನು ನನ್ನ..." ನಿಹಾಲಕೌರಳ ಈ ಮಾತನ್ನು ವೀರೋ ಈ ನಡುವೆಯೇ ಕಡಿದು ಬಿಟ್ಟು ನಕ್ಕು ಅನ್ನುತ್ತಿದ್ದಳು, "ಸರದಾರಿಣಿ, ನಾನು ನಿನಗೆ ಏನೇ ಆಗಿರಲಿ ಬಿಡಲಿ, ನನಗೆ ಇಷ್ಟೊಂದು ಗೊತ್ತಿದೆ, ನಾನು ನಿನ್ನ ಸವತಿ ಅಲ್ಲ."

ನಿಹಾಲಕೌರಳು ಬಡಿಗನಿಂದ ತಯಾರಿಸಿದ ತೊಟ್ಟಿಲಿಗೆ ಬೆಳ್ಳಿಯ ಪುಟ್ಟ ಗಂಟೆಗಳನ್ನು ಕಟ್ಟಿದಳು. ನಿಜವಾದ ರೇಶಮಿಯ ಒಂದು ಹಚ್ಚಡವನ್ನು ಹೊಲಿಸಿದಳು. ನಗರದ ಒಬ್ಬ ಇಂಗ್ಲೀಷ ಅಧಿಕಾರಿ ಒಂದು ತಿಂಗಳ ರಜೆಯ ಮೇಲೆ ವಿಲಾಯತಕ್ಕೆ ಹೋಗುವವನಿದ್ದ. ನಿಹಾಲಕೌರ ಅಂದಳು, 'ವಿಲಾಯತಿ ಸ್ವೆಟ್ಟರ ರೇಶಮಿಯಂತೆ

ಇರುತ್ತವೆ.' ಅವಳು ಆ ಅಧಿಕಾರಿಯೊಂದಿಗೆ ಮಾತು ಗೊತ್ತು ಮಾಡಿದಳು—ಆತ ಬರುವಾಗ ಇಂಗ್ಲೆಂಡಿನಿಂದ ಪುಟ್ಟ ಪುಟ್ಟ ಸ್ವೆಟ್ಟರುಗಳನ್ನು ತಪ್ಪದೇ ಕೊಂಡು ತರಬೇಕೆಂದು.

ತನ್ನ ಸಮಯಕ್ಕೆ ನಿಹಾಲಕೌರಳು ಪ್ರೌಢದಾಯಿಗಳಿಗೂ ತೋರಿಸಿದ್ದಳು. ದೊಡ್ಡ ಶಹರಗಳಿಗೆ ಹೋಗಿ ಅಲ್ಲಿಯ ಡಾಕ್ಟರರಿಗೂ ತೋರಿಸಿದ್ದಳು. ಆದರೆ ಆಗ ಅವಳು ಯಾವ ದೇವ ದೇವತೆಗೂ ಹರಕೆ ಹೊತ್ತಿದ್ದಿಲ್ಲ. ವೀರೋಳ ಸೊಂಟದಲ್ಲಿ ಪೂರಾ ಮೂರು ದಿನ ನೋವು ನಿಲ್ಲದಿರುವಾಗ ಮತ್ತು ಒಂದು ದಿನ ರಕ್ತದ ಒಂದು ಕಲೆಯೂ ತಾಗಿದಾಗ ನಿಹಾಲಕೌರಳು ಆ ದಿವಸ ತನ್ನ ಬಾಳಿನಲ್ಲಿಯೇ ಮೊದಲು ಸಲ ಹರಕೆ ಹೊತ್ತಳು.

ಇದು ಚೊಚ್ಚಿಲು ಸಂಭ್ರಮದ ಬಯಕೆ ಉಪಚಾರಗಳ ಸಮಯ. ವೀರೋ ಬಯಸಿದರೆ ದೂರ ದೇಶಗಳ ವಸ್ತುಗಳ ಬೇಡಿಕೆ ಮಾಡಬಹುದಿತ್ತು. ಸರದಾರ ಈಗ ಅವಳ ಮೋರೆಯ ಕಡೆಗೇ ನೋಡುತ್ತ ಇರುತ್ತಿದ್ದ; ಮತ್ತು ಅವಳ ಬಾಯಿಯಿಂದ ಹೊರಡುವ ಮಾತನ್ನೇ ಕಾಯುತ್ತಿದ್ದ. ಆದರೆ ನಿಹಾಲಕೌರಳಿಗೆ ಗೊತ್ತು, ಇತ್ತೀಚೆಗೆ ವೀರೋ ಇಷ್ಟು ನಾಚುಬುರುಕಳಾಗಿದ್ದಳು—ಉಪ್ಪಿನಕಾಯಿಯ ಹೋಳಿಗಾಗಿಯೂ ಅವಳು ಎರಡು ಸಲ ನಾಚುತ್ತ ನಿಹಾಲಕೌರಳ ಮುಖ ನೋಡುತ್ತಿದ್ದಳು. ಆದ್ದರಿಂದ ನಿಹಾಲಕೌರ ತಾನೇ ವೀರೋಳ ಬಯಕೆ ಬೇಡಿಕೆಗಳತ್ತ ಧ್ಯಾನವಿಟ್ಟು ಕೊಳ್ಳುತ್ತಿದ್ದಳು. ಈ ನಡುವೆ ವೀರೋ ಬರೇ ಒಂದು ಮಾತು ಜೋರಾಗಿ ಹೇಳಿದ್ದಳು—ಅದೆಂದರೆ, ಅಂಗಳದಲ್ಲಿ ಹಗ್ಗದಿಂದ ತೂಗು ಹಾಕಿದ 'ಶಲಜಮ' ಗಡ್ಡೆಗಳ ಸರಗಳನ್ನು ಇಳಿಸಿ ದೂರ ತೆಗೆದಿಡಬೇಕು. "ಅವನ್ನು ಕಂಡರೆ ನನ್ನ ಜೀವಕ್ಕೆ ಏನೇನೋ ಆಗುತ್ತದೆ. ಆ ಒಣಗಿದ 'ಶಲಜಮ' ಗಡ್ಡೆ ಯಾರದೋ ಹಸಿಹಸಿ ಮಾಂಸದ ಮುದ್ದೆಯಂತೆ ಅನಿಸುತ್ತದೆ."—ಅಂದಿದ್ದಳು ವೀರೋ. ಒಣ 'ಶಲಜಮ' ಗಡ್ಡೆ ನೋಡಿದರೆ ಅವಳಿಗೆ ವಾಕರಿಕೆ ಬರುತ್ತಿತ್ತು.

ಆ ಮೇಲೆ ವೀರೋಳ ಮನಸ್ಸಿಗೆ ಏನು ಬಂತೋ ಗೊತ್ತಿಲ್ಲ. ಅವಳಿಗೆ ಒಂಬತ್ತನೆಯ ತಿಂಗಳು ತಾಗಿದೊಡನೆ ಅವಳು ತನ್ನ ತವರಿಗೆ ಹೋಗಿಯೇ ಕೂಸು ಹಡೆಯುವೆನೆಂದು ಹಟ ಹಿಡಿದುಬಿಟ್ಟಳು. ಸರದಾರನು ಅವಳ ಈ ಹಟಕ್ಕೆ ಒಪ್ಪಿದ್ದಿದ್ದಿಲ್ಲ. ನಿಹಾಲಕೌರ ವೀರೋಳ ಮನ ಒಲಿಸಲು ಬೇಡಿಕೊಳ್ಳುತ್ತಿದ್ದಳು. ಆದರೆ ವೀರೋ ಒಂದೇ ಹಟ ಹಿಡಿದಿದ್ದಳು—ಅವಳ ಊರಿನಲ್ಲಿ ಒಬ್ಬ ಮುದಿ ದಾಯಿ ದೊಡ್ಡ ಜಾಣೆ. ಅವಳಿಗೆ ಆ ದಾಯಿಯೊಬ್ಬಳ ಮೇಲೆಯೇ ವಿಶ್ವಾಸ—ಬೇರೆ ಯಾರ ಮೇಲೂ ಇಲ್ಲ. ಅವಳಿಗೆ ಭರವಸೆ ಇದೆ—ಇಲ್ಲೇ ಇದ್ದರೆ ಅವಳು ಈ ನಗರದ ಡಾಕ್ಟರಿಣಿಯರ ಕೈಯಲ್ಲಿ ಖಂಡಿತ ಸಾಯುವಳು.

"ಈ ಹೆದರಿಕೆ ಮಹಾಹಾಳು"—ಡಾಕ್ಟರರೂ ಸರದಾರರಿಗೆ ಸಲಹೆ ಇತ್ತರು.

ಆದರೆ ಸರದಾರನ ಎದೆಯಲ್ಲಿ ಇನ್ನೊಂದೇ ಹೆದರಿಕೆ ಇತ್ತು. ಅವನು ನಿಹಾಲಕೌರಳಿಗೆ ಒಂದು ಬದಿಗೆ ಒಯ್ದು ಹೇಳಿದ, "ನನಗೆ ಇದೇ ಭಯ—ಅಲ್ಲಿ ಹೋಗಿ ಇವಳಿಗೆ ಹುಡುಗಿ ಹುಟ್ಟಿದರೆ ಇವಳ ತಂದೆ ತಾಯಿ ಯಾರದೋ ಹುಡುಗನನ್ನು ಆ ಹುಡುಗಿಗೆ ಅದಲು ಬದಲು ಮಾಡಬಹುದು. ನಾನು ಹಿಂದೆಲ್ಲ ಈ ಬಗೆಯ ಮಾತು ಕೇಳಿದ್ದೇನೆ ಮಂದಿಗೆ ಮೋಹ ಲೋಭ ಉಂಟಾಗುತ್ತದೆ. ಹುಡುಗನಾದರೆ ಬೆಳೆದು ದೊಡ್ಡವನಾಗಿ ಆಸ್ತಿಗೆಲ್ಲ ವಾರಸುದಾರನಾಗಬಲ್ಲ. . . ."

ಹಾಗಾದರೆ ಈ ಮಾತಿಗೆ ಒಂದೇ ಉಪಾಯವಿದೆ "ನಾನೇ ಇವಳ ಸಂಗಡ ಹೋಗುವೆ. ನಾನು ಅಲ್ಲಿರುವಾಗ ಅವರಾರೂ ಯಾವ ಗಡಿಬಿಡಿಯನ್ನೂ ಮಾಡ ಲಾರರು." ನಿಹಾಲಕೌರಳು ವಿಚಾರ ಮಾಡಿಮಾಡಿ ಅಂದಳು.

ಸರದಾರ ಒಪ್ಪಿಕೊಂಡ. ವೀರೋಳು ಯಾವ ಅಡ್ಡಿ ಮಾಡಲಿಲ್ಲ. ನಿಹಾಲಕೌರಳು ಆರೈಕೆ-ಓಡಾಟಕ್ಕಾಗಿ ಮನೆಯ ಹೊಲತಿಯನ್ನೂ ಸಂಗಡ ಕರೆದುಕೊಂಡಳು. ಮತ್ತು ವೀರೋಳೊಡನೆ ಅವಳ ತವರಿಗೆ ಹೊರಟುಹೋದಳು.

ವೀರೋಳ ಹೆರಿಗೆ ಕಷ್ಟದ್ದಾಗಲಿಲ್ಲ. ಅವಳು ತುಂಬ ಪ್ರಾಯದವಳು. ಒಳ್ಳೇ ಆರೋಗ್ಯವಂತಳೂ ಇದ್ದಳು. ಅವಳ ತಾಯಿಯೂ ಅತ್ತಿಗೆಯರೂ ಅವಳ ತಮಾಷೆ ಮಾಡುತ್ತಿದ್ದರು, "ಇವಳಂತೂ ಸುಮ್ಮನೆ ಹೆದರುತ್ತಾಳೆ, ಮಗು ಹೆರುವದೇನು ಕಷ್ಟ? ಒಂದು ಕೂಗುಕೂಗು, ಹುಡುಗ ಹುಟ್ಟುತ್ತಾನೆ ನೋಡು!"

ನಿಹಾಲಕೌರಳು ವೀರೋಳ ತವರಿನವರ ಮೇಲೆ ಯಾವ ಹೊರೆಯನ್ನೂ ಬೀಳಗೊಡಲಿಲ್ಲ. ಬಿಚ್ಚುಗೈಯಿಂದ ವೆಚ್ಚ ಮಾಡುತ್ತಿದ್ದಳು. ಎಲ್ಲರೂ ಅವಳಿಗೆ 'ಸರದಾರಿಣೀ, ಸರದಾರಿಣೀ' ಎಂದು ಕರೆದು ಕರೆದು ದಣಿಯುತ್ತಿದ್ದಿಲ್ಲ. ನಿಹಾಲಕೌರ ನಕ್ಕು ಅನ್ನುತ್ತಿದ್ದಳು, "ಒಂದು ಕೂಗು ಕೂಗು, ಹುಡುಗ ಹುಟ್ಟುತ್ತಾನೆ. ಆದರೆ ಮಗಳು ಹುಟ್ಟುವದಿದ್ದರೆ . . . ?"

ವೀರೋಳ ಅತ್ತಿಗೆ ಕಿಲಿಕಿಲಿ ನಕ್ಕುಬಿದ್ದಳು, "ಎರಡು ಕೂಗು ಕೂಗಿದರೆ ಹುಡುಗಿ ಹುಟ್ಟುತ್ತಾಳೆ."

"ಹುಡುಗಿಯ ಬಾರಿಗೆ ಎರಡು ಕೂಗೇ?" ನಿಹಾಲಕೌರ ನಗುತ್ತ ಕೇಳಿದಳು.

"ಒಂದು ಕೂಗು ಬೇನೆಯದು, ಮತ್ತೊಂದು ಕೂಗು ದುಃಖದ್ದು"—ಅನ್ನುತ್ತಿದ್ದಳು ವೀರೋಳ ಅತ್ತಿಗೆ, "ಹುಡುಗರದೇ ದೊಡ್ಡಖುಷಿ, ಹುಡುಗಿಯದೇನು ಬಂತು?"

ನಿಹಾಲಕೌರಳ ಮನಸ್ಸಿನಲ್ಲಿ ಒಮ್ಮೆ ಜೋರಾಗಿ ನೋವು ಎದ್ದಿತು. 'ನಾನಂತೂ ಬಾಳಿನಲ್ಲಿ ಒಂದು ಕೂಗು ಕೂಗಿ ನೋಡಿಲ್ಲ. ಎರಡು ಕೂಗೂ. . ." ಆದರೆ ಅವಳು ತನ್ನ ನಗುವ ತುಟಿಗಳಿಂದ ಆ ನೋವನ್ನು ಈ ರೀತಿ ನುಂಗಿಬಿಟ್ಟಳು. ಆ ನೋವಿಗೂ ಅವಳ ಮೋರೆಯತ್ತ ನೋಡಿ ನಾಚಿಕೆ ಉಂಟಾಯಿತು.

ಯಾವ ರಾತ್ರಿಗೆ ವೀರೋಳಿಗೆ ಹೊಟ್ಟೆಬೇನೆ ಆಗಲು ಸುರುವಾಯಿತೋ ಅವಳ ಹಲ್ಲಡಿಗೆ ಕಟ್ಟಿದ ಹರಯದ ತುಟಿಗಳು ಆ ಬೇನೆಯ ಶೂಲಿಗಳನ್ನು ಈ ರೀತಿ ಸಹನ ಮಾಡಿಕೊಂಡವು. ಬೇರೆ ಯಾರ ಕಿವಿಗೂ ಆ ಸದ್ದು ಕೂಡ ಮುಟ್ಟಲಿಲ್ಲ. ಕೇವಲ ಒಂದು ಸಲ ಅವಳ ಚೀರು ಕೇಳಿಬಂತು. ಮತ್ತು ದಾಯಿಯು ವೀರೋಳ ತಲೆಯತ್ತ ಕುಳಿತಿದ್ದ ನಿಹಾಲಕೌರಳ ಕಡೆಗೆ ನೋಡಿ ಅಂದಳು, "ಸರದಾರಿಣೀ, ಶುಭವಾಗಲಿ, ಬಾ ನಿನ್ನ ಜೋಳಿಗೆಯನ್ನು ಗಂಡುಮಗುವಿನಿಂದ ತುಂಬುತ್ತೇನೆ."

ಶುಭವಾದ್ಯಗಳೊಂದಿಗೆ ನಿಹಾಲಕೌರಳು ಗಂಡುಮಗುವನ್ನು ಜೋಳಿಗೆಯಲ್ಲಿ ಹಾಕಿಕೊಂಡಳು. ಆದರೆ ನಸುಕಿಗೆ ಅವಳು ಸರದಾರನಿಗೆ ತಾರು ಕಳುಹಿಸಲಿಕ್ಕೆ ಹೊರಟಾಗ ವೀರೋ ನಿಹಾಲಕೌರಳನ್ನು ತನ್ನ ಹತ್ತಿರ ಕರೆದು ಅವಳ ಪಾದಗಳ ಮೇಲೆ ತನ್ನ ಎರಡೂ ಕೈಗಳನ್ನು ಇಟ್ಟು ಅಂದಳು, "ಸರದಾರಿಣೀ, ನಾನು ಲೋಕ-ಪ್ರಪಂಚದ ಇದುರು ಸುಳ್ಳುಹೇಳಬಲ್ಲೆ. ಆದರೆ ನಿನ್ನ ಇದುರಿಗೆ ಸುಳ್ಳಾಡಲಾರೆ. ಈ ಮಗು ನಿನ್ನ ಜೋಳಿಗೆಗೆ ಯೋಗ್ಯನಲ್ಲ."

"ಇದೇನು ಹೇಳುತ್ತಿರುವಿ ವೀರೋಃ . . . ?"

"ನಾನು ಮಾಡಿದ್ದು ತಮಾಷೆ ಎಂದು. ಆದರೆ ತಮಾಷೆಯ ದುರ್ಗತಿ ಬಹುಶಃ ಇದೇ ರೀತಿ ಆಗುತ್ತದೆ. ಆದರೆ ಸತ್ಯಹೇಳಲೇ? ನನಗೆ ನನ್ನ ಬಗ್ಗೆ ಯಾವ ಪಶ್ಚಾತ್ತಾಪವೂ ಇಲ್ಲ. ಏನಾದರೂ ಪಶ್ಚಾತ್ತಾಪವಿದ್ದರೆ ಅದು ನಿನ್ನಬಗ್ಗೆ . . ."

"ವೀ—ರೋ . . ."

"ನಿನಗೆ ನೆನಪಿದೆ. ಹಿಂದೆ ನಾನು ತವರುಮನೆಗೆ ಒಮ್ಮೆ ಬಂದುಹೋಗಿದ್ದೆ, ಕಳೆದ ವರ್ಷ . . . ನಿಮ್ಮ ಮನೆಯ ಮುನ್ಶಿ ನನ್ನ ಸಂಗಡ ಬಂದಿದ್ದ. ನನಗೆ ನನ್ನ ತವರಿನವರೊಂದಿಗೆ ಭೆಟ್ಟಿಮಾಡಿಸಲಿಕ್ಕೆ . . . ಇಲ್ಲಿ ಇಡೀ ಊರಲ್ಲಿ ಸುದ್ದಿ ಹಬ್ಬಿತ್ತು. ನನ್ನ ತಂದೆ-ತಾಯಿ ಹಣ ತೆಗೆದುಕೊಂಡು ಒಬ್ಬ ಮುದಿ ಸರದಾರನಿಗೆ ಕೊಟ್ಟು ನನ್ನ ಮದುವೆಮಾಡಿದರೆಂದು . . . ಸರದಾರ ಎಂದೂ ಈ ಊರಿಗೆ ಬಂದಿದ್ದಿಲ್ಲ. ನಮ್ಮಪ್ಪನೇ ನನ್ನನ್ನು ಶಹರಕ್ಕೆ ಒಯ್ದು ಅಲ್ಲಿ ಗುರುದ್ವಾರದಲ್ಲಿ 'ಲಾವ' ಓದಿಸಿ ನಿಮ್ಮ ಮನೆಯಲ್ಲಿ ನನ್ನ ಬಿಟ್ಟು ಬಂದಿದ್ದ—ನಾನು ಊರಿಗೆ ಮರಳಿದಾಗ ಪ್ರತಿಯೊಬ್ಬ ಹೆಂಗಸೂ ನನಗೆ ಕೇಳುವವಳೇ—'ನಿನ್ನ ಸರದಾರ ಎಷ್ಟು ಮುದುಕ?'—ನನಗೂ ಏನು ಹೊಳೆಯಿತೋ. ಆ ಪೀಡೆ ತಪ್ಪಿಸಿಕೊಳ್ಳಲಿಕ್ಕೆ ಹೇಳಿಬಿಟ್ಟೆ—ನನ್ನ ಮದುವೆ ಮುದುಕನೊಂದಿಗೆ ಆಗಿಯೇ ಇಲ್ಲ. ನಿಮ್ಮ ಮುನ್ಶಿ ಒಳ್ಳೇ ತರುಣನಿದ್ದ. ಸುರೂಪಿಯೂ ಇದ್ದ. ನಾನು ಆ ಹೆಂಗಸರಿಗೆ ಮುನ್ಶಿಯನ್ನು ತೋರಿಸಿ ಅಂದೆ, 'ಅವರೇ ನಮ್ಮ ಮನೆಯವರು!' ಎಲ್ಲ ಹೆಂಗಸರೂ ನನ್ನ ಭಾಗ್ಯಕ್ಕೆ ಬೆರಗಾದವರೇ. ನಾನು ಈ ಸಂಗತಿಯನ್ನು ಮುನ್ಶಿಗೆ ತಿಳಿಸಿದೆ. ಅವನೂ ನೋಗುಮಾಡಿದನು. ಮತ್ತು ನನ್ನ ಗೆಳತಿಯರು ಅವನ ಕಡೆಯಿಂದ ಬೆಳ್ಳಿಯ ಉಂಗುರಗಳನ್ನು ಬೇಡಿದರು. (ಪಂಜಾಬದ ಹಳ್ಳಿಯ ಹುಡುಗೆಯರು

ತಮ್ಮ ಅಕ್ಕನ ಗಂಡನಿಂದ ಆತ ಮೊದಲು ಭೆಟ್ಟಿಗೆ ಬಂದಾಗ ಈ ಉಡುಗೊರೆಯನ್ನು ಬೇಡುವದು ವಾಡಿಕೆ.) ಅವನು ಸೊನಗಾರನಿಂದ ಬೆಳ್ಳಿಯ ಉಂಗುರಗಳನ್ನು ಕೊಂಡು ಅವರಿಗೆಲ್ಲ ಹಂಚಿದನು. ಐದಾರು ದಿನ ನಾನು ಇಲ್ಲಿ ಉಳಿದೆ. ದಿನಾಲು ನಗೆ-ಗೇಲಿ-ತಮಾಷೆಮಾಡುತ್ತ ಮಾಡುತ್ತ ನನಗೂ ಅನಿಸಹತ್ತಿತು—ನನ್ನ ಮದುವೆ ಅವನೊಂದಿಗೇ ಆಗಿದೆ, ಇನ್ನಾರೊಂದಿಗೂ ಅಲ್ಲ—"

"ನಮ್ಮ ಮುನ್ಶಿ ಮದನಸಿಂಹ . . ."

"ನಾನು ಇನ್ನು ತಿರುಗಿ ಸರದಾರನ ಮನೆಗೆ ಹೋಗಲಾರೆ. ಈ ಹುಡುಗನನ್ನು ಅಲ್ಲಿ ಒಯ್ಯುವದಿಲ್ಲ. ಇದಕ್ಕಾಗಿಯೇ ನಾನು ಹಟ ಹಿಡಿದು ಇಲ್ಲಿಗೆ ಬಂದಿದ್ದು. ನಾನು ಮಾಡಿದ್ದು ನನ್ನ ಮುಂದೆ ಬಂದುಬಿಟ್ಟಿದೆ. ನಾನು ನಿನ್ನಿಂದ ಇನ್ನೇನೂ ಬೇಡುವದಿಲ್ಲ, ಸರದಾರಿಣೀ, ಬರೇ ಒಂದು ಮಾತು, ಬೇಡುತ್ತೇನೆ. ಸರದಾರನಿಗೆ ಈ ಮುನ್ಶಿಯ ಹೆಸರನ್ನು ತಿಳಿಸಬಾರದು. ಇದು ಗೊತ್ತಾದರೆ ಆತ ಆ ಮುನ್ಶಿಯನ್ನು ಕೆಲಸದಿಂದ ಕಿತ್ತುಹಾಕಬಹುದು."

"ಆದರೆ ಮದನಸಿಂಹ ಮದುವೆ ಆದವ. ಅವನಿಗೆ ಮನೆಯಲ್ಲಿ ಇಬ್ಬರು ಮಕ್ಕಳಿದ್ದಾರೆ."

"ಆದ್ದರಿಂದಲೇ ಆತ ಹೆದರುತ್ತಾನೆ. ಸರದಾರನಿಗೆ ಗೊತ್ತಾದರೆ ತನ್ನ ಕೆಲಸವೇ ಕಳೆದುಹೋಗುವದೆಂದು. ಅವನು ನನ್ನನ್ನು ತನ್ನ ಮನೆಯಲ್ಲಿ ಒಯ್ದು ಸ್ಥಾಪಿಸುವದು ಅಷ್ಟೇ ಇದೆ—ನಾನು ಅವನ ನೌಕರಿ ಬಿಡಿಸಲಿಕ್ಕೆ. ಅವನು ಎಲ್ಲೇ ಇರಲಿ ಸುಖವಾಗಿ ಇರಲಿ—ಅದೇನು ದೊಡ್ಡ ಮಾತಲ್ಲ; ನಾನು ಒಮ್ಮೆಯಾದರೂ ನೋಡಿದಂತೆ ಆಯಿತು. ಒಳ್ಳೇ ಪ್ರಾಯದ ಗಂಡು ಹೇಗಿರುತ್ತದೆ ಎಂದು . . ."

ನಿಹಾಲಕೌರಳು ಗಾಬರಿಯಿಂದ ಕಣ್ಣುಮುಚ್ಚಿಕೊಂಡಳು; ಮತ್ತು ಅವಳು ತಿರುಗಿ ಕಣ್ಣುತೆರೆದಾಗ ಕಂಡಳು—ಜೋಳಿಗೆಯಲ್ಲಿ ಬಿದ್ದ ವೀರೋಳ ಮಗು ಮೊಲೆಯುಣ್ಣಲಿಕ್ಕೆ ಅವಳ ಎದೆಗೆ ಮುಖ ತಿವಿದುಕೊಳ್ಳುತ್ತಿದ್ದ.

ನಿಹಾಲಕೌರಳಿಗೆ ಅನಿಸಿತು—ಸರದಾರನ ಯಾವ ವೇದನೆಯ ಉದ್ಗಾರವನ್ನು ಅವಳು ತನ್ನ ಹೊಣೆಯಾಗಿ ಹೊತ್ತುಕೊಂಡಿದ್ದಳೋ ಮತ್ತು ಯಾವದನ್ನು ವೀರೋ ಅವಳಿಂದ ವಹಿಸಿಕೊಂಡು ತನ್ನ ಎದೆಯಲ್ಲಿ ಹಾಕಿಕೊಂಡಿದ್ದಳೋ ಈ ಮಗು ಅದೇ ಉದ್ಗಾರವನ್ನು ವೀರೋಳ ಎದೆಯಿಂದ ಕುಡಿಯುವ ಪ್ರಯತ್ನಮಾಡುತ್ತಿತ್ತು.

# ಬೆಳಗಾಗುವತನಕ

ರಾತ್ರಿ ಬಹಳವಾಯಿತು. ಚನ್ನನ ಜಾಟನು ಕಲ್ಲು ಕಟ್ಟಿದ ಬಾವಿಯ ಬಳಿಯ ಗದ್ದೆಗಳಲ್ಲಿ ನೇಗಿಲು ಹೂಡಿ ದಣಿದು ಸುಸ್ತಾಗಿ ಮನೆಗೆ ಮರಳಿದನು. ಆಷಾಢದ ಮೊದಲ ಮಳೆಯು—ಮುಂಗಾರ ಬೆಳೆಯ ಬಿತ್ತನೆಗೆ ತ್ವರೆಯನ್ನು ತಂದಂತಿತ್ತು. ಈ ಸಮಯ ಹವೆಯಲ್ಲಿ ಕೇವು ಹಬ್ಬಿತ್ತು. ಮತ್ತೆ ಜಡಿಮಳೆ ಎಂದು ಸುರುವಾಗುವದೋ ಅಥವಾ ಹೊಳವಾಗಿ ಉದ್ದ ಒಣಹವೆ ಬಿದ್ದು ಪೈರೆಲ್ಲ ಹಾಳು ಬೀಳಬಹುದೋ—ಗೊತ್ತಾಗುತ್ತಿದ್ದಿಲ್ಲ.

ಎತ್ತುಗಳಿಗೆ ಮೇವು ಹಾಕಿ ಆತ ಕೈಕಾಲು ತೊಳೆದುಕೊಂಡ. ಮೆತ್ತಿನ ಮೇಲೆ ಹೋಗಿ ರೊಟ್ಟಿ ತಿಂದ ಮತ್ತು ಕಣ್ಣು ಮುಚ್ಚಲಿಕ್ಕೆಂದು ಹೊರಸಿನ ಮೇಲೆ ಹೋಗಿ ಅಡ್ಡಾದನು. ಆತ ನಸುಕಿಗೆ ಎದ್ದು ಬಟಾಟೆಯ ಅಗೆಗಳಿಗೆ ನೀರು ಸಿಂಪಡಿಸುವದಿತ್ತು. ಮತ್ತೆ ಸಂಜೆಗೆ ಬಾವಿಯಬಳಿಯ ಗದ್ದೆಗಳಲ್ಲಿ ಜವೆಗೋದಿಯ ಬಿತ್ತನೆ ಮಾಡುವದಿತ್ತು.

ಹಾಯಾಗಿ ಕಾಲುಚಾಚಿ ಆಕಾಶದಲ್ಲಿ ಅರಳಿದ ತಾರೆಗಳ ಕಡೆಗೆ ನೋಡುತ್ತ ನೋಡುತ್ತ ನಿದ್ದೆಯ ತೂಕಡಿಕೆಯಲ್ಲಿ ಅವನ ಕಣ್ಣು ತೇಲತೊಡಗಿದ್ದವು. ಅಷ್ಟರಲ್ಲಿ ಪಕ್ಕದ ಮೆತ್ತಿನ ಮೇಲೆ ತನ್ನ ಹೊರಸು ಹಾಸುತ್ತಿದ್ದ ಘುದ್ದಾ ಅಂದನು: "ನಂಗೆನಿಸುತ್ತದೆ, ನೀನು ಬಾವಿಯ ಬಳಿಯ ಎಲ್ಲ ಗದ್ದೆ ಹೂಡಿ ಬಂದಿದ್ದಿ. ಚನ್ನನಾ ನೀನು ಮಾತಾಡುವುದೇ ಇಲ್ಲ, ದಣಿದಿದ್ದೀ ಅಲ್ವೇ?"

ಚನ್ನನ ಹೊರಸಿನ ಮೇಲೆ ಬಿದ್ದಲ್ಲಿಂದಲೇ ಅಂದ, "ಓ, ಇನ್ನೂ ಏಕೆ ಈಗ ಹಗೇತನ?—ಸ್ವಲ್ಪ ಜೋರಾಗಿಯೇ ಉತ್ತು ಕೆಲಸ ಮುಗಿದು ಹೋಗಲಿ ಎಂದರೆ ಒಂದು ಎತ್ತೇ ನಡೆಯುವದಿಲ್ಲ, ಸಾಯಲಿಕ್ಕೆ!"

"ಯಾವದು? ಮೀಸಾ?"

"ಅಲ್ಲ, ಇನ್ನೊಂದು ಲಾಖಾ. ಸರಿಯಾಗಿ ಹೆಜ್ಜೆನೇ ಇಡುವದಿಲ್ಲ. ನಿಂತು ಬಿಡುತ್ತದೆ. ಆದ್ದರಿಂದಲೇ ಇಷ್ಟು ತಡವಾಯ್ತು.

"ಅಣ್ಣಾ, ಮುಖ್ಯಮಾತು ಮೇವಿನದು," ಘುದ್ದಾ ಸಿಜವಾದ ಮಾತನ್ನೇ ಆಡಿದನು.

"ಈಗ ಮೇವು ತಿನಿಸುತ್ತಲೇ ಇದ್ದೇವೆ—ಶಕ್ತಿ ಇದ್ದಷ್ಟು". ಚನ್ನನನ ದನಿಯಲ್ಲಿ ಅಸಹಾಯತೆ ಇತ್ತು.

ತಾರೆಗಳು ಮೇಳವಿಸಿ ತುಂಬಿದ ನೀಲ ಮೆತ್ತಿನ ಕಡೆಗೆ ನೋಡುತ್ತ ನೋಡುತ್ತ ಚನ್ನನನ ಕಣ್ಣುಗಳಲ್ಲಿ ನಿದ್ದೆ ಕವಿಯಿತು. ಒಂದೇ ಬೀಸಿಗೆ ನಿದ್ದೆ ಮಂಕುಬೂದಿ

ಬೆಲ್ಲಿತು. ಅವನ ಕಣ್ಣಲ್ಲಿ ತಾರೆಗಳು ಮಣ್ಣು ಕಣವಾದವು. ಕಲ್ಲು ಕಟ್ಟಿದ ಆ ಬಾವಿಯು ಭೂಮಿಯಲ್ಲಿ ನಳನಳಿಸುವ ಅಗೇಡಿಗಳು ಅವನ ಕನಸಿನಲ್ಲಿ ಹಬ್ಬಿ ಬೆಳೆಯಹತ್ತಿದವು.

ಊರಿನ ಇನ್ನೊಂದು ಬದಿಗೆ ಬೊಗಳುತ್ತಿರುವ ನಾಯಿಗಳ ಸದ್ದು ಮಂದವಾಗುತ್ತ ಅವನ ಪ್ರಜ್ಞೆಯಿಂದ ಹೊರಗೆ ಸರಿಯಿತು.

ಲೋಟಾದಲ್ಲಿ ಹಾಲು ತೆಗೆದುಕೊಂಡು ಬಚನೋ ಜನ್ನನನ ಹೊರಸಿನ ಹತ್ತಿರ ಬಂದಳು. "ಇಕೋ, ಹಿಡಿ, ಹಾಲ ಗುಟುಕನ್ನು ಕುಡಿದುಬಿಡು."

ಜನ್ನನನಿಗೆ ನಿದ್ದೆ ಹತ್ತುಬಿಟ್ಟಿತ್ತು.

"ನಿದ್ದೆಹೋಗಿಯೂ ಬಿಟ್ಟೆ . . . ಸೀಬೋನ ಬಾಪೂ?" ಆಕೆ ಜನ್ನನನ ಹೆಗಲು ಅಲುಗಾಡಿಸುತ್ತ ಅಂದಳು.

"ಹಾಂ, ಹಾಂ..." ಜನ್ನನ ತಬ್ಬಿಬ್ಬಾಗಿ ಅಂದನು.

"ಇಕೋ, ಬಿಸಿ ಬಿಸಿ ಹಾಲು ಕುಡಕೊ."

ಜನ್ನನ ಹೊರಸಿನಲ್ಲಿ ಎದ್ದು ಕುಳಿತ ಮತ್ತು ತೂಕಡಿಸುತ್ತ ಹಾಲಿನ ಲೋಟ ಹಿಡಿದು ಕುಡಿಯಹತ್ತಿದ. ಅತ್ತ ಘುದ್ದಾನಿಗೂ ನಿದ್ದೆ ಹತ್ತಿರಬೇಕು. ಬಚನೋ ಹೊರಸಿನ ಕಾಲಕಡೆಯ ಪಟ್ಟಿಯ ಮೇಲೆ ಕೂತಳು. ವಿಪರೀತ ಸೆಕೆ ಕವಿದಿತ್ತು. ಅದೇ ಸಮಯ ನೀರಿನಿಂದ ಒದ್ದೆಯಾದ ಒಂದು ಹವೆಯ ಸೆಳಕು ಬಂದಿತು. ದೂರ ಗುಡ್ಡದ ಕಣಿವೆಯಲ್ಲಿ ಕಪ್ಪು ಮೋಡಗಳು ಕವಿದು ಬರುತ್ತಿದ್ದವು. ಅದರೊಳಗಿಂದ ಒಮ್ಮೊಮ್ಮೆ ಮಿಂಚು ಕಣ್ಣು ಮಿಟಕಿಸುತ್ತಿತ್ತು. ಬಚನೋ ಮೆಲ್ಲಗೆ ಅಂದಳು, "ಬಹುತೇಕ ಮೋಡಗಳು ಇಂದೂ ನಮ್ಮ ಹಸುಗಳನ್ನೆಲ್ಲ ಕೆಳಗೆ ಇಳಿಸಿಯೇ ಬಿಡುವವು!"

ಬರಿದಾದ ಲೋಟಾ ಬಚನೋಳ ಕಡೆಗೆ ಚಾಚುತ್ತ ಅವನು ಹೂಂಗುಟ್ಟನು, "ಪೂರಾ ನಿದ್ದೆ ಮಾಡಲಿಕ್ಕೂ ಹಣೆಯಲ್ಲಿ ಎಲ್ಲಿ ಬರೆದಿದೆ?—ಎರಡು ರಾತ್ರಿ ಆಯಿತು ಹೀಗೆಯೇ ಕಳೆದದ್ದು."

ನಿದ್ದೆಯಲ್ಲಿ ಮೈಮರೆತ ಜನ್ನನ ತಿರುಗಿ ಹೊರಸಿನಲ್ಲಿ ರಾಶಿಯಾಗಿ ಬಿದ್ದ. ಆತ ಕಾಲ ಕಡೆಗೆ ಬಿದ್ದ ಕೌದಿಯನ್ನೆಳೆದು ಕಾಲುಗಳಮೇಲೆ ಹಾಕಿಕೊಂಡನು. ಬಚನೋಳ ಹೊರಸಿನ ಮೇಲೆ ಚಿಕ್ಕ ಹುಡುಗಿಯು ಕಳವಳಿಸುತ್ತಿದ್ದಳು. ಬಚನೋ ಎದ್ದು ಅವಳ ಹತ್ತಿರ ಹೋಗಿ ಅಡ್ಡಾದಳು. ಮತ್ತೆ ಸೆಕೆ ಹಬ್ಬಿತು. ಅರ್ಧಪ್ರಹರವೂ ಆಗಿಲ್ಲ. ಜನ್ನನನ ಮೈಯಲ್ಲಿ ಒಂದು ಕುಸುವು ಚುಚ್ಚಿತು, ಆತ ಮಗ್ಗಲು ಮುರಿದನು. ಮತ್ತೆ ಒಂದು ಕುಸುವು ಚುಚ್ಚಿತು. ಮತ್ತು ಅವನ ನಿದ್ದೆ ಹರಿಯಹತ್ತಿತು.

"ಹನಿ ಬೀಳತೇಲುಂಟು—ಒಂದೊಂದು" ಅವನ ಕಿವಿಗೆ ದನಿ ಬಿದ್ದಿತು. ಘುದ್ದಾ ತನ್ನ ಹೊರಸಿನ ಮೇಲೆ ಸರಿದಾಡಿದಂತೆ.

“ಸೀದೋನ ಬಾಪ್ಪೂ” ಬಚನ್ನೋ ಗಜರಿ ಹೇಳಿದಳು, “ಹೊರಸು ಕೆಳಗಿಳಿಸ ಬೇಕಾದೀತು!”

“ಲೇ ನಾ ಹೇಳ್ತೀನೆ—ಎಲ್ಲರೂ ಸುಮ್ಮನೆ ಬಿದ್ದಿರಿ. ಪ್ರಳಯವೇನೂ ಬಂದಿಲ್ಲ!” ಚನ್ನನ ಕೌದಿಯನ್ನು ಇನ್ನೂ ಮೇಲ್ವರೆಗೆ ಎಳೆದುಕೊಂಡು ಚೆನ್ನಾಗಿ ಹೊದ್ದುಕೊಂಡ.

“ಮತ್ತೆ ಗಲಾಟೆ ಎದ್ದು ಬಿಟ್ಟೀತು” ಬಚಸೋ ಚಿಂತೆಯಿಂದ ಹೆದರಿ ಹೋಗಿದ್ದಳು.

“ಏಳೂದಿಲ್ಲ ಬಿಡೂದಿಲ್ಲ—ನೀನು ಬಿದ್ದಿರು.”

ಮಾತು ಚನ್ನನನ ಬಾಯಿಯೊಳಗೇ ಇತ್ತು. ಒಮ್ಮೆಲೇ ಮಳೆಯ ದೊಡ್ಡ ದೊಡ್ಡ ಹನಿಗಳು ದಾಳಿ ಇಕ್ಕಿದವು. ಆಚೆ ಈಚೆಯ ಎಲ್ಲ ಮೆತ್ತುಗಳಲ್ಲಿಯೂ ಗಲಾಟೆ ಎದ್ದು ಹೋಯಿತು. ಹೊರಸುಗಳಲ್ಲಿ—ತೊಟ್ಟಿಯಲ್ಲಿ—ಕೌದಿಗಳಲ್ಲಿ ಚಿಂದಿಗಳಲ್ಲಿ ಗಾಢ ನಿದ್ದೆಯಲ್ಲಿದ್ದ ಮಕ್ಕಳು ಕೋಲಾಹಲ ಮಾಡುತ್ತ ಎದ್ದವು.

ಚನ್ನನನು ಗಡಬಡಿಸಿ ಎದ್ದು ಹೊರಸಿನ ಮೇಲೆ ಬಿದ್ದಿರುವ ಕೌದಿಯನ್ನು ಸುತ್ತಿಕೊಳ್ಳಹತ್ತಿದನು. ಬಚಸೋ ತೀವ್ರ ದನಿ ಏರಿಸಿ ಅಂದಳು, “ನೀನು ಇಲ್ಲೇನು ಲೆಕ್ಕಹಾಕುತ್ತ ಇದ್ದೀ? ಇಳಿದು ಹೊರಸನ್ನು ಎತ್ತಿಕೋ. ನಾನು ಮೇಲಿನಿಂದ ಇಳಿಸುತ್ತೇನೆ.”

ಸುರಿಮಳೆಗೆ ಹೆದರಿ, ಅರೆನಿದ್ದೆಯಿಂದ ಎಚ್ಚೆತ್ತು ಮಕ್ಕಳು ಅಳತೊಡಗಿದವು.

ಓಣಿಯಲ್ಲಿ ನಿಂತು ಚನ್ನನ ಮೆತ್ತಿನ ಕಿರಿಗೋಡೆಯ ಮೇಲಿಂದ ಹೊರಸುಗಳನ್ನು ಹಾಸಿಗೆಗಳನ್ನು ಹಿಡಿದು ಇಳಿಸಿಕೊಳ್ಳಹತ್ತಿದನು. ಬಚಸೋ ಮಳೆಯ ಸೆಳಕಿನಲ್ಲಿ ಕಂಗೆಟ್ಟು ಲಗುಬಗೆಯಿಂದ ಆ ಸಾಮಾನುಗಳನ್ನು ಕೆಳಗೆ ಇಳಿಬಿಡುತ್ತಿದ್ದಳು. ಪತ್ತೆಯೇ ಆಗಲಿಲ್ಲ. ಬರಿದಾದ ಬಣ ಬಾನಿನಲ್ಲಿ ಆ ಸೊಗಸು ಎಲ್ಲಿಂದ ತುಂಬಿ ಹರಿದು ಬಂತೆಂದು! ನೋಡುತ್ತಿದ್ದಂತೆ ಅಲ್ಲಲ್ಲಿ ಹಳ್ಳಗಳು ಹರಿಯ ಹತ್ತಿದವು.

ದೀಪಹಚ್ಚಿ, ಮಳೆಯಲ್ಲಿ ಓಡಿಹೋದ ಮಕ್ಕಳನ್ನು ಚನ್ನನನು ಹೊರಸುಗಳ ಮೇಲೆ ಮಲಗಿಸಿದನು. ನಡುವುನೆ ಮತ್ತು ಕೋಣೆಗಳ ಮೆತ್ತಿಯ ಕಿಟಕಿಗಳನ್ನು ಮುಚ್ಚಿ ಬಚಸೋ ಕೆಳಗೆ ಬಂದಳು. ಅವಳ ಬಟ್ಟೆಗಳಿಂದ ನೀರು ಹನಿಸುತ್ತಿತ್ತು. ಅವಳು ತನ್ನ ಅಂಗಿಯ ಅಂಚನ್ನು ಹಿಂಡುತ್ತ ಸಿಟ್ಟಿನಿಂದ ಸಿಡಿಮಿಡಿಯಾಗಿ ಅಂದಳು, “ನಾ ಯಾವಾಗಿನಿಂದ ಹೇಳುತ್ತಿದ್ದೆ. ಮೋಡ ನೆತ್ತಿಗೆ ಬಂದು ನಿಂತಾವೆ. ಆದರೆ ಇಂವ ತಲೆನೇ ಎತ್ತಲಿಲ್ಲ...”

ಎಲ್ಲ ಮಂದಿ ನಡುಮನೆಯಲ್ಲಿ ಹೊರಸಿನ ಮೇಲೆ, ಕೌದಿಯಮೇಲೆ, ಎಲ್ಲಿ ಅನುಕೂಲವೋ ಅಲ್ಲಿ ಬಿದ್ದುಕೊಂಡರು. ಅಡ್ಡ ಮಳೆ ಹೇಗೆ ಬಂತೋ ಹಾಗೆಯೇ ಒಮ್ಮಿಂದೊಮ್ಮೆ ಹೋಯಿತು. ಚರಂಡಿಗಳ ನೀರು ಸಾವಕಾಶವಾಗುತ್ತ ತೆಳ್ಳಗಿನ

ಘಾರೆ ಆಗಿ ಹರಿದು ಹೋಯಿತು. ಒಳಗೆ ವಿಪರೀತ ಸೆಕೆ. ಕ್ರಮೇಣ ಹವೆ ತೀರ ಕಟ್ಟಿದಂತಾಯಿತು. ದೀಪದ ಜ್ಯೋತಿ ನೀಟಾಗಿ ನಿಂತಿತು. ಕಡಿದು ಕಡಿದು ಜೀವ ತಿನ್ನುವ ಸೊಳ್ಳೆ ಕಿವಿಗಳ ಹತ್ತಿರ ವೀಣೆ ಬಾರಿಸಲು ಹತ್ತಿದವು. ಮಲಗಿದ ಮಕ್ಕಳು ಬೆವರಿನಿಂದ ಮುದ್ದೆಯಾದವು. ಬಿಸಿಯ ಧುಗಿಲಿನಿಂದ ಮನೆಯು ಭಟ್ಟಿಯಂತೆ ಕಾಯಿತು. ತಾಳಲಾರದೆ ಉಸಿರುಗಟ್ಟಿ ಚನ್ನನ ಅಂದ: "ಕಿಡಕಿಗಳನ್ನಾದರೂ ತೆರೆದಿಡುವೆಯೋ ಇಲ್ಲ?"

"ಅಡ್ಡಮಳೆ ಕಟ್ಟಿ ಹೊಡೆಯಿತು.—ಇನ್ನೊಮ್ಮೆ ಮೇಲೆ ಯಾರು ಹೋಗುವರು?"

"ಒಳಗೆ ಬಂದಂತೂ ಉರಿ ಉರಿ ಆಗಿದೆ. ಸೊಳ್ಳೆಗಳು ಕಡಿದು ಕಡಿದು ತಿನ್ನುತ್ತವೆ" ಚನ್ನನ ಮೈ ತುರಿಸಿಕೊಳ್ಳುತ್ತ ಅಂದನು.

ಬೆವರಿನಿಂದ ಮುದ್ದೆ ಆದ ಕೈಲೋ ತೊಟ್ಟಿಲಲ್ಲಿ ಮುಸುಮುಸು ಬಿಕ್ಕಹತ್ತಿದಳು. ಮರುಗುತ್ತಿರುವ ಚಿಕ್ಕಹುಡುಗಿ ಒಂದು ನಿಮಿಷವೂ ಬಚನೋಳಿಂದ ದೂರವಾಗು ತ್ತಿದ್ದಿಲ್ಲ. ಬೀಸಣಿಗೆಯಿಂದ ಗಾಳಿಹಾಕಿ ಬಚನೋ ಕೂಸನ್ನು ಸುಮ್ಮನಾಗಿಸಲು ನೋಡಿದಳು. ಹಿರಿಯ ಹುಡುಗಿ ಸೀಬೋ ಒದ್ದೆಒದ್ದೆಯಾಗಿ ತನ್ನ ಮಂಚದಲ್ಲಿ ಎದ್ದು ಕುಳಿತು "ಬಾಬಾ, ನಿದ್ದೆ ಎಲ್ಲಿ ಬರುತ್ತದೆ?" ಎಂದಳು.

"ಏ ಅಮ್ಮಾ, ಈ ದೀಪ ನಂದಿಸು" ಸೀಬೋಳಿಗೆ ಕಿರಿಯ ಭಿಂದರ ಅಂದನು. ಅವನಿಗೆ ದೀಪದ ಬೆಳಕಿನಿಂದಲೂ ಸೆಕೆ ಹೊರಸೂಸುವಂತೆ ಅನಿಸುತ್ತಿತ್ತು.

ಚನ್ನನ ಎದ್ದು ಹೊರಗೆ ಓಣಿಯಲ್ಲಿ ಬಂದನು, "ಮಳೆಹನಿ ಬಂದಾದವು. ಮೋಡವೆಲ್ಲೂ ಕಂಡುಬರುವದಿಲ್ಲ."

"ಯಜಮಾನರೇ, ಈಗಿತ್ತಲಾಗಿ ಮಳೆಮೋಡ ಕಣ್ಣಮುಂದೇ ಮೋಸಮಾಡಿ ಬಿಡುತ್ತದೆ."—ಬಚನೋ ಒಳಗಿಂದ ಮಲಗಿದಲ್ಲಿಂದಲೇ ಹೇಳಿದಳು.

"ಅಲ್ಲ ಅಮ್ಮಾ, ಹೊರಸು ಹೊರಗೆ ಓಣಿಯಲ್ಲಿ ಇಡೋಣ . . ." ಸೀಬೋ ತಾಳ್ಮೆಗೆಟ್ಟು ಅಂದಳು.

"ಹಾಂ ಮುನ್ನೀ, ಓಣಿಯಲ್ಲಿ ಹಾಕುತ್ತೇವೆ." ಚನ್ನನ ಒಳಗಡೆಗೆ ಬಂದು, ಹೊರಗೆ ಹಾಸಲಿಕ್ಕೆ ಹೊರಸು ಎತ್ತಲು ತೊಡಗಿದನು.

ಬಚನೋ ಎದ್ದು ಬಾಗಿಲಿಗೆ ಬಂದಳು. ಮತ್ತು ಆಕಾಶದ ಕಡೆಗೆ ದಿಟ್ಟಿಸಿ ನೋಡಹತ್ತಿದಳು. "ಈಗ ಎಲ್ಲೂ ಕಾಣುವದಿಲ್ಲ—ತೀರ ಬರಿದಾಗಿದೆ ಆಕಾಶ."

ನೆರೆಯ ಮನೆಯಿಂದ ಕೇಸರೀ ಬಡಿಗತಿಯು ದನಿಗೈದಳು, "ಅಕ್ಕಾ, ಹೌದು. ಅನುಮಾನವಿಲ್ಲದೆ ಒಂದೊಂದು ತಾರೆ ಎಣಿಸಬಹುದು—ಬಂದಾಗ ಮಾತ್ರ ಆಪತ್ತೇ ಎಬ್ಬಿಸಿಬಿಡುತ್ತದೆ."

"ಬಾಬಾ, ದೇವರಿಗೆ ಯಾರು ಹೇಳಬೇಕು ?"—ತನ್ನ ಕೆಳಗಿನ ಕಿರಿಗೋಡೆಯ ಮೇಲೆ ಹೊರಸಿನ ಕಾಲು ಇಡುತ್ತ ಘುದ್ದಾ ಅಂದನು.

"ನಾನೆಂದೆ, ಈಗ ಮೇಲೆ ಮೆತ್ತಿಗೇ ಏರಿಸೋಣ ಹೊರಸು, ಓಣಿಯಲ್ಲಿ ಮಲಗಿರುವದು ಬೇಡ." ಬಚನೋ ಚನ್ನನನಿಗೆ ಅಂದಳು, ಆತ ಈ ತನಕ ಓಣಿಯಲ್ಲಿ ಹೊರಸು ಹಾಕುತ್ತಿದ್ದ.

"ಈಗ ಎರಡು ತಾಸಿಗಾಗಿ ಎತ್ತಿ ಹೊತ್ತು, ಕಷ್ಟಪಡುವದೇಕೆ ? ಅರ್ಧರಾತ್ರಿ ಹರಿದು ಹೋಯಿತು. ಅಲ್ಲಿ ನೋಡು ಆ ದೊಡ್ಡ ನಕ್ಷತ್ರ (ಸಪ್ತರ್ಷಿ) ಸರಿದು ಎಲ್ಲಿ ಮುಟ್ಟಿದೆಯೆಂತ !"

"ಅಲ್ಲಃ, ಓಣಿಯಲ್ಲಿ ನೀವು ಯಾರ್‍ಯಾರ ಹೊರಸು ಹಾಕುವಿರಿ ? ಸೂರ್ಮಡಿ ನಾಲ್ಕುಕಾಲಿನ ಪಶು—ನಡೆ ಮೇಲಕ್ಕೆ, ನಾನು ಹೊರಸು ಹಿಡಿಯುತ್ತೇನೆ. ಒಂದು ಗಳಿಗೆಯಾದರೂ ಸುಖವಾಗಿ ಕಳೆಯುವಾ."

"ಸರಿ, ಹಾಗಾದರೆ ಹಿಡಿದೆ, ಸೀಬೋ, ಎಳ್ಳವು ಎಬ್ಬಿಸು—ಮಕ್ಕಳಿಗೆ. ಬಂದರ್, ಏ ಏಳು. ಹೊರಸು ಹೊರಗೆ ಹಾಕಿರಿ . . ." ಎನ್ನುತ್ತ ನಿಚ್ಚಣಿಕೆಯ ಮೆಟ್ಟಿಲು ಏರುತ್ತ ಚನ್ನನ ಮೆತ್ತಿಯ ಕಿರಿ ಗೋಡೆಯ ಮೇಲೆ ಹೋಗಿ ಕುಳಿತನು.

ಬಚನೋ ತೋಳಿನ ಆಧಾರಕೊಟ್ಟು ಹೊರಸು ಮತ್ತು ಹಾಸಿಗೆಗಳನ್ನು ಹಿಡಿಸಿದಳು. ಚನ್ನನ ಮತ್ತೆ ಅಲ್ಲಲ್ಲಿ ಮಕ್ಕಳನ್ನು ಮಲಗಿಸಿದನು. ಬಚನೋ ದೀಪ ಆರಿಸಿ ಬಾಗಿಲಿಗೆ ಬೀಗ ಹಾಕಿದಳು. ಮತ್ತು ನಿಚ್ಚಣಿಕೆಯಿಂದ ಮೇಲಿನ ಮೆಟ್ಟಲಿಗೇರುತ್ತ ಅಂದಳು, "ಹೇ ವಾಹಗುರು . . . ಕೆಳಗಿನಿಂದ ಮೇಲೆ ಬಂದರೆ ಉಸಿರಾದರೂ ಹಾಯಾಗಿ ಎಳೆಯಬಹುದು."

ಮಕ್ಕಳನ್ನು ಹೊರಸುಗಳ ಮೇಲೆ ಮಲಗಿಸಿ-ಸಾವರಿಸಿ ಬಚನೋ ಕಿಟಕಿ ಕಿಂಡಿ ತೆರೆಯಲು ಹೋದಳು. ಆಗ ಕೋಣೆಯ ಮೆಟ್ಟಿನ ಮೇಲೆ ಅವಳ ಹಿಮ್ಮಡ ಬಡ್ಡಿತು. ಮತ್ತು ಅಲ್ಲಿಂದ ತಿರುಗುವಾಗ ಗೋಡೆಯ ಮೇಲೆ ಕಾಲೇ ಜಾರಿತು. ಹೇಗೋ ಬಹಳ ಕಷ್ಟದಿಂದ ಅವಳು ಬೀಳುತ್ತ ಬೀಳುತ್ತ ಸಾವರಿಸಿಕೊಂಡಳು. ಮತ್ತು ಬಡಬಡಿಸಹತ್ತಿದಳು, "ಎಷ್ಟು ಸಲ ಹೇಳಿದೆ. ಜವಳು ನೆಲದ ಕಾರಯು ಕಟ್ಟಿಗೆ ಸವರಿ ಕೋಣೆಯ ಮೇಲಿನ ತಾರಸಿ ಹಾಕಬೇಕೆಂದು, ಜತೆಗೆ ಕೋಣೆಯ ಮಿದವೂ ಸಿಗುವದೆಂದು. ಆದರೆ ಆ ಜಾಟ ಕೇಳಲೇ ಇಲ್ಲ. ಜನ ತಮ್ಮ ಜೈನಿಗಾಗಿ ಊಟ ಮಾಡುತ್ತಾರೆ, ನಮಗಿಲ್ಲ ಒಪ್ಪತ್ತು ಊಟಕ್ಕೂ. . ."

"ಲೇ, ಈಗ ಈ ಹೊತ್ತಿಗೆ . . ." ಚೆನ್ನನ ಹಿರಿಯ ಮಗಳ ಮದುವೆಯ ವಿಚಾರ ಹೇಳುವವನಿದ್ದ. ಆದರೆ ಹತ್ತಿರವೇ ಮಲಗಿದ್ದ ಪ್ರಾಯದ ಮಗಳ ಭಿಡೆ ಕಾಡಿತು.

"ಓಹೋ, ನೀನು ಅಲ್ಲಿ ಹೋಗಿ ಯಾವ ಪರಾಕ್ರಮ ಕಾಣಿಸುವೆ?" ಕಾಳಗಕ್ಕೇ ಸಿದ್ಧಳಾಗಿ ಅವಳು ಹೊರಸಿನ ಹತ್ತಿರ ಬಂದಳು.

"ಸರಿ, ಈಗ ಆರಾಮಾಗಿ ನಿದ್ದೆಮಾಡು. ಇದಿರಾ ಇದಿರೇ ಮಟಮಟ ಗುಡ ಹತ್ತಿರುವಿ. ತನಗಿಂತ ಕೆಳಗಿನ ಮಂದಿಯನ್ನು ಕಂಡು ಸಮಯ ಸಾಗಿಸಿಕೊಂಡು ಹೋಗಬೇಕು."

"ಹೌದಣ್ಣಾ ಹೌದು. ಚನ್ನನಸ ಮಾತು ಬೇಕಾದರೆ ಸತ್ಯ." ಹತ್ತಿರದ ಮನೆಯ ಕೆಳಗಿನ ಮೆತ್ತಿಯ ಮೇಲಿಂದ ಕರಮುಸಿಂಹನ ಅಮ್ಮ ಒಪ್ಪಿಗೆ ಸೂಚಿಸಿದಳು.

ಸೆಕೆಯಿಂದ ಮತ್ತೆ ಉಸಿರುಕಟ್ಟಿದಂತೆ ಆಗಹತ್ತಿತು. ಮಳೆ ಬಂದು ಹೋಗಿದ್ದೇ ಇಲ್ಲ—ಎಂಬಂತೆ ಅನಿಸುತ್ತಿತ್ತು. ಅತ್ತರು ಮಾರುವ ಬೀಬಿಯ ಅಂಗಳದಲ್ಲಿ ಕಾರೆಯ ಗಿಡ ಸುಮ್ಮನೆ ನಿಂತಿತ್ತು. ಸೆಕೆಯಿಂದ ಬೇಸತ್ತು ಚನ್ನನ ಪ್ರಕೃತಿಯ ವ್ಯವಸ್ಥೆಯ ವಿರುದ್ಧ ಹೇಳಿದನು, "ಯಾರೋ ದೈತ್ಯಪಾಪಿ ಕಾವುಲಿಗೆ ಕೂತಾನೆ. ಒಂದು ಎಲೆಯೂ ಈವಾಗ ಅಲ್ಲಾಡುವದಿಲ್ಲ!"

"ಬಡವರಿಗೆ ದುಃಖವೇ ದುಃಖ." ಕೆಳಗೆ ದನಗಳ ಕಡ್ಡಿಯೊಳಗಿಂದ ಅಂಗಳ ಗುಡಿಸುವ ಮೈಂಗಲ ಅಂದನು. ಆತ ದಡ್ಡಿಯ ಹೊರಗೆ ಓಣಿಯಲ್ಲಿ ಹೊರಸು ಹಾಕಿಕೊಂಡು ಒರಗಿದ್ದನು. ತನ್ನ ಸ್ಥಳದಲ್ಲಿ ಆತ ಮೀನಿನಂತೆ ಚಡಪಡಿಸುತ್ತಿದ್ದನು.

"ಅಮ್ಮಾ, ಸೊಳ್ಳೆ ಕಡಿತಾವೆ"—ಹೊರಸಿನ ಕಾಲ್ಕಡೆಯ ಹಗ್ಗದಿಂದ ಕಾಲು ತುರಿಸಿಕೊಳ್ಳುತ್ತ ಭಂದರ ಅಂದ.

ಅತ್ತರದ ಬೀಬಿಯ ಕಾರೆ ಗಿಡದ ಟೊಂಗೆಗಳಲ್ಲಿ ಸ್ವಲ್ಪ ಸರಸರ ಸದ್ದಾಯಿತು. ಗಾಳಿಯು ಮಂದವಾಗಿ ಬೀಸಲು ಶುರುವಾಯಿತು. ಅದರಲ್ಲಿ ಒದ್ದೆ ಮೆತ್ತುಗಳ ಕಾವೂ ಸೇರಿತ್ತು. ಘುದ್ದಾ ಸುಳದ ಉಸಿರೆಳೆದು ತನ್ನ ಹೊರಸಿನಿಂದಲೇ ಹೇಳಿದ, "ಲೇ, ಚನ್ನನಣ್ಣಾ ಕಾವುಲು ಬದಲಾಯಿತು. ಈಗ—ಯಾರೋ ಧರ್ಮಾತ್ಮ ಬಂದು ಕೂತಿದ್ದಾನೆ."

"ಹೌದು ಮಗ,"—ದೂರದಿಂದ ಕರಮುಸಿಂಗನ ಅಮ್ಮ ಅಂದಳು, "ಜಗತ್ತಿನಲ್ಲಿ ಧರ್ಮಾತ್ಮರಿಗೇನು ಕಡಿಮೆ."

"ಇದೇನು ಧ್ರುವವೇ, ಅಮ್ಮಾ?" ಘುದ್ದಾ ನೆಗೆದಾಡುತ್ತ ಬರುವ ಗಾಳಿಯು ಸೆಳಕನ್ನು ಸವಿಯುತ್ತ ಅಂದನು. ಚನ್ನನನ ಕಣ್ಣು ಕೂಡಿದವು. ಆತ ಸುಮ್ಮನೆ ಬಿದ್ದದ್ದು ಕಂಡು ಘುದ್ದಾ ದನಿ ಏರಿಸಿ ಅಂದ, "ಚನ್ನನ, ಓಯ್ ಚನ್ನನಾ!"

"ಹೋಃ!" ಚನ್ನನ ಝೊಂಪಿನಲ್ಲಿಯೇ ಇದ್ದ.

"ನಿದ್ದೆಬಂತೇ?"

"ಆಂ—ಹೋ,"

"ಸರಿ, ಹಾಗಾದರೆ ಮಲಗು," ಘುದ್ದ ಅಂದನು. ಮತ್ತು ತಾನೂ ಮಗ್ಗಲು ಮುರಿದನು.

ಗಾಳಿಯು ಮಂದ ಸೆಳಕುಗಳು ಬಂದು ಎಲ್ಲರ ದುಃಖಗಳನ್ನೂ ತೊಳೆದೊಗೆದವು. ಹಗುರಾದ ಪ್ರೇಮ ತುಂಬಿದ ಕೈಗಳಿಂದ ಪ್ರಕೃತಿಯು ಎಲ್ಲರನ್ನು ಮೈದಡವಿ ಜೋಗುಳ ಹಾಡುತ್ತಿದ್ದಳು. ಮೆಲ್ಲಮೆಲ್ಲಗೆ ಎಲ್ಲರೂ ನಿದ್ದೆಹೋದರು. ಚನ್ನನ ತನ್ನ ತೋಳನ್ನೇ ದಿಂಬಾಗಿಟ್ಟುಕೊಂಡು ಮಗ್ಗಲು ಹೊರಳಿ ನಿದ್ದೆಯಲ್ಲಿ ಮೈಮರೆತನು.

ಒಮ್ಮೆಂದೊಮ್ಮೆ ಹಸಿದ ಹೆಬ್ಬುಲಿಯಂತೆ ಊರ ಆಕಾಶದಲ್ಲಿ ಮುಗಿಲು ಅಬ್ಬರಿಸಿದವು. ಕಕ್ಕಾಬಿಕ್ಕಿಯಾಗಿ ಚನ್ನನನ ಕಣ್ಣು ತೆರೆದವು. ದೊಡ್ಡದೊಡ್ಡ ಬೂದುಬಣ್ಣದ ಮೋಡಗಳು ಚಂದ್ರನನ್ನು ಮುಚ್ಚಿ ಆಕಾಶವನ್ನು ಕವಿಯುತ್ತಿದ್ದವು. ಜರಿಜರಿಯಾದ ತೆಳ್ಳನ್ನ ಮಣ್ಣುಮಾಸಲು ಕತ್ತಲೆಯು ಹಬ್ಬಿತು. ಚನ್ನನ ಹೊರಸಿನಲ್ಲಿ ಎದ್ದುಕುಳಿತನು. ಮತ್ತು ಕಾಲಿನಿಂದ ತನ್ನ ಎಕ್ಕಡಗಳನ್ನು ತಡಕಾಡಹತ್ತಿದನು.

ಬಿಳಿಯ ಬೆಳಕಿನ ಒಂದು ತಂತಿಯಂಥ ಕಂಬಿಯು ವೇಗದಿಂದ ಮನೆಗಳ ಚಪ್ಪರಗಳ ಮೇಲೆ ಮಿಂಚಿತು. ಮತ್ತು ಮರುಕ್ಷಣಕ್ಕೆ ಸಿಡಿಲು ಜೋರಿನಿಂದ ಬಿದ್ದ ಸದ್ದಾಯಿತು. ಮಕ್ಕಳು ಹೆದರಿ ಅಳತೊಡಗಿದವು. ನಾಯಿಗಳು ಬೊಗಳಹತ್ತಿದವು. "ರಾಮ! ರಾಮ!" ಕೇಳಿಬಂತು, ಚನ್ನನನ ಕುಕ್ಕಿದ ಕಣ್ಣುಗಳ ಮುಂದೆ ಕವಿದ ಕತ್ತಲೆಯಲ್ಲಿ ಅರಸಿಣ, ಹಸಿರು, ಕೆಂಪು ಚಿಕ್ಕೆಗಳು ಇನ್ನೂ ಮಿನುಗುತ್ತಲೇ ಇದ್ದವು. ಗಾಳಿಯ ಒಂದು ಜೋರಿನ ಸೆಳಕು ಕಾರೆಯ ಗಿಡದ ಟೊಂಗೆಗಳಲ್ಲಿ ಸಿಲುಕಿ ಬಿದ್ದಂತೆ ಆಯಿತು.

"ಇದರ ಮನೆ ಹಾಳಾಗ" ಬಚನೋ ದಿಗಿಲು ಬಿದ್ದು ಕಿರಿಯ ಮಗಳನ್ನು ಎದೆಗೆ ಅವಚಿಕೊಂಡು ಎದ್ದಳು, "ದೈವ ನೆಟ್ಟದ್ದು ಇಂದು ನಮ್ಮ ಬೆನ್ನಿಗೇ ಬಿದ್ದಿದೆ—ಎಲ್ಲಿಂದ ಏರಿ ಬಂದಿತೋ ಏನೋ!" ಮತ್ತು ಅವಳು ಚಿಂತೆ ತುಂಬಿದ ಎತ್ತರದ ದನಿಯಲ್ಲಿ ಚನ್ನನನಿಗೆ ಅಂದಳು, "ಈಗ ನೀನು ಕೂತಲ್ಲಿಯೇ ಏನು ಆಲೋಚನೆಮಾಡುತ್ತಿರುವಿ? ಹೊರಸುಗಳನ್ನು ಮತ್ತೆ ಕೆಳಗೆ ಇಳಿಸಬೇಕು."

"ಈಗ ಕೆಳಗೆ ಇಳಿಸುವದು ಹೇಗೆ?" ಚನ್ನನನ ಮೂಳೆ ನೋಯುತ್ತಿದ್ದವು.

"ಇಳಿಸದೆ ಮತ್ತೇನು ಮಾಡಬೇಕು? ಕಾಣುವದಿಲ್ಲವೇ, ಮೋಡಗಳು ಮಳೆಗರೆಯಲಿಕ್ಕೇ ತಯಾರಾಗಿವೆ, ಏಳು ಬೇಗ!"

"ಒಂದು ತಾಸು ಮೊದಲು ಎಲ್ಲೂ ಒಂದು ಮೋಡ ಕಂಡಿದ್ದಿಲ್ಲ. ಇದರ ಅವ್ವ..." ಘುದ್ದಾ ತನ್ನ ಹೊರಸಿನ ಮೇಲೆ ಕೂಡ್ರುತ್ತ ಅಂದನು.

ಗಾಳಿ ನಿಂತುಬಿಟ್ಟಿತು, ಮೋಡಗಳು ಕರಗುತ್ತ ನಡೆದವು. ಮೇಲುಪ್ಪರಿಗೆ, ಮೆತ್ತುಗಳ ಮೇಲಿನ ಜನರು ತಮ್ಮ ಕಿಟಕಿಗಳನ್ನು ತೆರೆದಿಟ್ಟು ಮಲಗಿದ್ದರು. ಒಂದು ಕ್ಷಣ ಆಲೋಚಿಸಿ ಚನ್ನನ ಅಂದನು, "ಮಕ್ಕಳ ಹೊರಸುಗಳನ್ನು ಮಾಡಿನ ಕೆಳಗಡೆ ಇಟ್ಟು ಬಿಡುವಾ, ನೀನು ಸೀಬೋಳ ಸಂಗಡ ಕೆಳಗೆ ಹೋಗು. ನಾನು ಇನ್ನೂ ಇಲ್ಲೇ..."

ಸ್ವಲ್ಪ ಸ್ವಲ್ಪ ಹನಿ ಉದುರ ಹತ್ತಿದವು. ಬಚನೋ ಚಿಂತೆಯಿಂದ ಚಡಪಡಿಸುತ್ತ ಎಂದಳು, "ಅಯ್ಯೋ ನಿನ್ನ ಬುದ್ಧಿ ಸುತ್ತುಹೋಗಿದೆ. ಏನು ಅವಸ್ಥೆ ಮಾಡ ಹೊರಟಿದ್ದೀ? ಈ ಮಾಡಿನ ಅಡಿಗೆ ಯಾರ ಯಾರ ಹೊರಸು ಇಡಬೇಕು? ನಡೆ ಕೆಳಗೆ, ಹಿಡಿ ಹೊರಸನ್ನು."

"ಆಯ್ತು ಮಾರಾಯ್ತಿ" ಬೇಸತ್ತ ಭಾರವಾದ ದನಿಯಲ್ಲಿ ಆತ ದೊಡ್ಡದಾಗಿ ಕೂಗಿದನು.

ಬಚನೋ ಮತ್ತು ಸೀಬೋ ಲಗುಬಗೆಯಿಂದ ಬಟ್ಟೆಬರೆಗಳನ್ನು ಒಟ್ಟುಗೂಡಿಸಿ ಚಿಕ್ಕ ಮಕ್ಕಳನ್ನು ಸಂಬಾಳಿಸಿ ಕೆಳಗಡೆಗೆ ಹೋದರು. ಕೇಲೊ ಮತ್ತು ಭಿಂದೀ ಅರೆನಿದ್ದೆಯಲ್ಲಿಯೇ ಸಿಚ್ಚಣಿಕೆಯ ಮೆಟ್ಟಲು ತಡಕಿ ತಡಕಿ ಇಳಿಯಹತ್ತಿದರು. ಚನ್ನನ ಅಲ್ಲಿಯೇ ಹೊರಸಿನ ಕಾಲಬಳಿಗೆ ಬಿದ್ದ ಹಚ್ಚಡವನ್ನು ಎಳೆದು ಸುತ್ತಿಕೊಂಡು ನಿದ್ದೆ ಮಾಡಿದನು, ಗೊರಕೆ ಹೊಡೆಯಲೂ ಶುರುಮಾಡಿದನು.

ಹಸಿಗರೆಯುತ್ತಲೇ ಇದ್ದುವು.

"ಇಂದಿಲ್ಲ ಮಲಗಲು ಕೊಡೋದಿಲ್ಲ, ಚನ್ನನ" ಮಳೆಹನಿಗಳಿಂದ ಘಾಸಿಯಾಗಿ ಘುದ್ದಾ ಅಂದನು.

"ಅಯ್ಯೋ ನಮ್ಮ ಈ ಹೊತ್ತು ಕೆಟ್ಟದ್ದು—ಹಗಲಲ್ಲಿ ಸುಖವಿಲ್ಲ, ರಾತ್ರಿಗೆ ನಿದ್ದೆ ಇಲ್ಲ." ಚನ್ನನನ ಕಣ್ಣಿನಲ್ಲಿ ಉರಿಉರಿ ಆಗಿತ್ತು.

"ಮಜಾ ಹೊಡೆಯುವವರು ಮೇಲುಪ್ಪರಿಗೆಯ ಮನೆಯವರು." ಆ ಮನೆಗಳಲ್ಲಿಯ ದೀಪದ ಪ್ರಭೆ ಕಂಡು ಘುದ್ದಾ ಈರ್ಷೆಯಿಂದ ಹೇಳಿದನು.

"ತಮ್ಮಾ, ಇದು ದೇವರ ಮರ್ಜಿ." ಚನ್ನನ ತಣ್ಣನೆ ಉಸಿರೆಳೆದು ಅಂದನು. "ಮನೆಯ ಚಿಕ್ಕಮ್ಮ ಕೆಟ್ಟದ್ದು ನೋಡು—ಘುದ್ದಯ್ಯ! ಇನ್ನು ಎಷ್ಟು ರಾತ್ರೆ ಇದೆ?"

"ಬಹಳಷ್ಟು ಇದೆ ಇನ್ನೂ."

"ಇಲ್ಲವಾದರೆ ಈವಾಗ ಹೇಗೋ ಕಷ್ಟ ಎಂದು ಅರ್ಧರಾತ್ರೆ ಕಳೆಯಿತು. ಇನ್ನೂ ಬೆಳ್ಳಿ ಕಾಣಿಸಿಕೊಂಡಿಲ್ಲ. ಮೋಡಗಳ ಮೂಲಕ ಕಂಡು ಬರುವದಿಲ್ಲ. ನೀನು ದನಗಳನ್ನು ಮೇಯಿಸಲು ಹೋಗುವುದಿದೆ ಅಲ್ವೇ?"

"ಹೌದು"

"ಇನ್ನು ಮಲಗಿಕೋ. ಬಹಳಹೊತ್ತಿದೆ... ಮನುಷ್ಯನಿಗೆ ಒಂದುಗಳಿಗೆ ಆರಾಮೂ ಬೇಕು.'

"ಜಯ್ ಜಾಟನಿಗೆ ಆರಾಮು ಎಲ್ಲಿ?"

"ಅಂದಾಗೆ ನಿನ್ನ ಮಾತೂ ಸರಿ." ಘುದ್ದಾ ಹುಂಕಾರ ಕೊಟ್ಟು ಸುಮ್ಮನಾದ.

ಚಿಕ್ಕ ಚಿಕ್ಕ ಕಣಗಳು ಕ್ರಮೇಣ ದೊಡ್ಡದಾಗುತ್ತ ಹೋದವು. ಕಟ್ಟಿನಂತ ಮೋಡಗಳ ಕೆಳಗೆ ಜಿದ್ದಿನಿಂದ ಕವಿದು ಕೂತ ಸೆಕೆಯನ್ನು ಗಾಳಿಯ ಸಿಕ್ಕಾಪಟ್ಟೆ ಸೆಳಕುಗಳು ಹರಿದು ಚಿಂದಿ ಚಿಂದಿ ಮಾಡಿದುವು. ಘುದ್ದೆ ಮತ್ತು ಚನ್ನನನ ಖಾಸಗಿ ಮಾತುಗಳು ಸವಿಸವಿ ನಿದ್ದೆಯ ಅಲೆಗಳಲ್ಲಿ ಕಳೆದುಹೋದವು. ಚನ್ನನನ ಕಣ್ಣುಗಳು ಪೂರಾ ಮುಚ್ಚಿದ್ದವು—ನಿಶ್ಚಿಂತವಾಗಿ, ಆದರೆ ಅವನ ಮನಸ್ಸಿನಲ್ಲಿ ಒಂದು ಅಳುಕು ಎದ್ದಿತ್ತು: "ಮಲಗಿದಲ್ಲಿಯೇ ಹೊತ್ತು ಏರಿಬಂದರೆ?" ಆತ ಮಲಗಿದಲ್ಲಿಯೇ ತನ್ನ ಕಿವಿಯನ್ನು ಓಣಿಯ ಸದ್ದುಗಳ ಕಡೆಗೆ ಹೊರಳಿಸಿದನು. ಮಳೆಯ ತೊಂದರೆ, ಮೂಳೆಗಳ ದಣಿವು, ಮತ್ತು ಘುದ್ದೆಯ ಮಾತುಗಳನ್ನು ಮರೆತು ಆತ ತನ್ನ ಗದ್ದೆಗಳತ್ತ ನಡೆದಾಗ ನಸುಕು ಹರಿಯುತ್ತಿತ್ತು. ಆಚೆ ಈಚೆ ಹತ್ತಿರದ ಜನರ ಜೋಳದ ಪೈರು ಚಿಗುರೊಡೆದು ಮೃದುವಾದ ಗಾಳಿಯಲ್ಲಿ ತೊನೆಯುತ್ತಿದ್ದವು. ಉದ್ದು, ಹೆಸರು ಮುಂತಾದ ಸಸಿಗಳು ಕಿವಿ ನಿಗುರಿಸಿ ನಿಂತಿದ್ದವು. ದೂರ ದಿಬ್ಬದ ಮೇಲೆ ಜೀತದಾಳು ಲಂಬಾಣಿ ರಂಟೆ ಹೂಡುತ್ತಿದ್ದ. ಗಂಟೆಗಳ ಮಂದ ಮಂದ ಸದ್ದಿನೊಂದಿಗೆ 'ಮಿರ್ಜೆ' ಹಾಡಿನ (ಪಂಜಾಬಿನ ಪ್ರಸಿದ್ಧ ಜಾನಪದ ಪ್ರೇಮಕಾವ್ಯ 'ಮಿರ್ಜಾ-ಸಾಹಿಬ'ದ ಪದ್ಯ) ಶಬ್ದಗಳೂ ಎತ್ತರಕ್ಕೆ ಏರುತ್ತಿದ್ದವು . . .

ಆತ ಗಡಬಡಿಸಿ ತಬ್ಬಿಬ್ಬಾಗಿ ಎದ್ದು ಕುಳಿತನು. ಪಾಗಾರಿನ ಕಟ್ಟೆಯ ಮೇಲೆ ಹುಂಜ ಕತ್ತಲೆಯಲ್ಲಿಯೇ ಕೂಗುತ್ತಿತ್ತು. ಓಣಿಯೊಳಗಿಂದ ಹಾಯುವ ಎತ್ತುಗಳ ಕಿರಿ ಗಂಟೆಗಳು ಘಿಲಿಘಿಲಿಸುತ್ತಿದ್ದವು. ಮೋಡಗಳ ಹಿಂದಿನಿಂದ ನಸುಕಿನ ಮುಂಬೆಳಕು ತೂರಿ ಬರಲಿತ್ತು.

ಅಂಗಳದೊಳಗಿಂದ ಎತ್ತನ್ನು ಬಿಡಿಸಿಕೊಂಡು ಕಲ್ಲು ಕಟ್ಟಿದ ಬಾವಿಯ ಕಡೆಗೆ ಹೋಗಲು ಹೊರಟಾಗ ಚನ್ನನ ಅಂದನು, "ಮುಂಜಾವಿನ ಬುತ್ತಿಕೊಟ್ಟು ಸೀಬೋಳನ್ನು ಬೇಗ ಕಳುಹಿಸು. ಬಿಚನಕೌರ ಚಹ ತುಸು ಕಹಿಯೇ ಇರಲಿ." ಅವನ ದನಿ ಒಡೆದ ಬಿದಿರಿನಂತಿತ್ತು.

# ಕೊಡಲಿಯ ಹಂಗಾಮು

ಉರಿಯುವ ಇಂಗಾಳಗಳಿಂದ ಜಡಿದು ತುಂಬಿದ ಭಟ್ಟಿಯ ಮೇಲೆ ಬಾಗಿ ದೀನಾ ಕಮ್ಮಾರನ ಉಕ್ಕಿನ ಮೈಯಿಗೆ ಕಂಚಿನ ಮಿರುಗು ಬಂದಿತ್ತು. ಆತ ಕಂಚಿನಲ್ಲಿ ಹೊಯ್ದ ಒಬ್ಬ ದೃಢಕಾಯ ಕಾರ್ಮಿಕನ ಸಾಕ್ಷಾತ್ ಮೂರ್ತಿಯಂತೆ ಕಾಣುತ್ತಿದ್ದ. ತೋಳಿನ ಸಬಲ ಹಿಡಿತದಿಂದ ಆತ ಸುತ್ತಿಗೆಯನ್ನು ಎತ್ತಿ ಬೀಸಿದಾಗ ಅವನ ವ್ಯಾಯಾಮ ಮಾಡಿದ ದೇಹದ ಸ್ನಾಯುಗಳು ಉಬ್ಬಿ ಬಂದವು. ಮತ್ತು ಅಡಿಗಲ್ಲ ಮೇಲಿಟ್ಟ ಕಬ್ಬಿಣದ ಕೆಂಡದ ಮೇಲೆ ಭಾರಿ ಜೋರಿನ ಒಂದು ಪೆಟ್ಟುಬಿತ್ತು.

ಪೆಟ್ಟಿನ ಸದ್ದು ಬಹಳ ಹೊತ್ತು ಮೊಳಗುತ್ತಲೇ ಉಳಿಯಿತು. ದೀನಾ ಕೆಲಸದಲ್ಲಿ ಇಷ್ಟೊಂದು ಮಗ್ನನಾಗಿದ್ದ, ಅವನಿಗೆ ಬಡ ಪ್ರಪಂಚದ ಸುದ್ದಿಯೇ ಇದ್ದಿಲ್ಲ. ಭಾದ್ರಪದದ ಭಟ್ಟಿಯಂತೆ ಉರಿಯುತ್ತಿದ್ದ ಬಿಸಿಲು ಕಿಟಕಿಯಿಂದ ಒಳಗೆ ಬಂದು ಅವನ ಮೂಳೆಗಳನ್ನು ನೆಕ್ಕಹತ್ತಿತು. ಆಗಲೇ ಅವನಿಗೆ ಎಚ್ಚರ ಬಂದದ್ದು. ಬೆಚ್ಚಿ ಬಿದ್ದು ಆತ ಕಿಟಕಿಯ ಹೊರಗೆ ನೋಡಿದ. ಹೊತ್ತು ನೆತ್ತಿಗೆ ಏರಿತ್ತು. ಅಷ್ಟು ಬೇಗ ಮಧ್ಯಾಹ್ನವಾಗಿಬಿಟ್ಟಿತ್ತು. ಮತ್ತು ಅವನ ಅರೆವಾಸಿ ಕೆಲಸವೂ ಪೂರ್ತಿ ಆಗಿದ್ದಿಲ್ಲ. ಬಿಸಿಲ ಕಾವಿನಿಂದ ಕಾಪಾಡಿಕೊಳ್ಳಲಿಕ್ಕೆ ಆತ ಕಿಟಕಿ ಮುಚ್ಚಿಕೊಂಡನು. ಆದರೆ ಕಿಟಕಿ ಮುಚ್ಚಿದ್ದರಿಂದ ಅವನಿಗೆ ಉಸಿರು ಕಟ್ಟಿ ಬಂದಿತು. ಮತ್ತು ಅವನ ತಲೆ ಬೆವರಿನಿಂದ ಒದ್ದೆ ಮುದ್ದೆ ಆಯಿತು. ರಾತ್ರಿ ಬಹಳ ಮಳೆ ಆಗಿತ್ತು. ಆಕಾಶದಿಂದ ಹಳ್ಳ ಹರಿದಿದ್ದವು. ಮುಂಜಾನೆಯೂ ಟಪಟಪ ಹನಿ ಬೀಳುತ್ತಿದ್ದವು. ಆದರೆ ಈಗ ಸೂರ್ಯನೇರಿ ಬಂದಾಗ ಭಾರಿ ಸೆಕೆ ಆಗಹತ್ತಿತು. ಆತ ಕಿಟಕಿ ತೆರೆದನು. ಮತ್ತು ತಿರುಗಿ ಭಟ್ಟಿಯ ಮೇಲೆ ಬಾಗಿದನು. ಅವನ ಬೆವರು ಅವನ ಕಿವಿಗಳಿಂದಾಗಿ ಈಗ ಅವನ ಬೆನ್ನಮೇಲೆ ಧಾರೆ ಹಿಡಿದು ಹರಿಯುತ್ತಿತ್ತು. ತನ್ನ ಚಾಚಿದ ಭಾರೀ ತೋಳಿನಿಂದ ಆತ ತಲೆಯ ಬೆವರನ್ನು ಹಿಂಡಿ ತೆಗೆದ. ಅಗ್ಗಿಷ್ಟಿಗೆಯಲ್ಲಿ ಬೆವರಿನ ದೊಡ್ಡ ದೊಡ್ಡ ಹನಿಗಳು ಉದುರಿದವು. ಚರ್‍ರ್ಽ ಎಂದು ಸದ್ದಾಯಿತು. ಬಹುಶಃ ಕ್ಷಣಕಾಲ ಒಂದು ಇಂಗಾಳದ ಬದುಕಿನಲ್ಲಿ ಏನೋ ತುಸು ಹಾಯೆನಿಸಿರಬೇಕು.

ಬಿಸಿಲು ಮತ್ತು ಭಟ್ಟಿಗಳ ಕಲಬೆರಕೆ ಕಾವಿನಿಂದ ಅವನ ದೇಹ ಬಹಳ ಕಾದು ಹೋಗಿತ್ತು. ಹೀಗೆ ಅನಿಸುತ್ತಿತ್ತು—ಈ ಬೆಂಕಿ ಅವನ ರಕ್ತದಲ್ಲಿ ಕರಗಿ ಅರಗಿ ಹೋಗಿತ್ತು. ಈ ಕಾವು ಅವನ ಮೂಳೆಗಳನ್ನು ಹರಿಯುತ್ತಿತ್ತು. ಭಟ್ಟಿಯ ತೀಕ್ಷ್ಣ ಕಿಡಿಗಳು ಅವನ ಕಣ್ಣಿನಲ್ಲಿ ಉರಿದೆದ್ದವು. ಅವನಿಗೆ ತನ್ನ ಮೈಯ ರೋಮ ರೋಮ ಒಂದು ಪಂಜಿನಂತೆ ಅನಿಸುತ್ತಿತ್ತು. ಅವನಿಗೆ ಸ್ವಪ್ನಕಂಡು ಬರುತ್ತಿತ್ತು—ಅವುಗಳಲ್ಲಿ

ಯಾವುದೇ ಪಂಜಿಗೆ ಉರಿಹತ್ತಿ ಅವನ ಮೈ ದೊಡ್ಡ ಪತಂಗದಂತೆ ಠುಸ್ ಎಂದು ಹರಿದು ಬಿಡುವದು.

ಅನ್ಯಮನಸ್ಕತೆಯಿಂದ ಆತ ಭಟ್ಟಿಯನ್ನು ಬಿಟ್ಟು ಕಿಟಕಿಯ ಹತ್ತಿರ ಹೋಗಿ ನಿಂತನು. ಹೊರಗೆ ಇಡಿ ಆಕಾಶ ಭಾದ್ರಪದದ ರಣರಣ ಬಿಸಿಲಿನಿಂದ ತುಂಬಿತ್ತು. ಅವನ ಕಣ್ಣು ಬಿಸಿಲಿಗೆ ರೂಢಿಗೊಂಡಿದ್ದಿಲ್ಲ. ಆದ್ದರಿಂದ ಕುಕ್ಕಿದಂತಾದವು. ದೃಷ್ಟಿ ತುಸು ನಿಚ್ಚಳವಾದೊಡನೆ ಅವನು ತನ್ನ ಇದುರಿಗೆ ದೂರದೂರದವರೆಗೆ ಚಾಚಿದ ಗದ್ದೆಗಳ ಕಡೆಗೆ ಮತ್ತು ಅವುಗಳ ನಡುವೆ ಕ್ಷಿತಿಜವನ್ನು ಮುಟ್ಟಲು ಬೆಳ್ಳಿಯ ಗೆರೆಯಂತೆ ಹಾಯ್ದು ಉಸುಕಿನ ತುಂಡಿನ ಕಡೆಗೆ ನೋಡಿದನು. ಕಬ್ಬಿನ ಹೊಲದ ಎಡಗಡೆಗೆ ಅರಳೆಯ ಹೊಲಗಳಿದ್ದವು. ಅಲ್ಲಲ್ಲಿ ಕಬ್ಬಿನ ಹೊಲಗಳಲ್ಲಿ ನೀರು ಬೆಳ್ಳಿಯಂತೆ ಚಕಮಕ ಹೊಳೆಯುತ್ತಿತ್ತು. ಎಡಗಡೆಯ ಜಮೀನುಗಳಲ್ಲಿ ರಂಟೆ ಹೂಡಿ ಸುಹಾಗಾ ಕ್ಯಾರವನ್ನು ತೂರಿ ಆಗಿತ್ತು. ಅವು ಈಗ ಬಿತ್ತನೆಯ ನಿರೀಕ್ಷೆಯಲ್ಲಿ ಇದ್ದವು. ಸದ್ಯದ ಮಳೆಯಿಂದ ತೊಯ್ದು ಮಣ್ಣಿನ ಕಮ್ಮಗಿನ ವಾಸನೆಯು ಬಹಳ ಪ್ರಿಯಯೆನಿಸಿತು. ಮತ್ತು ಒಮ್ಮಿಂದೊಮ್ಮೆ ಅವನ ಮನಸ್ಸಿನಲ್ಲಿ ಒಂದು ಕೇಕೆ ಎದ್ದಿತು. ಅವನ ಮನಸ್ಸಿಗೆ ಅನಿಸಿತು—ಆ ತೆರೆದ ಕಿಟಕಿಯಿಂದ ಜಿಗಿದು ಹೊರಗೆ ಹೋಗಿ ಆ ಗದ್ದೆಗಳಲ್ಲಿ ಉರುಳಾಡಬೇಕು. ತೊಯ್ದು ನೆಲದ ಒದ್ದೆತನವನ್ನು ತನ್ನ ರೋಮರೋಮಗಳಲ್ಲಿ ತುಂಬಿಕೊಳ್ಳಬೇಕು.

ಅವನಿಗೆ ಗದ್ದೆಗಳಲ್ಲಿ ಬಹಳ ಪ್ರೀತಿ. ಬಿತ್ತನೆಯ ಮತ್ತು ಕೊಯ್ಲಿನ ದಿನಗಳಲ್ಲಿ ಅವನ ರಕ್ತದಲ್ಲಿ ರಭಸವೇರಿ ಬರುತ್ತಿತ್ತು. ಅವನ ಮೂಳೆಗಳು ಅಗಲವಾಗಿ ಬಿಡುತ್ತಿದ್ದವು. ಅವನು ಊರ ಕಮ್ಮಾರ. ಆದರೆ ಅಂಥ ಊರಲ್ಲಿ ಕಮ್ಮಾರನಿಗೆ ಎಷ್ಟು ಕೆಲಸ ಹುಟ್ಟೀತು? ಆದ್ದರಿಂದ ಹೆಚ್ಚಿನ ವೇಳೆಯನ್ನು ಆತ ಗದ್ದೆಗಳಲ್ಲಿ ರೈತರಿಗೆ ನೆರವಾಗುತ್ತಿದ್ದನು. ಅವನಂತೆ ಕೊಯ್ಲಿನ ಕೆಲಸ ಸುತ್ತಲಿನ ಏಳು ಹಳ್ಳಿಗಳಲ್ಲಿ ಬೇರೆ ಯಾರೂ ಮಾಡಲಾರ. ಅವನಂತೆ ಯಾರೂ ಹೊರೆಯನ್ನೂ ಎತ್ತಲಾರ. ಒಮ್ಮೆಲೆ ಅವನ ಕೈಗಳು ಮಚ್ಚುಗತ್ತಿಯನ್ನು ಹಿಡಿಯಲಿಕ್ಕೆ ಲವಲವಿಸಹತ್ತಿದವು. ಮಚ್ಚುಗತ್ತಿ, ಕೊಯ್ಲು, ಬೆಳದಿಂಗಳಲ್ಲಿ ತೊನೆದಾಡುವ ಕಬ್ಬಿನ ಹೊಲ, ಮೈಲುಗಟ್ಟಲೆ ಹೊಂಬಣ್ಣದ ಕದರು—ಕುಚ್ಚುಗಳ ಸಳಸಳ ಸದ್ದು, ಭೂಮಿಯ ಒಡಲಿನಿಂದ ಹುಟ್ಟಿದ ಹಾಡುಗಳ ಇಂಚರ—ಇವೆಲ್ಲ ಅವನಿಗೆ ನೆನಪಾದವು ಮತ್ತು ಅವನಿಗೆ ತನ್ನ ಬೆನ್ನಹಿಂದೆ ನರಕದಂತೆ ಒಂದು ಭಟ್ಟಿ ಹೊತ್ತಿ ಧಗದಗಿಸಿರುತ್ತಿದ್ದುದು ಮತ್ತು ಕಳೆದ ಇಪ್ಪತ್ತು ದಿನಗಳಿಂದ ಕೊಡಲಿಯಲಗು, ಕುಡಗೋಲು, ದೊಣ್ಣೆಗಳನ್ನು ತಯಾರಿಸುವದರ ಹೊರತು ಇನ್ನೇನು ಮಾಡಿದ್ದೇ ಇಲ್ಲ—ಎಂಬುದು ಮರತೇ ಹೋಗಿತ್ತು. ಹೌದು ಈಗ ಮಚ್ಚುಗತ್ತಿ ಕುಠಾರಿಗಳ ಹಂಗಾಮು ಕಳೆದು ಹೋಗಿತ್ತು. ಇದೀಗ ಕೊಡಲಿಯ ಅಲಗು ಹಾಗೂ ಲಾಠೀ ದೊಣ್ಣೆಗಳ ಕಾಲವಾಗಿತ್ತು. ಮತ್ತು ಈ ಸಲ ಎಂಥ

ಕೊಯ್ಲು ನಡೆದಿತ್ತು? ಗೋಧಿಯ ಪೈರಿನ ಬದಲು ಗೋಧಿ ಬಿತ್ತುವ ಮತ್ತು ಕೊಯ್ಯುವ ಜನ ತಾವೇ ಕೊಯ್ಯಲ್ಪಡುತ್ತಿದ್ದರು.

ಅವನು ಚಿಂತಿಸಹತ್ತಿದ—ಇದೆಂಥ ಅರಿಷ್ಟ ತಾನು ಕೊಂಡುಕೊಂಡೆ. ಎಂಥ ಕೆಲಸ ಕೊರಳಿಗೆ ಸುತ್ತಿಕೊಂಡೆ! ಆತ ಈ ಕೆಲಸದಲ್ಲಿ ಇಷ್ಟೊಂದು ತೊಡಗಿರುತ್ತಿದ್ದ—ಹೊಸ ಹುಟ್ಟಿದ ಪಾಕಿಸ್ತಾನದ ಎಲ್ಲ ಸೈನಿಕರಿಗಾಗಿ ಆಯುಧಗಳನ್ನು ತಯಾರು ಮಾಡುವ ಹೊಣೆ ಅವನ ತಲೆಯ ಮೇಲೆಯೇ ಬಿದ್ದಿದೆಯೋ—ಎಂದೆನಿಸುವಂತಿತ್ತು. ಪಾಕಿಸ್ತಾನವಂತೂ ಹುಟ್ಟಿ ಆಗಿತ್ತು. ಆದರೆ ಪಾಕಿಸ್ತಾನದ ಪೂರ್ಣತೆಗಾಗಿ ಪಾಕಿಸ್ತಾನದಲ್ಲಿ ವಾಸಿಸುವ ಹಿಂದು ಮತ್ತು ಸಿಖ್ಖರ ತೊಂದರೆ ಪೂರ್ತಿ ಮುಗಿಸಿ ಬಿಡುವದು ಅಗತ್ಯವಿತ್ತು. ಈ ಮಾತು ದೀನನಾನ ತಿಳುವಳಿಕೆಗೆ ಇನ್ನೂ ಹರಿದಿದ್ದಿಲ್ಲ. ಆದರೂ ಎಲ್ಲ ಮಂದಿ ಇದನ್ನೇ ಹೇಳುತ್ತಿದ್ದರು. ಊರಿನ ಚೌಧರಿಗಳಿಂದ ಹಿಡಿದು ಜಾಮಾ ಮಸೀದಿಯ ಇಮಾಮರ ವರೆಗೆ ಎಲ್ಲರೂ ಇದೇ ಮಾತು ಹೇಳುತ್ತಿದ್ದರು. ಮತ್ತು ಜಿಹಾದ (ಧರ್ಮಯುದ್ಧ) ಯಶಸ್ವಿಯಾಗಬೇಕಾದರೆ ಅವನ ಭಟ್ಟಿ ಉರಿಯುತ್ತಲೇ ಇರಬೇಕು. ಕೊಡಲಿ, ಕುಡುಗೋಲುಗಳ ರೂಪದಲ್ಲಿ ಮೃತ್ಯುವಿನ ನಾಲಿಗೆಗಳನ್ನು ಅದು ಉಗುಳುತ್ತಲೇ ಇರಬೇಕು.

ಅವನು ಹಿಂದಿರುಗಿ ನೋಡಿದನು. ಇದ್ದಲಿಗಳಲ್ಲಿ ಇಟ್ಟ ಲೋಹದ ತುಂಡು ಗಳು ಇಂಗಾಳಕ್ಕಿಂತಲೂ ಕೆಂಪಾಗಿದ್ದವು. ಅವನ್ನು ಕಂಡೊಡನೆ ಅವನಿಗೆ ತಲೆ ತಿರುಗಿದಂತಾಯಿತು. ಅವನು ತನ್ನ ಹೊಟ್ಟೆಯನ್ನು ಬಿಗಿದು ಹಿಡಿದನು. ಏನೋ ಬಿಸಿಯಾದ ತೀಕ್ಷ್ಣವಸ್ತು ಅವನ ಹೊಟ್ಟೆಯನ್ನು ಸಿಗಿಯುತ್ತಿತ್ತು. ಒಮ್ಮೆಲೆ ಅವನಿಗೆ ನೆನಪಾಯಿತು, ತನಗೆ ಚುರುಕಾಗಿ ಹಸಿವೆ ಆಗಿದೆಯೆಂದು. ಆತ ನಸುಕಿನಿಂದಲೂ ಗುಟುಕು ನೀರೂ ಕುಡಿದಿದ್ದಿಲ್ಲ. ಈಗ ಅವನ ಹೊಟ್ಟೆಯಲ್ಲಿ ಹಸಿವೆಯ ಉರಿ, ಅದು ಅವನ ಕರುಳಿಗೆ ಶಾಖ ಕೊಡುತ್ತಿತ್ತು. ಅವನ ತುಟಿಗಳು ಒಣಗಿ ಮರವಾಗಿದ್ದವು.

ಆತ ಮನೆಯೊಳಗೆ ಇಣಕಿ ನೋಡಿ ದನಿಯೇರಿಸಿ ಕೂಗಿದ, "ಬಶೀರನ ಅಮ್ಮಾ, ಬೇಗ ನೀರು ತಾ."

ಸುಮಾರು ನಾಲ್ವತ್ತೈದು ವರ್ಷದ ಒಂದು ಹೆಣ್ಣು ಕಂಚಿನ ಪೇಲೆಯಲ್ಲಿ ನೀರು ತುಂಬಿ ತಂದಳು. ಅವಳ ಮೂಗಿನಲ್ಲಿ ನತ್ತು, ಕಿವಿಗಳಲ್ಲಿ ಬೆಳ್ಳಿಯ ಮುರಗಿಗಳು ಜೋತಾಡುತ್ತಿದ್ದವು. ಆಕೆ ನೀರಡಿಕೆಯಿಂದ ಉಬ್ಬಸಪಡುವ ತನ್ನ ಗಂಡನ ಕಡೆಗೆ ನೋಡಿದಳು. ನಸುಕಿನಿಂದ ಆಕೆ ಮೂರುಸಲ ಬಂದು ರೊಟ್ಟಿ—ನೀರಿನ ವಿಷಯ ಕೇಳಿ ಹೋಗಿದ್ದಳು. ಈಗ ಒಮ್ಮೆಲೆ ಅವನಿಗೆ ಬಿಗಿದು ಹಿಡಿದ ಹಸಿವೆ-ನೀರಡಿಕೆಗಳ ನೆನಪು ಆಗಿತ್ತು. ಹೆಂಡತಿ ಭಟ್ಟಿಯಲ್ಲಿ ಭುಗಿಲಿಡುವ ನರಕದ ಬೆಂಕಿಯತ್ತ ನೋಡಿದಳು. ನೆಲದಮೇಲೆ ಹರಡಿದ್ದ ಕಪ್ಪು ಕುಷ್ಠದ ಕಲೆಗಳಂತಿದ್ದ ಲೋಹದ ತುಣಕುಗಳತ್ತ ನೋಡಿದಳು. ಮತ್ತು ಮೂಲೆಯಲ್ಲಿ ಬಿದ್ದ ಕರಿ ಮೋರೆಯ ಕೊಡಲಿಯಲಗು ಮತ್ತು

ದೊಣ್ಣೆಗಳತ್ತ ನೋಡಿದಳು. ಮತ್ತು ಎಷ್ಟೋ ಹೊತ್ತಿನವರೆಗೆ ಅವಳ ನೋಟ ತನ್ನ ಗಂಡನ ಮುಖಚರ್ಯೆಯ ಮೇಲೆಯೇ ಸುಳಿದಾಡುತ್ತ ಉಳಿಯಿತು—ಅವಳಿಗೆ ಅವನ ಗುರುತೇ ಸಿಗದಿರುವಂತೆ.

ದೀನಾ ಪೇಲೆಯ ನೀರನ್ನು ಒಂದು ಗುಟಕಿಗೇ ಕುಡಿದುಬಿಟ್ಟ.

"ಇನ್ನಿಷ್ಟು"—ಆತ ಏದುತ್ತ ಅಂದ. ಹೆಂಡತಿ ಇನ್ನೊಂದು ಪೇಲೆ ತುಂಬ ನೀರು ತಂದಳು. ಮತ್ತು ಆತ ನೀರುಕುಡಿಯುವದನ್ನು ನೋಡುತ್ತ ನಿಂತಳು.

"ಸಾಕು" ದೀನೂ ಅಂದ. ಅವನ ಹೊಟ್ಟೆ ಮತ್ತು ತಲೆಯ ಸಿಡಿದು ನಿಂತ ನರಗಳು ಸಡಿಲಾದವು. ಅವನ ಏದುವಿಕೆ ಮಂದವಾಯಿತು. ಆದರೆ ಅದೇ ಕ್ಷಣ ಅವನ ಮೋರೆಯಿಂದ ಒಂದು ನಾಚಿಕೆಯೋ ಅಸ್ವಸ್ಥತೆಯೋ ಹೊಳೆಯಿತು. ಆತ ಅಂದ, "ನನ್ನ ಕಡೆಗೆ ಹೀಗೇಕೆ ನೋಡುತ್ತೀ? ನನ್ನ ಸಂಗಡ ಮಾತಾಡುವದಿಲ್ಲವೇಕೆ? ಹೀಗೆ ದೂರ ಸರಿದು ನಿಂತಿದ್ದಿ ಏಕೆ?—ನನಗೆ ಪ್ಲೇಗಿನ ಗಂಟು ಒಡೆದಂತೆ!"

ಹೆಂಡತಿ ಏನೂ ಉತ್ತರಕೊಡಲಿಲ್ಲ. ಅವಳು ಸುಮ್ಮನೆ ಒಳಗಿನಿಂದ ಊಟ ಬಡಿಸಿಕೊಂಡು ತಂದಳು.

"ಲೇ—ನಾನು ನಿನ್ನ ಹತ್ತಿರ ಇದ್ದೇನೆ." ದೀನಾ ಹೆಂಡತಿಯ ಹೆಗಲು ಹಿಡಿದು ಅಲ್ಲಾಡಿಸಿದನು. "ನನ್ನ ಜತೆ ಮಾತೇಕೆ ಆಡುವದಿಲ್ಲ? ನೀನು ಬಾಯಲ್ಲಿ ಹುರಗಾಳು ಹಾಕಿಕೊಂಡಿದ್ದೀಯಾ?"

ಹೆಂಡತಿ ಆಗಲೂ ಸುಮ್ಮನಿದ್ದಳು.

ದೀನಾ ಒಂದು ರೊಟ್ಟಿ ಮುರಿದು ಕೆಲವು ದೊಡ್ಡದೊಡ್ಡ ತುತ್ತು ನುಂಗಿದನು. ಮತ್ತೆ ಒಳಗೆ ಹೋಗಲು ತುತ್ತು ಒಲ್ಲೆ ಎಂದವು. ಆತ ನೀರಿನ ಕೆಲವು ಕಹಿ ಗುಟುಕು ಕುಡಿದನು. ಮತ್ತು ರೊಟ್ಟಿಯ ಬುಟ್ಟಿ ನೂಕಿ ಅಂದನು,

"ನನ್ನ ಸಂಗಡ ಮಾತಾಡೂದಿಲ್ಲ. ಬರೇ ನೋಡುತ್ತ ನಿಂತಿದ್ದಿ—ನನಗೆ ದೆವ್ವವೋ, ಭೂತವೋ ಬಡಿದಂತೆ!"

"ಅಲ್ಲಾ ಹಾಗೆ ಮಾಡದಿರಲಿ." ಹೆಂಡತಿ ಅಂದಳು. "ಆದರೆ ನನಗೆ ಹಾಗೆಯೇ ಅನಿಸುತ್ತಿದೆ."

ದೀನಾನ ಬಾಯಿ ಆಶ್ಚರ್ಯದಿಂದ ತೆರೆಯಿತು. ಬಶೀರನ ತಾಯಿ ಹೀಗೆ ಮಾತಾಡುವಳೆಂದು ಅವನಿಗೆ ಆಸೆ ಇದ್ದಿಲ್ಲ. ಇಷ್ಟೆಲ್ಲ ದಿನಗಳ ಜಿದ್ದಿನ ಮೌನವನ್ನು ಅವಳು ಈರೀತಿ ಅಕಸ್ಮಾತ್ ಮುರಿದಿದ್ದಳು.

ಬಹಳ ಹೊತ್ತು ಆಶ್ಚರ್ಯ ಅವನನ್ನು ಸಾವರಿಸಿಕೊಳ್ಳಲು ಬಿಡಲಿಲ್ಲ. ಆದರೆ ಅರಿವು ಎಚ್ಚರ ಸೇರಿಯಾದಮೇಲೆ ಅವನು ಅಂದ, "ನಿನ್ನ ಮನಸ್ಸಿನ ಮಾತು ನಾನು ಬಲ್ಲೆ. ಆದರೆ ನಾನೇನು ಮಾಡಲಿ? ನಿನ್ನ ಹುಡುಗರೇ ನನಗೆ ಬದುಕಲು ಬಿಡುವದಿಲ್ಲ. ಇದೀಗ ಬಶೀರ ಹೇಳಿ ಹೋಗಿದ್ದಾನೆ. ನಾಳೆ ಸಂಜೆಯೊಳಗೆ ಐವತ್ತು ಕೊಡಲಿಯಲಗು

ತಯಾರಿಸಬೇಕೆಂದು. ನಾನು ತುಸು ಹಿಂದೆ ಮುಂದೆ ನೋಡಿದರೆ, ಮಾಡಿದರೆ ಅವ ನನ್ನ ಕುತ್ತಿಗೆಯನ್ನೇ ಏರಿ ಕೂಡ್ರುವವ. ನೀನು ಅದು ಇದು ಅನ್ನುವಿ. ಆದರೆ ನಾನು ಈ ಮಂದಿಯ ಮಾತನ್ನು ತುಸುವೂ ಅಲಕ್ಷ್ಯಮಾಡಿದ್ದೇ ಆದರೆ ಅವರು ನನ್ನನ್ನೇ ತುಂಡುತುಂಡು ಮಾಡಿ ಹಾಕುವರು, ನನ್ನ ಉಸಿರನ್ನೇ ಹೀರಿಬಿಡುವರು."

"ಆ ಹುಡುಗರು ನಿಮ್ಮವ್ರೋ ಬೇರೆಯವರವ್ರೋ?" ಬಷೀರನ ತಾಯಿ ಕೇಳಿದಳು. ಮತ್ತೆ ಅವಳು ಮನಸ್ಸಿನಲ್ಲಿಯೇ ತನ್ನ ಈ ಪ್ರಶ್ನೆಯ ಬಗೆಗೆ ನಾಚಿ ಹೋದಳು.

"ನನ್ನವರೇ" ದೀನಾ ಮೂರ್ಖನಂತೆ ಹೇಳಿದ.

"ಅಂದಾಗ ಅವರು ನಿಮಗೆ ಹೆದರಬೇಕೋ, ನೀವು ಅವರಿಗೋ?"

"ಮಾತಿಗೆ ಮಾತು ಬೆಳೆಯಿಸುವದು ನಿನಗೆ ಸುಲಭ." ದೀನಾ ಅಂದ, "ನಿನ್ನ ಹುಡುಗರು ಎಂಥ ರಾಕ್ಷಸರೆಂಬುದು ನಿನಗೆ ಗೊತ್ತೇ ಇಲ್ಲವೇನೋ! ಅವರ ಮುಂದೆ ಚಕಾರ ಶಬ್ದ ಆಡಲು ನನಗೆಲ್ಲಿ ಧೈರ್ಯ? ಅವರು ನನ್ನ ಚರ್ಮ ಜೀವಂತ ಸುಲಿಯಲಿಕ್ಕಿಲ್ಲವೇ?"

"ಅವರು ನನ್ನ ಹುಡುಗರೂ ಅಹುದು." ಹೆಂಡತಿಯ ಶಬ್ದಗಳಲ್ಲಿ ತುಸು ಮಿದು ಬಂದಿತು. "ನೀನೇ ನೋಡುವಿ, ಎಲ್ಲ ಹೊತ್ತೂ ಅವರು ಹೇಗೆ ನನ್ನ ಕಡಿದು ಹಾಕಲಿಕ್ಕೇ ಓಡುತ್ತಾರೆ. ಮಾತು ಮಾತಿಗೆ ಹೇಗೆ ನನ್ನ ಮೇಲೆ ಮುರಿದು ಬೀಳುತ್ತಾರೆ. ಆದರೆ ನಾನು ಅವರಿಗಾಗಿ ಕೊಡಲಿ ಅಲಗು ತಯಾರುಮಾಡುತ್ತ ಹೋಗೋದಿಲ್ಲ."

ದೀನು ಅಂದ, "ಹಾಗೆಂದರೇನು? ನಾನು ಕೊಡಲಿಗಳನ್ನೆ ತಯಾರಿಸುತ್ತೇನೆ ಮಾತ್ರ. ಮಂದಿಯನ್ನು ಕಡಿದು ಚಲ್ಲುತ್ತ ತಿರುಗುವದಿಲ್ಲ."

ಹೆಂಡತಿ ಅಂದಳು, "ಈ ಕೆಲಸ ಕಡಿದು ಹಾಕುವದಕ್ಕಿಂತ ಕೆಟ್ಟದ್ದು. ಕಡಿಯುವವ ಒಂದೋ ಎರಡೋ ಹೆಚ್ಚೆಂದರೆ ಐದು ಮಂದಿಯನ್ನು ಕಡಿಯುತ್ತಾನೆ. ನಿನ್ನ ಕೈಯಿಂದ ತಯಾರಾದ ಕೊಡಲಿ ಇಪ್ಪತ್ತುಗಟ್ಟಲೆ ಮಂದಿಯ ರುಂಡ ಉರುಳಿಸುತ್ತದೆ."

ದೀನಾನ ಬೆನ್ನು ಹುರಿಯಲ್ಲಿ ಒಂದು ನಡುಕು ಓಡಿತು. ಅವನ ರೋಮ ರೋಮ ನಿಮಿರಿ ನಡುಗಿದವು. ಎಷ್ಟೋ ಹೊತ್ತಿನವರೆಗೆ ಏನೂ ಮಾತಾಡಲು ಆಗಲಿಲ್ಲ ಅವನಿಗೆ. ಅವನ ದನಿ ತಿರುಗಿ ಬಂದ ಮೇಲೆ ಆತ ಅಂದ, "ನನಗೆ ಹೇಳುವಿ. ದಳಪತಿಗಳಾಗಿ ತಿರುಗುವ ತನ್ನ ಮಕ್ಕಳಿಗೆ ಹೇಳುವದಿಲ್ಲ. ಒಂದೊಂದು ರಾತ್ರಿ ಎರಡೆರಡು ಹಳ್ಳಿ ಹುಡಿ ಹಾರಿಸಿ ಬಿಡ್ತಾರೆ."

"ನನ್ನ ಮಾತು ಅವರು ಕೇಳುತ್ತಾರೋ ಅಥವಾ ನೀವು ಕೇಳ್ತೀರೊ?" ಹೆಂಡತಿಯ ಶಬ್ದಗಳು ಇನ್ನಿಷ್ಟು ಮಿದು ಆದವು. "ನಾನು ಯಾರಿಗೂ ಏನು ಹೇಳಲು

ಯೋಗ್ಯಳು ! ಪ್ರತಿಯೊಬ್ಬರೂ ತಮ್ಮ ತಮ್ಮ ಅಪರಾಧ ಉತ್ತರ ಕೊಡಲಿ. ನನಗೇನು ಅಗತ್ಯ—ಏನಾದರೂ ಹೇಳಲಿಕ್ಕೆ?"

ಕೆಲಹೊತ್ತು ಅವರಿಬ್ಬರೂ ಮಾತಿಲ್ಲದೆ ನೆಲದಕಡೆಗೆ ದಿಟ್ಟಿಸುತ್ತ ಉಳಿದರು.

ಒಮ್ಮೆಲೆ ಹೆಂಡತಿ ಅಂದಳು, "ನೀ ರೊಟ್ಟಿ ಏಕೆ ತಿನ್ನುವದಿಲ್ಲ ? ಹಸಿವೆಯಿಂದ ಒಣಗಿ ಹೋಗುವ ವಿಚಾರ ಉಂಟೋ ?" ಅವಳು ರೊಟ್ಟಿಗಳ ಬುಟ್ಟಿ ದೀನಾನ ಇದುರಿಗೆ ಸರಿಸಿ ಇಟ್ಟಳು.

ಹೊರಗಡೆಯ ಬಾಗಿಲಿನಲ್ಲಿ ನಿಧಾನವಾದ ಹೆಜ್ಜೆಯ ಸದ್ದು ಕೇಳಿಬಂತು. ದೀನಾ ದಿಗಿಲುಗೊಂಡು ದಿಗ್ಗನೆ ಎದ್ದು ಕುಳಿತ. ಅವನಿಗೆ ಗೊತ್ತು ಬಶೀರ ಮತ್ತು ಅವನ ಸಂಗಾತಿಗಳ ಹೊರತು ಬೇರೆ ಯಾರೂ ಇರಲಾರರು. ಅವರು ಅವನಿಗೆ ನೆನವು ಮಾಡಿಕೊಡಲಿಕ್ಕೇ ಬಂದಿರಬೇಕು. ಬಾಗಿಲ ಮಿಡದ ಮೇಲೆ ಇಟ್ಟ ಅವನ ಕೈ ಅನುಮಾನಿಸಿತು. ಆತ ಭಟ್ಟಿಯತ್ತ ನೋಡಿದ. ಭಟ್ಟಿ ಭಕ-ಭಕ ಉರಿಯುತ್ತಿತ್ತು. ಎಲ್ಲ ಸಾಮಾನೂ ಸರಿಯಾಗಿದ್ದವು. ಆತ ಮಿಡಕಳಚಿದ. ಶ್ರಾವಣ-ಭಾದ್ರಪದಗಳ ಮಳೆ ಸೆಳಕುಗಳಲ್ಲಿ ತೊಯ್ದ ಕದಗಳ ಮರಡುಗಳು ಚೀರಿಕೊಂಡವು.

ದೀನಾ ಹೆದರಿ ಒಳಗೆ ಓಡಿದನು. ಭಟ್ಟಿಗೆ ಜಪ್ಪಿಕೊಂಡು ಬೀಳುವದನ್ನು ಹೇಗೋ ತಪ್ಪಿಸಿಕೊಂಡನು. ಅವನ ಹೆಂಡತಿಯ ಮೈ ಬಣ್ಣ ಹತ್ತಿಯ ಹಿಂಜಿಯಂತೆ ಬಿಳುಪೇರಿತು. ಮತ್ತು ಅವಳ ಬಾಯಿಯಿಂದ ಅಂಕೆ ಮೀರಿ ಬಂದು ಚೀರು ಹೊರಟಿತು. ಬಾಗಿಲಲ್ಲಿ ಠಾಕುರ ದ್ವಾರಡದ (ಕೃಷ್ಣದೇವಸ್ಥಾನದ) ಪುರೋಹಿತರ ಮುದಿ ಹೆಂಡತಿ ನಿಂತಿದ್ದಳು. ಅರಸಿಣದಂಥ ಅವಳ ಹಳದಿ ಮುಖದ ಮೇಲೆ ನಿರಿಗೆಗಳ ಜಾಲವೇ ಹಬ್ಬಿತ್ತು. ಮತ್ತು ನರೆ ಬಿಳಿಗೂದಲಿನ ತಲೆ ಅಲ್ಲಾಡುತ್ತ ಇತ್ತು. ದೀನಾ ಮತ್ತು ಅವನ ಯಜಮಾನಿ ಹೆದರಿದ ಕಣ್ಣುಗಳಿಂದ ಆ ಮುದುಕಿಯ ಕಡೆಗೆ ನೋಡುತ್ತ ನಿಂತರು. ಅವಳು ಬದುಕಿದ್ದಾಗ ಹೇಗೋ ಹಾಗೆಯೇ ಕಾಣುತ್ತಿದ್ದಳು. ಆದರೆ ಈಗ ಅವಳು ಪ್ರೇತವಾಗಿಬಿಟ್ಟಿದ್ದಳು.

ಕೊನೆಗೊಮ್ಮೆ ದೀನಾನ ಹೆಂಡತಿ ಧೈರ್ಯಕಟ್ಟಿಕೊಂಡು ಅಂದಳು, "ಚಾಚೀ, ಪುರೋಹಿತಮ್ಮಾ, ನೀ ಇನ್ನೂ ಬದುಕಿ ಇದ್ದೀಯಾ ?" ಮುದುಕಿ ಏನೂ ಉತ್ತರ ಕೊಡಲಿಲ್ಲ. ಆಗಲೇ ದೀನಾನ ಹೆಂಡತಿಗೆ ನೆನಪಾಯಿತು. ಪುರೋಹಿತಮ್ಮನಿಗೆ ಕೂಗಿದರೇನೇ ಕೇಳಿಸುವದೆಂಬುದು. ಬಹುಶಃ ಸತ್ತಮೇಲೂ ಅವಳ ಈ ಕಿವುಡತನ ಸರಿ ಆಗಿದ್ದಿಲ್ಲವೇನೋ. ಮುದುಕಿಗೆ ಇನ್ನೂ ಹತ್ತಿರ ಬಂದು ಅವಳು ದನಿಯೇರಿಸಿ ಮತ್ತೊಮ್ಮೆ ತನ್ನ ಮಾತು ಆಡಿದಳು.

ಮಾತುಕೇಳಿ ಅರ್ಥವಾಗಿ ಮುದುಕಿಯ ಕಣ್ಣು ಮಿಂಚಿದವು: ಅವಳು ಅಂದಳು, "ನಿಮಗೆ ಕಾಣುವದಿಲ್ವೇ ? ನಾನು ಇನ್ನೂ ಜೀವಂತ ಇದ್ದೇನೆ, ಏಳು ದಿನ ನನಗೆ ಮೋಹರ (ವಿಷಮ ?) ಜ್ವರವೇರಿತ್ತು. ಒಳಗೆ ಕೋಣೆಯಲ್ಲ ನಾನು ಒಬ್ಬಳೇ

ಉರಿಯುತ್ತ ಬಿದ್ದುಕಿದೆ. ಯಾರೂ ನನಗೆ ಒಂದು ಗುಟುಕು ನೀರನ್ನೂ ಹಾಕಲಿಲ್ಲ. ಬಹಳ ದಿನ ಆಯ್ತು. ನಮ್ಮ ತುಳಸಿ ಹೊರಗೆ ಹೋಗಿದ್ದಾನೆ. ಅವನ ಬೆನ್ನಿಗೇ ನಾನು ಸತ್ತುಹೋಗುತ್ತಿದ್ದೆ. ಮನುಷ್ಯಂದು ಏನು ಹೇಳಲು ಬರುತ್ತದೆ? ಈ ಹೊತ್ತು ನನ್ನ ಜ್ವರ ಇಳಿಯಿತು. ನನಗೆ ಎದ್ದು ನಿಲ್ಲಲಿಕ್ಕೇ ಆಗುವದಿಲ್ಲ. ಆದರೆ ಹೇಗೋ ಮನಸ್ಸಿನಲ್ಲಿ ಧೈರ್ಯಮಾಡಿಕೊಂಡು ಇಲ್ಲಿಯ ತನಕ ಬಂದಿದ್ದೇನೆ. ನೀವೇಕೆ ಇಬ್ಬರೂ ಹೀಗೆ ಎಲ್ಲ ಕಳಕೊಂಡಂತೆ ಇದ್ದೀರಿ?"

ಮಾತಾಡುವುದರಿಂದಲೇ ಮುದುಕಿ ಬೆವರಿನಲ್ಲಿ ಅದ್ದಿಹೋದಳು, ಅವಳ ಉಸಿರು ಕಟ್ಟಿ ಕಟ್ಟಿ ಬರುತ್ತಿತ್ತು. ಅವಳು ಕಾಲಮೇಲೆ ಭಾರ ಹಾಕಿ ಅಲ್ಲಿಯೇ ನೆಲದಮೇಲೆ ಕೂತುಬಿಟ್ಟಳು. ಅವಳ ಕಣ್ಣಿನ ಗೊಂಬೆಗಳು ಪ್ರಜ್ಞೆ ಕಳೆದುಕೊಳ್ಳುವಂತೆ ಕಂಡವು. ಅವಳ ಪ್ರತಿಯೊಂದು ಶ್ವಾಸವೂ ಕೊನೆಯ ಶ್ವಾಸವೋ ಅನಿಸುತ್ತಿತ್ತು.

ದೀನಾ ಮತ್ತು ಅವನ ಯಜಮಾನಿ ವಿಚಿತ್ರ ಮರುಕದಿಂದ ಒಬ್ಬರನ್ನೊಬ್ಬರು ನೋಡಿದರು. ಅವಳು ಪುರೋಹಿತರ ಪತ್ನಿಯಾಗಿದ್ದಳು. ನಿಜ, ಆ ಪತ್ನಿಯ ಪ್ರೇತವಲ್ಲ. ಮೋಹರದ ಜ್ವರ ಅವಳನ್ನು ದುರ್ವಿಧಿಯಿಂದ ಪಾರುಮಾಡಿತ್ತು—ಊರಿನ ಜನರ ಮೇಲೆ ಕವಿದುಬಿದ್ದ ದುರ್ವಿಧಿಯಿಂದ, ಅವಳ ಕಿವುಡಿನಿಂದಾಗಿ ಊರಲ್ಲಿ ಮೊನ್ನೆರಾತ್ರೆ ರಕ್ತದ ಓಕುಳಿ ಆಡಿದ ಆ ದುರಂತದ ಸದ್ದು-ಸುಳಿವು ಕೂಡ ಅವಳ ಕಿವಿಗೆ ಬಿದ್ದಿದ್ದಿಲ್ಲ. ಅವಳಿಗೆ ಇನ್ನೂ ಗೊತ್ತಾಗಿದ್ದಿಲ್ಲ—ಅವಳ ಊರು ಈಗ ಪಾಕಿಸ್ತಾನದಲ್ಲಿ ಬಂದುಬಿಟ್ಟಿದೆಯೆಂಬುದು. ಅವಳಿಗ ಇನ್ನೂ ತಿಳಿದಿಲ್ಲ—ಪಾಕಿಸ್ತಾನ ತನ್ನ ಊರಿನಲ್ಲಿ ಹೊಕ್ಕುಬಿಟ್ಟಿದೆಯೆಂದು. ಮತ್ತು ಊರಿನೊಳಗಿನ ಕೆಲವು ಹುಡುಗಿಯರನ್ನು ಬಿಟ್ಟರೆ ಒಬ್ಬ ಸಿಖ್ಖನಾಗಲಿ ಹಿಂದುವಾಗಲಿ ಬದುಕಿ ಉಳಿದಿದ್ದಿಲ್ಲ. ಆ ಹುಡುಗಿಯರೂ ಪುಂಡುಗಾರರ ವಶದಲ್ಲಿ ಇದ್ದರು.

ಒಮ್ಮೆಲೆ ಪುರೋಹಿತರ ಹೆಂಡತಿ ಅಂದಳು, "ರೇ ದೀನೆಯ್ಯಾ, ನನ್ನ ಆಡಿನ ಮರಿಯನ್ನು ನೀನು ನೋಡಿದ್ದಿಯಾ ಎಲ್ಲಾದರೂ?" ಆಡಿನ ಮರಿ? ದೀನಾ ಆಲೋಚಿಸಿದ, ಈ ದಿನಗಳಲ್ಲಿ ಪುಂಡುಗಾರರ ತಂಡಗಳು ಕೈಗೆ ಸಿಕ್ಕಿದ ದನ-ಕುರಿಗಳನ್ನೆಲ್ಲ ಕರು-ಮರಿಗಳ ಸಮೇತ ಕೊಂದು ತಿಂದು ಜೀರ್ಣ ಮಾಡಿಬಿಟ್ಟಿದ್ದರು. ಈ ಪುರೋಹಿತಮ್ಮ ತನ್ನ ಆಡಿನ ಬಗ್ಗೆ ಒಳ್ಳೇ ಪ್ರಶ್ನೆ ಹಾಕುತ್ತಾಳಲ್ಲ?

ಮುದುಕಿ ಅನ್ನುತ್ತಲೇ ಇದ್ದಳು, "ಎಲ್ಲಿ ಓಡಿಹೋಯಿತೋ ಪತ್ತೆನೇ ಇಲ್ಲ. ಮೇಲೆ ಮತ್ತೆ ಅದು ಮರಿ ಹಾಕುವದಿತ್ತು. ನಾನು ಈಗ ನನ್ನನ್ನೇ ಸಂಭಾಳಿಸಲು ಆಗೂದಿಲ್ಲ. ಈಗ ಆಡನ್ನೆಲ್ಲಾ ಹುಡುಕುತ್ತ ತಿರುಗಲೆ? ಅಲ್ಲದೇ ಮತ್ತೆ ಅದು ನನ್ನ ಹಿಡಿತಕ್ಕೆ ಸಿಗುತ್ತದೆಯೇ? ದೇವರು ನಿನಗೆ ಒಳ್ಳೇದು ಮಾಡಲಿ. ನಿನಗೆ ಆ ಆಡು ಎಲ್ಲಾದರೂ ಕಣ್ಣಿಗೆ ಬಿದ್ದರೆ ತಂದು ಕಟ್ಟು. ನೋಡು, ಅದು ಹೆರಲು ಬಂದಿತ್ತು. ಅಲ್ಲಾ, ಎಲ್ಲಾದರೂ ಹೊರಗೆ ಅದು ಮರಿ ಹಾಕಿದರೆ?"

ದೀನಾ ಅಂದ: "ಅಮ್ಮಾ, ಎಲ್ಲೂ ಇಲ್ಲ ನಿಮ್ಮ ಆಡು, ಅದು ತಿಂದು ಹೋಯಿತು. ಅದನ್ನೂ ತಿಂದು ಮಂದಿ ತೇಗುತ್ತಿದ್ದಾರೆ." ಆದರೆ ಮುದುಕಿಗೆ ಅದೇನೂ ಕೇಳಿಸಲೇ ಇಲ್ಲ. ದೀನಾ ದನಿಯೇರಿಸಿ ತನ್ನ ಮಾತು ಮತ್ತೆ ಆಡಿದ. ಆದರೆ ಈ ಸಲ ಅವನ ಹೆಂಡತಿ ಅವನಿಗೆ ಸನ್ನೆಮಾಡಿ ಸುಮ್ಮನಿರಿಸಿದಳು.

"ಮತ್ತೆ ಇದ ನೋಡು," ಪುರೋಹಿತಮ್ಮ ಅಂದಳು, "ಈ ಸರಪಳಿ ನನಗೆ ನಮ್ಮ ಠಾಕುರದ್ವಾರದ ಮೆಟ್ಟಿಲ ಹತ್ತಿರ ಬಿದ್ದದ್ದು ಸಿಕ್ಕಿತು, ಆ ದೈವಗೆಟ್ಟ ಆಡು ಸರಪಳಿ ಹೇಗೆ ಕಡಿದುಕೊಂಡು ಹೋಯಿತ್ರೋ—ಗೊತ್ತಿಲ್ಲ. ಇದ ನೋಡಲ್ಲ, ಸರಪಳಿಯ ಕೊಂಡಿಯೇ ಕಿತ್ತು ಹೋಗಿದೆ. ಹೋಗಿ ದೀನಾಗೆ ಕೇಳಬೇಕು, ನನಗೆ ಈ ಸರಪಳಿ ಜೋಡಿಸಿ ಕೊಡು ಎಂದು ನಾನಂದುಕೊಂಡೆ."

ದೀನಾ ನೋಡಿದ, ಮುದುಕಿ ತನ್ನ ಕೈಯಲ್ಲಿ ಆಡನ್ನು ಕಟ್ಟಿಡುವ ಸರಪಳಿ ಎತ್ತಿ ಹಿಡಿದಿದ್ದಳು. ಅದು ನಡುವೆಯೇ ತುಂಡಾಗಿತ್ತು. ಆಡಿನ ಬೆನ್ನಮೇಲೆ ಬಿದ್ದ ಯಾರದೋ ಹರಿತವಾದ ಕತ್ತಿಯ ಪೆಟ್ಟಿಗೆ ಆ ಸರಪಳಿಯೂ ಎರಡು ತುಂಡಾಗಿತ್ತು.

ಬಹಳ ಹೊತ್ತಿನಿಂದ ದೀನಾನ ಹೆಂಡತಿ ಮುದುಕಿಯನ್ನು ಬೇರೊಂದೇ ನೋಟದಿಂದ ನೋಡುತ್ತಿದ್ದಳು. ಅವಳ ಒಳಒಳಗೆ ಏನೋ ತಿರುವು ಮುರುವು ನಡೆದಂತೆ ತೋರುತ್ತಿತ್ತು. ಕೊನೆಗೊಮ್ಮೆ ಅವಳ ಆಲೋಚನೆಗೆ ಒಂದು ಕಿಂಡಿ ತೆರೆಯಿತು, ಅವಳು ಅಂದಳು :

"ಚಾಚಿ ಪುರೋಹಿತಮ್ಮಾ, ನೀನು ನಮ್ಮ ಮನೆಯಲ್ಲಿಯೇ ಬಿದ್ದಿರು. ಅಲ್ಲಿ ಠಾಕುರದ್ವಾರದ ಒಬ್ಬಂಟಿಯಾಗಿ ಕೂತಿರುತ್ತೀ. ಮತ್ತೆ ಇಂದೇ ನಿನ್ನ ಜ್ವರ ಇಳಿದಿದೆ. ಇಲ್ಲಿಯೇ ನಿನ್ನ ಅನ್ನ ಬೇಯಿಸಿಕೋ. ಬೇಕಾದರೆ ಹೋಗಿ ನಿನ್ನ ಪಾತ್ರೆ ತಕ್ಕೊಂಡು ಬಾ. ನಿನ್ನ ಜಾತಿ ಹಿಂದೂ. ತುಲಸೀ ಬಂದರೆ ನೀನು ತಿರುಗಿ ಹೋಗಬಹುದು."

ಪುರೋಹಿತಮ್ಮನ ಕಿವುಡು ಮೊದಲಗಿಂತ ಹೆಚ್ಚಾದಂತೆ ಅನಿಸುತ್ತಿತ್ತು. ಅವಳ ಸದ್ಯದ ಜ್ವರದಿಂದ ಅವಳ ಕಿವಿಗಳ ಮೇಲೆ ಮುಚ್ಚಳ ಏರಿಸಿದಂತಿತ್ತು. ಇಷ್ಟು ಉದ್ದ ಮಾತಿನಲ್ಲಿ ಅವಳು ಬರೇ ತುಳಸೀ ಎಂಬ ಹೆಸರೊಂದನ್ನೇ ಕೇಳಿದಳು.

"ನಾನು ನಿಮಗೆ ಹೇಳಿದೆನಲ್ಲ ತುಲಸೀ ಹೊರಗೆ ಹೋಗಿದ್ದಾನೆ. ರಾಮೆಶಾಹನ ಮಗಳ ಮದುವೆಯ ನಿಶ್ಚಿತಾರ್ಥಕ್ಕಾಗಿ. ಅವನು ಸಂಬಂಧಿಕರಲ್ಲಿಗೆ ಹೋಗಿದ್ದಾನೆ. ಆಶ್ವಿಜದ ಮೊದಲನೇ ದಿನವೇ ಪ್ರೀತೊಳ ಮದುವೆಯ ಮುಹೂರ್ತವಿಟ್ಟಿದೆ. ನಾನು ಶಾಹನಿಗೆ ಅಂದೆ, ಈ ಸಲ ನನಗೊಂದು ಆಕಳನ್ನು ಸಂಕಲ್ಪ ಮಾಡಿ ಕೊಡು. ಅಲ್ಲದೆ ಮತ್ತೆ ಶಾಹರ ಮನೆಯಲ್ಲಿ ಮದುವೆ-ಲಗ್ನ ದಿನಾ ದಿನಾ ಆಗುವುವೇ ? ನೀನು ಸ್ವತಃ ಜಾಣಳಿರುವಿ. ತುಳಸಿಯದು ಒಣ ಜೀವ. ಮನೆಯಲ್ಲಿ ಹಾಲು ಮೊಸರಿನ ಮಜಾ ಏರಬಹುದು." ಮುದುಕಿಯ ಮಾತು ಕೇಳದಂತೆ ನಟಿಸಿ ದೀನಾನ ಹೆಂಡತಿಯು

ದೀನಾನ ಕಣ್ಣಿಗೆ ಕಣ್ಣು ಕೂಡಿಸುವ ಪ್ರಯತ್ನ ಮಾಡಹತ್ತಿದಳು. ಅವಳು ಏನೋ ಹೇಳಲು ಬಯಸುತ್ತಿದ್ದಳು. ಏನೋ ಚರ್ಚೆ ಮಾಡಲು ಬಯಸುತ್ತಿದ್ದಳು. ಆದರೆ ಅವಳು ಏನೂ ಹೇಳುವ ಮುಂಚೆಯೇ ದೀನಾ ಅಂದುಬಿಟ್ಟ.

"ನನಗೆ ನಿನ್ನ ಮನಸ್ಸಿನ ಮಾತು ಗೊತ್ತಾಗುತ್ತದೆ. ಆದರೆ ಈ ಮಾತು ನಮ್ಮಿಂದ ಪೂರ್ತಿ ಆಗಲಾರದು. ನನಗೆ ಏನೂ ಅಡ್ಡಿ ಇಲ್ಲ. ಆದರೆ ಅವಳನ್ನು ಅಂಥ ಯಾವ ಹಂಡೆಯಲ್ಲಿ ಅಡಗಿಸಿ ಇಡುವಿ? ಇದೀಗ ನಿನ್ನ ಹೊಟ್ಟೆಯಲ್ಲಿ ಹುಟ್ಟಿದವರು ನರಮನುಷ್ಯನ ನಾಶ! ನರಮನುಷ್ಯನ ನಾಶ! ಎನ್ನುತ್ತ ಬರುವರು. ನೀನು ಬಲ್ಲೆ. ಅವರಿಂದ ಯಾವ ಸಂಗತಿಯನ್ನೂ ಕದ್ದು ಮುಚ್ಚಿ ಇಡಲು ಸಾಧ್ಯವೇ ಇಲ್ಲ. ಅವರಿಗೆ ಈ ಹೊತ್ತೇ ಹತ್ತುವದು. ಆಮೇಲೆ ಅವರು ನಮಗೆ ಇಂಥ ದುರ್ಗತಿ ಕಾಣಿಸಬಹುದು—ಯಾರೂ ಎಂದೂ ಅಂಥ ಅವಸ್ಥೆಯನ್ನು ಕಾಣಿಸಿರಲಿಕ್ಕಿಲ್ಲ."

ದೀನಾನ ಹೆಂಡತಿ ಅಂಗಲಾಚಿ ಬೇಡಿದಳು, "ಮುದಿ ಜೀವ, ನಮ್ಮ ಊರ ಖತ್ರಿ ಜನರ ಒಂದು ಕುರುಹು. ಪುರೋಹಿತಮ್ಮಾ ಠಾಕೂರದ್ವಾರದಲ್ಲಿ ಅಲ್ಲಾನ ಹೆಸರು ಹೇಳುತ್ತಾಳೆ. ಒಂದೆರಡು ದಿನಗಳ ಮಾತು. ಅವಳ ಮಗ ಮರಳಿಬರುವ. ಆಗ ಅವರಿಬ್ಬರನ್ನೂ ದೂರ ಯಾವದೇ ಊರಿಗೆ ಕಳುಹಿಸಿಬಿಡೋಣ."

"ಯಾವ ಊರಿಗೆ ಕಳುಹಿಸುವಿ ಇವಳನ್ನು?" ದೀನಾ ಒದರಿ ಅಂದ. ಇವಳು ಬದುಕಿ ಉಳಿಯುವಂತೆ ಯಾವ ಊರು ಬಾಕಿ ಉಳಿದಿದೆ ಇನ್ನು? ಮತ್ತು ಇವಳ ಮಗ ಮರಳಿ ಬರುವದಿಲ್ಲ. ಯಾರೂ ಮರಳಿ ಬರದಂಥ ಸ್ಥಳಕ್ಕೆ ಅವನು ಹೋಗಿದ್ದಾನೆ. ನವೆಚಕ ಊರಿನ ಎಲ್ಲ ಖತ್ರಿಗಳು ಕೊಲ್ಲಲ್ಪಟ್ಟಿದ್ದಾರೆ. ಯಾವ ಬೀಜವೂ ಬದುಕಿ ಉಳಿದಿಲ್ಲ."

ಹೆಂಡತಿಯ ಮೋರೆ ಇಳಿದು ಹೋಯಿತು. ಅವಳು ನಡುಗುವ ಬೆರಳನ್ನು ತನ್ನ ತುಟಿಯ ಮೇಲೆ ಇಟ್ಟುಕೊಂಡು ಅಂದಳು, "ನೀನು ಮೆಲ್ಲಗೆ ಮಾತಾಡಬಾರದೇ? ಈಗ ಇವಳಿಗೆ ಕೇಳಿಸಿಯೇ ಬಿಡುವಿಯೋ—ಇವಳ ಮಗನನ್ನು ಕೊಂದಿದ್ದಾರೆಂದು?"

ಇಷ್ಟು ಹೊತ್ತು ಅವರು ಪಿಸುಗುಡುತ್ತಿದ್ದರು. ಆದರೆ ಅದರ ಅಗತ್ಯವೇನೂ ಇದ್ದಿಲ್ಲ. ಅವರು ಎಂಥ ಏರು ದನಿಯಲ್ಲಿ ಆಡಿದರೂ ಮುದುಕಿಗೆ ಅದೇನೂ ಕೇಳಿ ಬರುತ್ತಿದ್ದಿಲ್ಲ.

ಮುದುಕಿ ತನ್ನ ಜ್ವರದಿಂದ ಕಾದು ಕೆಂಪಾದ ಕಣ್ಣು ಅವರ ಮೋರೆಯಲ್ಲಿ ನಟ್ಟು ಸಿಡುಕು ತುಂಬಿದ ದನಿಯಲ್ಲಿ ಅಂದಳು.

"ನೀವಿಬ್ಬರೂ ಏನು ಗುಸುಗುಸು ಮಾಡುತ್ತಿದ್ದೀರಿ? ಮತ್ತೆ ದೀನೂ ನೀನಂತೂ ನನ್ನ ಕಡೆಗೆ ನೋಡುವದೇ ಇಲ್ಲ. ಎಲೋ ದೈವಗೆಟ್ಟವನೇ, ಇದನ್ನಿಷ್ಟು ಜೋಡಿಸಿ ಕೊಡು. ಇದೂ ಏನು ದೊಡ್ಡ ಕೆಲಸವೋ?"

"ನಾಳೆಗೆ ಬಾ ಅಮ್ಮಾ," ಮುದುಕಿಯ ಕಿವಿಗೆ ತನ್ನ ಬಾಯಿ ಅಂಟಿಸಿ ದೀನಾ ಗರ್ಜಿಸಿದ: "ಈ ಹೊತ್ತು ನನಗೆ ಪುರಸತ್ತು ಇಲ್ಲ. ಈಗ ನಿನ್ನ ಮನೆಯ ಹಾದಿ ಹಿಡಿ."

"ಒಳ್ಳೇದು." ಮಂಡಿಯ ಮೇಲೆ ಕೈಯೂರಿಕೊಂಡು ಮುದುಕಿ ಎದ್ದು ನಿಂತಳು. ಮತ್ತು ಮರಗುತ್ತ ಅಂದಳು. "ಎಳ್ಳೇನ. ನೀನು ನಾಳೆಗೆ ಎಂದೆ, ನಾಳೆಯೇ ಆಗಲಿ. ಆದರೆ ನನ್ನ ಆಡಿನ ಹಂಬಲವಿರಲಿ. ಇಕೋ ನಾನು ಹೇಳಿ ಹೋಗ್ತೇನೆ. ಆಡು ಕಣ್ಣಿಗೆ ಬಿದ್ದರೆ ಕಟ್ಟಿ ಇಡು. ಆ ದೈವಗೆಟ್ಟವಳು ಎಲ್ಲಿ ತಿರುಗಾಡ್ತಾ ಇದ್ದು ಬಿಟ್ಟದೆಯೋ ಯಾರಿಗೆಗೊತ್ತು?"

ದೀನಾನ ಮನೆಯಾಕೆ ಅವಳನ್ನು ತಡೆಯುವ ಮೊದಲೇ ಆ ಮುದುಕಿ ತತ್ತರಿಸುತ್ತ ಹೊರಗೆ ಓಣಿಯಲ್ಲಿ ನಡೆದು ಹೋದಳು.

ಈ ಮುದುಕಿ ಎಷ್ಟು ಹೊತ್ತು ಹಾಳು ಮಾಡಿಬಿಟ್ಟಳು! ಕೆಲಸದಲ್ಲಿ ಅಡ್ಡಿ, ಆದ್ದರಿಂದ ದೀನಾನಿಗೆ ಬಹಳ ಕೆಡಕು ಅನಿಸುತ್ತಿತ್ತು. ಇಷ್ಟು ಹೊತ್ತಿನಲ್ಲಿ ಆತ ಆರು ಕೊಡಲಿ ಅಲಗು ತಯಾರುಮಾಡುತ್ತಿದ್ದ. ಯಾವ ತಲೆಹರಟೆಗಳಲ್ಲಿ ತೊಡಗಿದಿಯೆಂದು ಬಶೀರಾ ಕೇಳುತ್ತಿದ್ದಿಲ್ಲ. ಅವನಿಗೆ ಐವತ್ತು ಕೊಡಲಿ ಅಲಗು ಲೆಕ್ಕ ಮಾಡಿಕೊಟ್ಟರೆ ಸರಿ.

ದೀನಾ ಎಣಿಸಿದ. ತಾನು ಕೆಲಸಕ್ಕೆ ಮತ್ತೆ ತೊಡಗಬೇಕೆಂತ. ಆದರೆ ಆತ ಹಾಗೆ ಮಾಡದಾದ. ಅವನ ಮನಸ್ಸಿನಲ್ಲಿ ಏನೋ ದುಗು ದುಗು ಹೊತ್ತಿತು. ಬಿಳಿಗೂದಲ ನಡುಗುವ ಜುಲ್ಪು. ಮತ್ತು ಜ್ವರ ಜಗಿದು ಬಿಟ್ಟ ಆ ಕಣ್ಣುಗಳ ನೆನಪು ಮತ್ತೆ ಮತ್ತೆ ಅವನ ಮನಸ್ಸನ್ನು ಮುತ್ತುತ್ತಿತ್ತು. ಬೆಂಕಿಯ ಎರಡು ಉಂಡೆಗಳಂತೆ ಆ ಕಣ್ಣುಗಳು ಅವನ್ನು ಬುದ್ಧಿಯ ಒಳಗೆ ಮುಸೆದು ಹೋದವು. ಅವನಿಗೆ ಎಲ್ಲಕ್ಕೂ ಹೆಚ್ಚು ಕಳವಳ ಪಡಿಸಿದ್ದು ಆ ಮುದುಕಿಯ ಮೈಮರವು. ಅವಳಿಗೆ ಏನೂ ಗೊತ್ತಿದ್ದಿಲ್ಲ, ಪತ್ತೆ ಇದ್ದಿಲ್ಲ. ತುಳಸೀ ಇನ್ನು ಎಂದಿಗೂ ಮರಳಿ ಬಾರನು. ಪ್ರೀತೋಳ ಮದುವೆಯ ಮುಹೂರ್ತ ಇನ್ನು ಎಂದೂ ಒದಗದು. ಪ್ರೀತೋಳನ್ನು ಅವಳ ತಂದೆಯ ಹವೇಲಿಯೊಂದಿಗೇ ಬಶೀರಾ ನೋಡಿಕೊಂಡಿದ್ದ—ಎಂಬುದನ್ನು ಅವಳು ಅರಿಯಳು.

ಬಶೀರಾ ಮಾಡಿದ ಈ ಕೆಲಸ ಬಹಳೇ ಕೆಟ್ಟದ್ದು. ಸೋದರಿಯರ–ಹುಡುಗಿಯರ ಮರ್ಯಾದೆ ಎಲ್ಲರ ನಿಧಿ. ಪರರ ಹೆಣ್ಣುಮಕ್ಕಳ ಮರ್ಯಾದೆ ತಮ್ಮ ಹೆಣ್ಣುಮಕ್ಕಳ ಮರ್ಯಾದೆಗೆ ಸರಿಸಮಾನ. ತಮ್ಮ ಹೆಣ್ಣುಮಕ್ಕಳ ಅವಮರ್ಯಾದೆಗೆ ನೆವ ಹೇಳುವವರು ಯಾರು?

ಒಮ್ಮೆಲೆ ದೀನಾನ ನೆನಪಿನಲ್ಲಿ ಒಂದು ಭಯಾನಕ ದೃಶ್ಯ ಎದ್ದು ಬಂದಿತು. ಪ್ರೀತೋ ಎದೆ ಬಡಕೊಂಡು ಕೂಗುತ್ತ ತನ್ನ ತಂದೆಯ ಹೆಣವನ್ನು ಅವಚಿ

ಕೊಂಡಿದ್ದಳು. ಮತ್ತು ಬಶೀರಾ ಅವಳ ಜಡೆಹಿಡಿದು ಅವಳನ್ನು ದರದರ ಎಳೆದು ಒಯ್ದನು. ಪ್ರೀತೋ ಹಲಬುತ್ತ ದುಂಬಾಲು ಬೀಳುತ್ತ ಅವನ ಹಿಂದೆ ಹಿಂದೆ ದರದರ ಒಯ್ಯಲ್ಪಟ್ಟಳು. ಮತ್ತು ಒಮ್ಮೆಲೇ ಅವಳು ಸುಮ್ಮನಾದಳು—ತಲೆ ಹೊಡೆಯುವ ಮುಂಚೆ ಕುರಿಯು ಸುಮ್ಮನಾಗುವಂತೆ.

ಮತ್ತು ದೀನಾ ಬಶೀರನ ತಂದೆ, ಬಾಗಿಲಲ್ಲಿ ತೆಪ್ಪಗೆ ನಿಂತು ಈ ನರಕದ ನೋಟವನ್ನು ನೋಡುತ್ತಿದ್ದ. ಆತ ಬಶೀರಾನಿಗೆ ಅಡ್ಡಿ ಮಾಡಲಿಲ್ಲ, ತಡೆಯಲಿಲ್ಲ. ಅವನ ಬೆನ್ನು ಹಿಡಿದು ನೆಲದ ಮೇಲೆ ಅಪ್ಪಳಿಸಲಿಲ್ಲ. ತನ್ನ ಮಗಳ ಮರ್ಯಾದೆ ಉಳಿಸಲಿಕ್ಕೆ ಆತ ಏನೇನೂ ಮಾಡಿದ್ದಿಲ್ಲ.

ಪ್ರೀತೋಳ ಅಚ್ಚುಗೆಂಪು, ಎಳೆ ಬಾಳೆಯಂಥ ಮುಖದ ಕಳೆ ದೀನಾನ ಕಣ್ಣುಗಳ ಇದಿರು ಕುಣಿಯಹತ್ತಿತು. ಅವಳ ಕೂಗಾಟ-ಚೀರಾಟ ಅವನ ಕಿವಿಯಲ್ಲಿ ಮೊಳಗಹತ್ತಿತು. ಒಮ್ಮೆಲೆ ಅವನ ಮೈಯಲ್ಲಿ ನಡುಕ ಹಬ್ಬಿತು—ಬಲು ಜೋರಾದ ನಡುಕ. ಆ ನಡುಕ ಹಿಮದಂಥ ತಣ್ಣಗಿನ ಸಾವಿನ ಸಂದೇಶವೋ—ಎಂದೆನಿಸುತ್ತಿತ್ತು. ಈ ನಡುಕ ದೂರಮಾಡುವ ಉಪಾಯ ಒಂದೇ—ಭಟ್ಟಿಯಲ್ಲಿ ಧಗಧಗಿಸುತ್ತಿರುವ ಕಬ್ಬಿಣದ ತುಂಡನ್ನು ಎತ್ತಿ ತನ್ನ ಎದೆಯಲ್ಲಿ ಅವಚಿಕೊಳ್ಳಬೇಕು—ಎಂದು ಅವನಿಗೆ ಅನಿಸಿತು. ಆದರೆ ಅವನ ತಲೆ ಹೇಗೆ ಉರಿಯುತ್ತಿತ್ತು! ಇಡೀ ಭಟ್ಟಿಯೇ ಅವನ ತಲೆಯಲ್ಲಿ ಹುಗಿದಂತೆ ಇತ್ತು. ಆತ ಎರಡೂ ಕೈಗಳಿಂದ ತನ್ನ ತಲೆಯನ್ನು ಒತ್ತಿ ಹಿಡಿದುಕೊಂಡನು. ಅವನ ಅಂಗೈಗಳು ಕಾವಿಗೆ ಸುಡುವಂತೆ ಇತ್ತು.

ಅವನಿಗೆ ಅನಿಸಿತು—ತಾನೀಗ ಹುಚ್ಚನಾಗುವೆ. ಏನಾದರೂ ಮಾಡಿ ಬಿಡುವೆ. ತಾನು ಅಲ್ಲಿಂದ ಎಲ್ಲಾದರೂ ದೂರ ಓಡಿ ಹೋಗಬೇಕು—ಈ ಸಂಗತಿಗಳಿಂದ ಬಲು ಬಲು ದೂರ. ಆತ ಮೆಲ್ಲಗೆ ಕಿಟಕಿಯನ್ನು ತೆರೆದನು. ಮತ್ತು ಹೊರಗೆ ಹಾರಿದನು. ಬಹಳ ಹೊತ್ತಿನವರೆಗೆ ಆತ ಗದ್ದೆಗಳಲ್ಲಿ ಯದ್ವಾ ತದ್ವಾ ಸುತ್ತಾಡಿದನು. ಮೂರನೆಯ ಪ್ರಹರ ಸಂಜೆಯಾಗಿ ಮಾರ್ಪಟ್ಟಿತು. ಕ್ಷಿತಿಜದ ಹತ್ತಿರವೇ ಯಾರೋ ಸೂರ್ಯನನ್ನೇ ಕೊಲೆ ಮಾಡಿಬಿಟ್ಟಿದ್ದರು. ಆಕಾಶವೆಲ್ಲ ಮುಗ್ಧ ಜೀವಿಗಳ ರಕ್ತದಿಂದ ರಂಗೇರಿತ್ತು. ಆ ರಕ್ತ ರಂಟೆಗಳ ಹೌದಗಳ ನೀರಿನಲ್ಲಿ ಗದ್ದೆಗಳ ಕಾಲುವೆಗಳಲ್ಲಿ ಬೆರೆತು ಹರಿದಿತ್ತು. ಇನ್ನು ಆ ಕಬ್ಬು ಯಾರು ಚೀಪುವರು?—ಅವುಗಳಲ್ಲಿ ಆ ರಕ್ತದ ಹನಿಗಳು ಸಿಡಿದಿವೆ. ಆ ಹತ್ತಿಯಬಟ್ಟೆ ಯಾರು ತೊಡುವರು?—ಅವುಗಳಿಗೆ ರಕ್ತದಲ್ಲಿಯೇ ನೀರೆರೆದಿತ್ತು. ರಕ್ತದಿಂದ ತೊಯ್ದ ಗದ್ದೆಗಳಲ್ಲ ಗೋಧಿಯ ಪೈರು ಹೇಗೆ ಬೆಳೆದೀತು?

ಅವನ ಕೈಯಿಂದ ತಯಾರಾದ ಕೊಡಲಿ ಕುಡುಗೋಲುಗಳಿಂದಲೇ ನಾಲ್ಕೂ ಕಡೆಗೆ ರಕ್ತ ಸಿಂಪಡಿಸಲಾಗಿತ್ತು. ಅವನ ಕೈಯಿಂದ ಮಾಡಿದ ಕತ್ತಿ—ದೊಣ್ಣೆಗಳಿಂದಲೇ ಎಲುಬು ಮಾಂಸಗಳ ಈ ಬೆಳೆ ಬಿತ್ತಲಾಗಿತ್ತು. ಮತ್ತು ಇನ್ನು ಎರಡೋ ಮೂರೋ ಹಳ್ಳಿಗಳು ಬದುಕಿದ್ದವು. ಅವುಗಳ ಬಗ್ಗೆ ಇದೀಗ ಆತ ಕೊಡಲಿ

ಅಲಗು ತಯಾರುಮಾಡಿಬಿಟ್ಟಿದ್ದನು. ನಾಳೆ ರಾತ್ರಿಯನಕ ಈ ಹಳ್ಳಿಗಳದೂ 'ಸಫಾಯಿ' ಆಗುವದಿತ್ತು.

ಅವನು ಅಪರಾಧಿ. ಕೇವಲ ಅಪರಾಧಿ. ಬಶೀರಾನ ತಾಯಿ.ಹೇಳಿದ್ದು ಸತ್ಯ—ತೀರ ಕಡಿಮೆಯೆಂದರೆ, ಹೊಸದಾಗಿ ತಯಾರಿಸಿದ ಕೊಡಲಿ ಕುಡುಗೋಲುಗಳನ್ನು ಬಶೀರಾ ಮತ್ತು ಅವನ ಸಂಗಡಿಗರ ಕೈಗೆ ಕೊಡಬಾರದಿತ್ತು. ಹಾಗೆ ಮಾಡಿದ್ದರಿಂದ ಅವನ ಅಪರಾಧಗಳ ಪ್ರಾಯಶ್ಚಿತ್ತವಾಗಲಾರದು. ಆದರೆ ಈಗ ಆತ ಮಾಡಬಹುದಾದರೂ ಏನು ?

ಆತ ಹೌಹಾರಿ ಊರಿನ ಕಡೆಗೆ ಓಡಿದನು. ಬಶೀರಾನ ಜನ ಬಂದು ಮುಟ್ಟುವ ಮುಂಚೆಯೇ ಆ ಕೊಡಲಿ ಅಲಗುಗಳನ್ನು ಎತ್ತಿ ಯಾವದೇ ಬಾವಿಯಲ್ಲೋ ಕೆರೆಯಲ್ಲೋ ಒಗೆಯಬೇಕೆಂದು ಆತ ಬಯಸಿದ. ಅವುಗಳ ಗೊತ್ತು-ಪತ್ತೆಯೇ ಅಲ್ಲಿ ಸಿಗಲಾರದು.

ಆತ ಊರ ಹತ್ತಿರಕ್ಕೆ ತಲುಪಿದಾಗ ರಾತ್ರಿ ಆಗಿಬಿಟ್ಟಿತ್ತು. ಸ್ನಿಗ್ಧ ತಿಂಗಳಿನ ಮಾಸಲು ಬೆಳಕು ಓಣಿಯ ಮನೆಗಳ ಮೇಲೆ ಮಸು-ಮಸುಕು ನೆಳಲುಗಳನ್ನು ಚೆಲ್ಲುತ್ತಿತ್ತು. ರಾತ್ರಿಯ ಮಳೆ ಸೆಳಕಿನಿಂದ ಓಣಿಯಲ್ಲಿ ಕೆಸರಾಗಿತ್ತು. ಅವನ ಕಾಲು ಮತ್ತೆ ಮತ್ತೆ ಕೆಸರಿನಲ್ಲಿ ಹುಗಿಯುತ್ತಿದ್ದವು. ಆದರೆ ಆತ ಭರದಿಂದ ಹೆಜ್ಜೆಹಾಕಿ ನಡೆಯುತ್ತಿದ್ದ. ಒಮ್ಮಿಂದೊಮ್ಮೆ ಆತ ತಡೆದು ನಿಂತನು. ತುಸು ದೂರದಿಂದ ದನಿಗಳು ಕೇಳಿಬರುತ್ತಿದ್ದವು. ಆ ದನಿಗಳು ಅವನ ಮನೆಯಿಂದಲೇ ಬರುತ್ತಿದ್ದವು. ಅಂದರೆ ಅವರು ಬಂದುಬಿಟ್ಟರೇ ? ಆತ ತೀರ ಕಟ್ಟಿಗಳಿಗೆಗೆ ಅಲ್ಲಿ ಬಂದು ಮುಟ್ಟಿದ್ದ. ಬಶೀರಾನ ಏಕಟಹಾಸ್ಯ ಈಗ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಮನೆಯ ಹೊರಗೆ ಯಾವದೋ ಭಾರವಾದ ವಸ್ತುವಿಗೆ ಅವನು ಅಪ್ಪಳಿಸಿದನು. ಮತ್ತು ಬೋರಲು ಬಿದ್ದನು. ಆತ ಏಳಲು ಯತ್ನಿಸಿದನು. ಆದರೆ ಏಳಲು ಆಗಲಿಲ್ಲ. ಏನೋ ಹಿಮದಂಥ ತಣ್ಣನೆಯ ವಸ್ತು ಅವನ ಕಾಲುಗಳನ್ನು ಅಂಟಿಕೊಂಡಿತು. ಆತ ಕಾಲು ಬಿಡಿಸಿಕೊಳ್ಳಲು ಯತ್ನಿಸಿದನು. ಆದರೆ ಕಾಲಿನ ಸುತ್ತಲೂ ಹಿಡಿತ ಇನ್ನೂ ಬಿಗಿ ಆಯಿತು. ಒಮ್ಮೆಲೆ ಆತ ಗಾಬರಿಗೆಟ್ಟ ಒಂದು ಸಾಶಂಕ ಭಯವು ಅವನ ಎದೆಯನ್ನು ಹೊಕ್ಕಿತು. ಅವನ ತಲೆಯಿಂದ ತಣ್ಣಗಿನ ಬೆವರು ಕೋಡಿ ಹರಿಯಹತ್ತಿತು. ತನ್ನ ಮೈಯ ಎಲ್ಲ ಬಲ ಹಾಕಿ ಆತ ಹಿಂದಿರುಗಿ ನೋಡಿದನು. ಬೆಳುದಿಂಗಳಲ್ಲಿ ಬಿಳಿಯ ಕೂದಲಿನ ಕೆಲವು ಜುಲ್ಪಿಗಳು ಅಲ್ಲಾಡುತ್ತಿದ್ದವು. ಮುದುಕಿಯ ಸಿರಿಗೆ ಬಿದ್ದ ತಲೆಯ ಮೇಲೆ ಕೊಡಲಿಯ ಉದ್ದ ಗಾಯವಿತ್ತು. ಮತ್ತು ಅದರ ಹೊರಬಿದ್ದ ಕಲ್ಲಿನಂತೆ ಮರವಟ್ಟ ಕಣ್ಣುಗಳು ಶಾಪ ಕೊಡುತ್ತಿದ್ದವು. ದೀನಾ ತನ್ನ ಕಾಲುಗಳತ್ತ ನೋಡಿದ. ಮುದುಕಿಯ ತೋಳುಗಳಲ್ಲಿ ಸಿಲುಕಿದ ಸರಪಳಿಯು ಅವನ ಕಾಲನ್ನು ಬಿಗಿದು ಹಿಡಿದಿತ್ತು.

ಅವನ ಬಾಯಿಯಿಂದ ಒಂದು ಚೀತ್ಕಾರ ಹೊರಟಿತು. ಮತ್ತು ಅವನು ಎಚ್ಚರ ತಪ್ಪಿದನು. ಆ ರಾತ್ರಿ ಅವನಿಗೆ ಜೋರಾಗಿ ಜ್ವರವೇರಿತು. ಇಡೀ ರಾತ್ರಿ ಆತ ಹೊರಸಿನಿಂದ ಮಾರೆತ್ತರಕ್ಕೆ ಹಾರುತ್ತಿದ್ದ. ಊರಿನ ಶೂನ್ಯಮೌನದಲ್ಲಿ ಇಡೀ ರಾತ್ರಿ ಅವನ ಬಡಬಡಿಕೆ ಮೊಳಗುತ್ತಿತ್ತು: "ನನಗೆ ಕೊಲ್ಲಬೇಡಿರಿ. ಕೊಡಲಿ ಹೊಡೆಯಬೇಡಿ. ನನ್ನ ಸೊಂಟದ ಈ ಸರಪಳಿ ಕಳಚಿ. ಅಯ್ಯೋ, ನನ್ನ ಮಗಳೆ! ನನ್ನ ಮಗಳಿಗೆ ಏನೂ ಆಗದಿರಲಿ! ಪ್ರೀತೋಳಿಗೆ ಏನೂ ಆಗದಿರಲಿ! ಅಯ್ಯೋ ಈ ಸರಪಳಿ! ಅಲ್ಲಾನ ಆಣೆ, ನನಗೆ ಕೊಡಲಿ ಹೊಡೆಯಬೇಡಿ! ನನ್ನ ಕೊಲ್ಲಬೇಡಿ!

## ಭಾಗ್ಯದ ಹಗ್ಗ

ಊರಿಗೆ ಊರೇ ಪರತಾಪೀ ಸಾಧುಗಾಗಿ ಕಾಯುತ್ತಿತ್ತು.—ತಮ್ಮ ಊರಿನಲ್ಲಿ ಅವನ ಚರಣಧೂಲಿ ಎಂದು ಬಿದ್ದೀತು. ಮತ್ತು ಅವನು ದನಗಳಿಗೆ ಎಂದು ಮಂತ್ರ ಮಾಡ್ಯಾನು ಎಂದು. ತೇಜೂ ಮಜಹಬಿಗಂತೂ ಹೀಗೆ ಅನಿಸಿತ್ತು. ತನ್ನ ದೈವದ ದಾರವೇ ಈ ಸಾಧುವಿನ ಕೈಯಲ್ಲಿದೆ. ಹೊಲವುಳ್ಳರ ಮೆಣಸಿನ ಬೆಳೆಯಲ್ಲಿ ಹೂವು ಬಂದಿತ್ತು. ಒಬ್ಬರು ತಮ್ಮ ಕಬ್ಬಿನ ಹೊಲದಲ್ಲಿ ಅಗೆತದ ಗೈತ ಮಾಡುತ್ತಿದ್ದರು. ಒಬ್ಬರು ತಮ್ಮ ಧಾನ್ಯದ ಸಸಿಗಳಿಂದ ಕಳೆ-ಕರಿಕೆ ಬೇರೆಮಾಡುತ್ತಿದ್ದರು, ತಿರುಗಿ ನಾಟಿ ಮಾಡುವ ಮುಂಚೆ. ಆದರೆ ತೇಜೂನ ಬಳಿಗೆ ಅವನ ಎಮ್ಮೆ-ಮಣಕದ ಹೊರತು ಬೇರೆ ಏನೂ ಇದ್ದಿಲ್ಲ.

ಊರಲ್ಲಿ ದಿನಾಲು ಕೆಲವು ದನಗಳು ಕಿವಿ ಸಡಿಲಾಗಿ ಜೋಲು ಬಿಡುತ್ತಿದ್ದವು. ಅವು ಹಸಿರು ಎಲೆಗಳನ್ನು ತಿನ್ನುವದನ್ನು ಬಿಡುತ್ತಿದ್ದವು. ಅವುಗಳ ಕಣ್ಣಿನಲ್ಲಿ ಮಡ್ಡಿ ಬರುತ್ತಿತ್ತು. ಮತ್ತು ಸ್ವಲ್ಪ ಹೊತ್ತಿನಲ್ಲಿಯೇ ಅವು ಬಾಯಿ ಕಳೆದು ನೊರೆ ಬಿಡಲು ಶುರುಮಾಡುತ್ತಿದ್ದವು. ಉಸಿರೆಳೆಯಲು ಕಷ್ಟವಾಗುತ್ತಿತ್ತು, ಗಂಟಲೇ ಕಟ್ಟಿ ಹಿಡಿದಂತೆ. ಜನರು ಬಹಳ ಉಪಾಯ ಮಾಡಿದರು. ಆದರೂ ಯಾವದೂ ಏನೂ ನಡೆಯಲಿಲ್ಲ. ಹೀಗಾಗಿ ಊರಿನ ಕೆಲವು ದನ ಸತ್ತು ಹೋದುವು.

ದೊಡ್ಡ ಅನ್ಯಾಯವೆಂದರೆ ಹಾಲು ಹಿಂಡುವ ಮತ್ತು ಪ್ರಾಯಕ್ಕೆ ಬಂದ ದನಗಳಿಗೇ ಈ ಬೇನೆ ಹಿಡಿಯುತ್ತಿತ್ತು. ದನಗಳ ಹಿಂಡಿನಲ್ಲಿ ಯಾವವು ಎಲ್ಲಕ್ಕಿಂತ ಹೆಚ್ಚು ಚೆಂದ ಕಾಣುತ್ತಿದ್ದವೋ ಅಂಥವುಗಳಿಗೇ ಈ ತೊಂದರೆ ಬಂದಿತ್ತು.

ಊರಿನ ಕೆಲವು ಮಂದಿ ಅಂದರು: ಈ ಸಾಧು ಬೇಡ, ಬಿಡಿ. ಈ ಸಲ ಬ್ಲಾಕಿನವರಿಗೆ ಬರೆದು ತಿಳಿಸಿ ಎಲ್ಲ ದನಗಳಿಗೂ ಮದ್ದು ಚುಚ್ಚಿಸಿರಿ.

ಹಳಬರು ಈ ಸಲಹೆಯನ್ನು ಏನೂ ಒಪ್ಪಲಿಲ್ಲ. "ಚುಚ್ಚುಮದ್ದು ದಾಗುಗಳಿಂದ ಏನೂ ಆಗುವಂತಿಲ್ಲ."

"ಸರಕಾರಿ ಕೆಲಸಗಳ ಮೊಸಳೆಯಗತಿ ತಮಗೆ ಗೊತ್ತೇ ಇದೆ."

"ಮೊದಲು ಇಡೀ ಹಳ್ಳಿಯವರ ಸಹಿ ಒಟ್ಟು ಹಾಕಬೇಕು. ಆ ಮೇಲೆ ಅರ್ಜಿ ಕಳುಹಿಸಲು ಓಡಾಡಬೇಕು!"

"ಎಷ್ಟು ದಿನ ಈ ಅರ್ಜಿ ಕಚೇರಿಗಳಲ್ಲಿ ಚಕ್ಕರು ಹೊಡೆಯುವದೋ. ಕೊನೆಗೂ ಕಳೆದ ವರ್ಷದಂತೆಯೇ ದನಗಳ ಡಾಕ್ಟರು ತಲೆ ಅಲ್ಲಾಡಿಸುತ್ತ ಹೇಳುವ "ಚುಚ್ಚಲು ಮದ್ದೇ ಇಲ್ಲ, ಎಲ್ಲ ಖರ್ಚಾಗಿ ಹೋಗಿದೆ."

ಕೊನೆಗೂ ಚುಚ್ಚು ಮದ್ದಿನ ಬಗ್ಗೆ ದನಿ ಎತ್ತಿದ ಮಂದಿಯೂ ಸಾಧುವಿಗೆ ಶರಣು ಹೋಗಲು ಸಿದ್ಧರಾದರು. ಆತ ಬಲು ಪ್ರತಾಪೀ ಮತ್ತು ಚಮತ್ಕಾರೀ ಸಾಧುವಾಗಿದ್ದ. ಈಗ ಆತ ಮುದುಕನಾಗಿಬಿಟ್ಟಿದ್ದ. ಆದರೂ ಜನ ಅನ್ನುತ್ತಿದ್ದರು. ಅವನ ಏರುಪ್ರಾಯದಲ್ಲಿ ಅವನ ಗುಡಾರಕ್ಕೆ ಬಂದ ಒಬ್ಬ ಪ್ರಾಯದ ಹೆಣ್ಣಿನೊಂದಿಗೆ ಅವನ ಹೆಸರು ಕೆಟ್ಟು ಹೋಗಿತ್ತು ಮತ್ತು ಈ ಅನರ್ಥವಾದ ಮೇಲೆ ಆ ಸಾಧುವು ತನ್ನ ಇಂದ್ರಿಯವನ್ನೇ ಕೊಯ್ದುಕೊಂಡಿದ್ದ !

ಇಂದು ಊರಿನ ಮುಂದಾಳು ಅದೇ ಸಾಧುವನ್ನು ಕರೆಯಿಸಿಕೊಳ್ಳಲಿಕ್ಕೆ ಹೋಗಿದ್ದನು.

ಮೊದಲು ಜನ ತಮ್ಮ ಸಹಜ ಸ್ವಭಾವದಲ್ಲಿಯೇ ತಮ್ಮ ದನಗಳಿಗೆ ಹೇಳುತ್ತಿದ್ದರು, "ನಿಂಗೆ ಹುಳ ಬೀಳಲಿ!" ಆದರೆ ಈಗ ಕೆಲವು ದಿನಗಳಿಂದ ಇಂಥ ಮಾತು ಯಾರೂ ಅನ್ನುತ್ತಿದ್ದಿಲ್ಲ.

ತೇಜೂ ಮಜಹಬಿಯು ಮೊದಲಿನಿಂದಲೂ ತನ್ನ ಮಣಕವನ್ನು ಸಾಕಿ ಸಲಹಿ ಆತ ಎಮ್ಮೆಯಾಗಿ ಮಾಡಿದನು. ಆತ ರೊಟ್ಟಿ ತಿನ್ನಲು ಕೂತಾಗ ಅವನ 'ಬಿಲ್ಲೊ' (ಮಣಕ) ಕಟ್ಟೆಯ ಹತ್ತಿರಕ್ಕೆ ಬರುತ್ತಿತ್ತು. ತೇಜೂ ಅದಕ್ಕೆ ಚಿಕ್ಕ ಚಿಕ್ಕ ತುತ್ತು ಉಣಿಸಿ ಮಕ್ಕಳಂತೆ ಪಾಲಿಸಿದ್ದನು. 'ಬಿಲ್ಲೊ' ಎಲ್ಲಿ ಹೋದರೂ ಅವನನ್ನು ಕಂಡೊಡನೆ 'ಅಂಬೆ' ಎಂದು ಕೂಗುತ್ತಿತ್ತು ; ಅದಕ್ಕೆ ಮನಸ್ಸಿನಲ್ಲಿಯೇ ಗೊತ್ತು, ಚೆತ್ತೇಶಾಹ ಸಾಲ ತೀರಿಸುವದಕ್ಕಾಗಿ ತೇಜೂನಿಗೆ ಒತ್ತಾಯ ಹಚ್ಚತೊಡಗಿದ್ದಾನೆ. ಆದ್ದರಿಂದ ಬಿಲ್ಲೋ ಮೂರುವರೆ ವರ್ಷ ಪ್ರಾಯಕ್ಕೆ ಒಂದು ಕರುವನ್ನು ಈಯಿತು.

ಚೇತೇಶಾಹ ಬಹಳ ಜೋರು ಹಚ್ಚಿದ್ದ—'ಬಿಲ್ಲೊ'ವನ್ನು ತನ್ನ ವಶಕ್ಕೆ ಮಾಡೆಂದು. ಅದಕ್ಕೆ ಬದಲಾಗಿ ಇಡಿಯ ಖಾತೆಯಮೇಲೆ ಅಡ್ಡಗೆರೆ ಎಳೆದು ಕೊಡಬಹುದೆಂದು. ಆದರೆ ತೇಜೂ ಆ ಎಮ್ಮೆಯ ಕೂದಲನ್ನು ಯಾರಿಗೂ ಕೊಡಲು ಸಿದ್ಧನಿದ್ದಿಲ್ಲ. ಆತ ಬಿಲ್ಲೋಗೆ ಕರು ಆದೊಡನೆ ಜಾಲೆ ಗೊಲ್ಲನಿಂದ ನೂರು ರೂಪಾಯಿ ಮುಂಗಡ ತೆಗೆದುಕೊಂಡು ಚೇತೇಶಾಹನ ಸಾಲದ ಒಂದು ಕಂತು ತೀರಿಸಿದನು. ಮತ್ತು ಅವನಿಗೆ ಭರವಸೆ ಆಯಿತು, ಒಂದೆ ಈಯ್ಗೆಯಲ್ಲಿ ಆಸಾಲ ಪೂರ್ತಿ ತೀರಿಸಬಹುದೆಂದು.

ಆದರೆ ಈಗ ಊರಲ್ಲಿ ಯಾರದೋ ಎಮ್ಮೆಕರು ಸುತ್ತುಹೋಗಿತ್ತು. ಮತ್ತು ಅವನ ಎಮ್ಮೆ ಹಾಲು ಹಿಂಡುತ್ತಿದ್ದಿಲ್ಲ. ಇನ್ನಾರದೋ ಎಮ್ಮೆ ಬೇನೆ ಬಿದ್ದಿತ್ತು. ತೇಜೂಗೆ ಭಾರಿ ಹೆದರಿಕೆ ಹುಟ್ಟಿಬಿಟ್ಟಿತು.—ಆದರೆ ಅವನಿಗೆ ಪರತಾಪೀ ಸಾಧುವಿನ ಮೇಲೆ ಬಹಳೇ ವಿಶ್ವಾಸವಿತ್ತು.

ಆ ಸಾಧುವಿಗೆ ಕರೆಯಲು ಹೋದ ಜನ ನಿರಾಶೆಯಿಂದ ತಿರುಗಿ ಬಂದರು. ಅವರ ಸಂಗಡ ಒಬ್ಬ ಸಾಧು ಬಂದನು. ಆದರೆ ಆತ ಪರತಾಪೀ ಅಲ್ಲ, ಅವನ ಒಬ್ಬ ದೊಡ್ಡ

ಶಿಷ್ಯ. ಪರತಾಪೀ ಸಾಧುವನ್ನು ಇವರಿಗೂ ಮುಂಚೆ ಬೇರೊಂದು ಊರಿನವರು ಕರೆದುಕೊಂಡು ಹೋಗಿಬಿಟ್ಟಿದ್ದರು.

ಇಡೀ ಊರಿನಲ್ಲಿ ಡಂಗುರ ಸಾರಲಾಯಿತು :

"ಬಾಂಧವರೇ, ದನಗಳಿಗೆ ಉಪಚಾರ ಮಾಡಲಿಕ್ಕೆ ಸಾಧುಗಳು ಬಂದಿದ್ದಾರೆ. ಪಂಚಾಯತದ ಅಪ್ಪಣೆ : ರಾತ್ರಿ ಹತ್ತು ಗಂಟೆಯಿಂದ ನಾಳೆ ನಸುಕಿನವರೆಗೆ ಊರಿನ ಎಲ್ಲ ದನಗಳ ಬಳಕೆ ತೆಗೆದುಕೊಳ್ಳಬಾರದು. ಆ ತನಕ ಯಾರೂ ದೀಪ ಹಚ್ಚಬಾರದು. ಬೆಂಕಿಯನ್ನೂ ಹೊತ್ತಿಸಬಾರದು. ಬಾವಿಯಿಂದ ನೀರು ಸೇದಬಾರದು. ಕೈಪಂಪು ನಡೆಯಿಸಬಾರದು. ಆಕಳು, ಎಮ್ಮೆ ಹಿಂಡಬಾರದು. ಊರಿಂದ ಯಾರೂ ಹೊರಗೆ ಹೋಗಬಾರದು. ಯಾರೂ ಒಳಗೆ ಬರಬಾರದು. ಈ ನಿಯಮವನ್ನು ಯಾರು ಮುರಿಯುತ್ತಾರೋ ಆತ ಇಡಿಯ ಊರಿಗೆ ದಂಡ ತೆರಬೇಕಾದೀತು. ಮೋರೆ ಕಪ್ಪುಮಾಡಿ ಅವನನ್ನು ಕತ್ತೆಯಮೇಲೆ ಕೂಡ್ರಿಸಿ ಮೆರೆಯಿಸಲಾದೀತು. ಮೇಲಾಗಿ ಅವನಿಂದ ಐವತ್ತು ರೂಪಾಯಿ ದಂಡವನ್ನೂ ಎತ್ತಲಾದೀತು. ಎಚ್ಚರಿಕೆ!"

ಸಾಧುವು ಚೇತೇಶಾಹನ ಅಂಗಡಿಯಿಂದ ಅರ್ಧ ಗಜ ಅಲವಾನು (ಕೆಂಪುಬಟ್ಟೆ) ತೆಂಗಿನಕಾಯಿ ಮತ್ತು ಇತರ ಸಾಮಗ್ರಿ ಡಬ್ಬಿತುಂಬಿ ಪಡೆದನು. ಆ ಶಾಹನೇ ಎರಡು ಸೇರು ಊರತುಪ್ಪದ ವ್ಯವಸ್ಥೆಮಾಡಿಸಿದನು. ಇದೆಲ್ಲ ಸಾಮಾನು ಸುಮಾರು ಇಪ್ಪತ್ತೈದು ರೂಪಾಯಿಯಷ್ಟು ಆಯಿತು. ಆದರೂ ಚೇತೇಶಾಹ ಒಳ್ಳೆಯ ಅರಳಿದ ಮೋರೆಯಿಂದ ಇದೆಲ್ಲ ಉದ್ದರಿಕೊಟ್ಟನು, ಬೆಳಗಿನವರೆಗೆ ಸಾಧುವಿನ ಬಳಿಗೆ ಗೋಧಿಯ ರಾಶಿ ಒಟ್ಟಿ ನಿಲ್ಲುವದು.

ಸಾಧುವು ಒಂದು ಹೊಸ ಕೊಡವನ್ನು ತರಿಸಿದನು. ಅದರ ತಳಕ್ಕೆ ಒಂದು ತೂತು ಮಾಡಿದನು. ಮತ್ತೆ ಒಂದು ತಪೇಲಿಯಲ್ಲಿ ಮಂತ್ರ ಹೇಳುತ್ತ ನೀರು ಮತ್ತು ಹಾಲನ್ನು ಹಾಕಿದನು. ನಾಲ್ಕೈದು ತರುಣರು ಆ ತಪೇಲಿ ಮತ್ತು ಕೊಡವನ್ನು ಎತ್ತಲಿಕ್ಕೆ ಆ ಸಾಧುವಿನ ಸುತ್ತಲೂ ನೆರೆದರು. ಸಾಧುವು ಆ ಪವಿತ್ರ ಹಾಲು ನೀರು ತಪೇಲಿಯೊಳಗಿಂದ ತೆಗೆದು ಕೊಡದಲ್ಲಿ ಹಾಕುತ್ತಿದ್ದನು. ಮತ್ತು ಆ ಕೊಡವನ್ನು ಊರ ಹೊರಗೆ ತಿರುಗಿಸಿ ಅವರು ಒಂದು ಗೆರೆಯನ್ನು ಎಳೆದರು.

ಈ ಗೆರೆ ದಾಟಿ ಯಾರೂ ಹೊರಗೆ ಹೋಗಕೂಡದು. ಒಳಗೆ ಬರಕೂಡದು. ಅದರೊಳಗಡೆ ಇರುವ ಎಲ್ಲ ಭೂತ-ಪಿಶಾಚಿ-ಚೌಡಿಗಳನ್ನು ಆ ಸಾಧುವು ತನ್ನ ತನ್ನ ಮಾಟದಿಂದ ಬೂದಿಯಾಗಿ ಮಾಡುವವನಿದ್ದನು. ಯಾವ ಚೌಡಿಯಾಗಲಿ ಭೂತವಾಗಲಿ ಹೊರಗಿನಿಂದ ಆ ಗೆರೆಯನ್ನು ದಾಟಿ ಬರುವದು ಶಕ್ಯವಿದ್ದಿಲ್ಲ. ಆದರೆ ಯಾವದೆ ಮನುಷ್ಯ ಅದನ್ನು ದಾಟಿದರೆ ಅವನೊಂದಿಗೆ ಅಂಥ ದೆವ್ವ-ಮೋಹಿನಿಗಳು ಒಳಗೆ ಬರುವ ಭಯವಿತ್ತು. ಇಂದು ಯಾರಿಗೆ ಗದ್ದೆಗೆ ನೀರು ಬಿಡುವ ಬಾರಿ

ಇತ್ತೋ ಅದು ನಡುರಾತ್ರಿಯಲ್ಲಿರಲಿ, ನಸುಕಿಗೆ ನಾಲ್ಕು ಗಂಟೆಗಿರಲಿ, ಅವರೆಲ್ಲ ಈ ಮೊದಲೇ ಊರಿಂದ ಹೊರಗೆ ಹೊರಟುಹೋದರು.

ಸಾಧುವು ಹವನ ರಚಿಸಿದನು. ಆತ ಮಂತ್ರವನ್ನು ಉಚ್ಚರಿಸುತ್ತಿದ್ದ ಮತ್ತು ಊರಶುಪ್ಪ ಇತರ ಸಾಮಗ್ರಿಗಳನ್ನು ಹೋಮದಲ್ಲಿ ಹಾಕುತ್ತಿದ್ದ. ಊರಿನ 'ಗುರುದ್ವಾರ' (ಸಿಖ್ಖರ ದೇವಾಲಯ), 'ಭಾಯಿ' ಮತ್ತು ದೇವಸ್ಥಾನದ ಪಂಡಿತರು ಆಚೆ-ಈಚೆಗೆ ಕೂತು ಪಾರಾಯಣ ಮಾಡುತ್ತಿದ್ದರು. 'ಭಾಯಿಗಳು' ಸೂರಾ ಒಂದು ಸಲ ಜಪ ನಡೆಯಿಸಿದ್ದರು.

ಜೂಟಿ-ಚುರುಕು ಜನರ ಐದು ತಂಡ ಮಾಡಲಾಯಿತು. ಒಂದೊಂದು ತಂಡವು ಒಂದೊಂದು ಪಾತ್ರೆ ಎತ್ತಿಕೊಂಡಿತು. ಸಾಧುವು ಹೋಮಕುಂಡದಿಂದ ಕೆಲವು ಕೆಂಡಗಳನ್ನು ಎತ್ತಿ ಆ ಪಾತ್ರೆಗಳಲ್ಲಿ ಹಾಕಿ ಅವುಗಳ ಮೇಲೆ ಹವನ ಸಾಮಗ್ರಿಗಳನ್ನು ಹರಡಿ ಮುಚ್ಚಿದನು. ಕಂಪೊಗೆಯುವ ಆ ಪಾತ್ರೆಗಳನ್ನು ಕೈಯಲ್ಲಿ ಹಿಡಿದು ಆ ತಂಡಗಳು ಊರಲ್ಲಿ ಬೇರೆ ಬೇರೆ ಕಡೆಗೆ ಚದರಿ ಹೋದರು.

ಎಲ್ಲ ಜನರೂ ಮನೆ ಬಾಗಿಲುಗಳನ್ನು ಮೊದಲೇ ತೆರೆದಿಟ್ಟಿದ್ದರು. ಎಲ್ಲಾದರೊಂದು ಬಾಗಿಲು ಅಪರೂಪಕ್ಕೆ ಮುಚ್ಚಿದ್ದರೆ ಆ ಜನ ಅದನ್ನು ತೆರೆಯಲು ಹಚ್ಚುತ್ತಿದ್ದರು. ಮತ್ತು ಅಲ್ಲಿಯ ದನಗಳಿಗೆ ಮೇವು ಇಡುವ ಹೌದಕ್ಕೆ ಹೊಗೆ ಕೊಟ್ಟು ಮುಂದೆ ಸಾಗುತ್ತಿದ್ದರು. ಜತೆಗೆ ಅವರು ಇನ್ನೂ ಒಂದು ಸಂಗತಿಯ ಮೇಲೆ ಕಣ್ಣಿಡುತ್ತಿದ್ದರು. ಯಾರಾದರೂ ಪಂಚಾಯತದ ಆಜ್ಞೆಯನ್ನು ಮೀರಿರುವರೋ ಏನು ಎಂದು.

ಎಲ್ಲರೂ ಬಶೀರ ಚಮಗಾರನ ಮೇಲೆ ಚುರುಕಾಗಿ ಕಾವುಲಿಡಲಿಕ್ಕೆ ಹೇಳಿದ್ದರು. ಏಕೆಂದರೆ ದನ ಸತ್ತರೆ ಆ ಮಾದಿಗನಿಗೆ ತುಂಬ ಲಾಭ. ಹೋಮದ ಹೊಗೆ ಕೊಡುವ ತಂಡ ಆ ಚಮಗಾರನ ಮನೆಗೆ ಹೋದಾಗ ಅವರು ಕಂಡರು: ಆ ಮನೆಯ ಎರಡೂ ಬಾಗಿಲುಗಳು ತೆರೆದಿದ್ದವು. ಮತ್ತು ಆತ ಎಚ್ಚರಾಗಿಯೇ ಇದ್ದ. ಆತ ಅಂದ: "ಅಣ್ಣಗಳಿರಾ, ನೀವು ಬೇಕಾದಾಗ ಬಂದು ನಿಮ್ಮ ಸಂಶಯ ದೂರ ಮಾಡಿಕೊಳ್ಳಬಹುದು. ನಾನೇನೂ ಊರ ದ್ರೋಹ ಕಟ್ಟಿಕೊಳ್ಳವವನಲ್ಲ."

ಅತ್ತ ಹವನ ಮತ್ತು ಜಪ-ಪಾಠ ಇಡೀ ರಾತ್ರೆ ನಡೆಯಿತು. ಇತ್ತ ಈ ತಂಡಗಳು ಇಡೀ ರಾತ್ರೆ ಊರ ಪ್ರತಿಯೊಂದು ಮನೆಗೆ ಗಸ್ತು ಹಾಕುತ್ತ ಉಳಿದರು. 'ಅಮೃತವೇಳೆ' (ಉಷಃಕಾಲ) ಯ ವರೆಗೆ ಎಲ್ಲ ಕೆಲಸ ಪೂರ್ತಿ ಆಯಿತು. ನಸುಕು-ನಸುಕಿಗೆ ಸಾಧುವು ಹರಕೆ ಪ್ರಾರ್ಥನೆ ಮಾಡಿದನು. ಮತ್ತು ಇಡಿಯ ಊರ ದನಗಳಿಗೆ ಈ ಪ್ರಸಾದ ಉಣಿಸುವ ವೇಳೆ ಆಯಿತು.

ಸಾಧುವಿನ ಇದುರಿಗೆ ಹಾಲು ನೀರು ತುಂಬಿದ ಭಾರಿ ದೊಡ್ಡ ಕಡಾಯಿಯೊಂದು ಇಟ್ಟಿತ್ತು. ಊರ ದನಗಳೆಲ್ಲ ಇಲ್ಲಿ ತಲುಪಲಿಕ್ಕೆ ಹಾದಿಯ ದೊಡ್ಡ

ಮುರುವನ್ನು ಸುತ್ತು ಹಾಕಿ ಬರಬೇಕಿತ್ತು. ಆ ಮುರುವಿನಲ್ಲಿ ಓಣಿಗೆ ಅಡ್ಡವಾಗಿ ಇಪ್ಪತ್ತು ಹೊಸ ಮಡಿಕೆಗಳನ್ನು ಹಗ್ಗಕ್ಕೆ ಕಟ್ಟಿ ಇಟ್ಟಿದ್ದರು.

ಪ್ರತಿಯೊಬ್ಬನಿಗೂ ಭಾರಿ ಆತುರ, ಅವನ ದನ ಮೊದಲು ಪ್ರಸಾದ ಉಂಡು ಹೋದರೆ ಅವನಿಗೆ ಬಿಡುವು ಸಿಗುವದು. ಪ್ರತಿಯೊಂದು ಜಾತಿಯ ಎಮ್ಮೆಯೂ ಅಲ್ಲಿಂದ ಹಾದು ಹೋದವು. ಎಲ್ಲಕ್ಕೂ ಮೊದಲು ಹಾಲು ಹಿಂಡುವ ಎಮ್ಮೆ, ಆಮೇಲೆ ಮಣಕ, ಪಂಚಕಲ್ಯಾಣಿಸಿವಾರಿ, ಕುಂಡಿಜೂರ ಮುಂತಾದವು. ನಾಲ್ಕೂ ಕಡೆಗೆ ಗದ್ದಲವೇ ಗದ್ದಲ. ಯಾರದೋ ಎಮ್ಮೆ ಕಾಣೆ ಆಯಿತು. ಯಾರದೋ ಮಣಕ ಕಳೆದು ಹೋಯಿತು. ನಾಲ್ಕೂ ಕಡೆಗೆ ಧೂಳೀ ಧೂಳು. ಪ್ರತಿಯೊಂದು ಕುಟುಂಬ ದಿಂದ ಒಬ್ಬೊಬ್ಬ ತನ್ನ ಕಡಗೋಲು, ಲೋಟಾ ಮತ್ತು ಒಂದು ಪಾವು ಗೋಧಿ ಉಡಿಯಲ್ಲಿ ಕಟ್ಟಿಕೊಂಡು ತಂದಿದ್ದನು.

ದನಗಳು ಸಾಧುವಿನ ಹತ್ತಿರ ತಲುಪಿದಾಗ ಆ ಸಾಧುವೂ ಅವನ ರಾತ್ರಿಯ ಸಂಗಡಿಗರಾದ ' ಭಾಯಿ ' ಪಂಡಿತರೂ ನೀರಿನಲ್ಲಿ ದರ್ಭೆ ಅದ್ದಿಸಿ ಅದ್ದಿಸಿ ದನಗಳ ಮೇಲೂ ಕಡಗೋಲುಗಳ ಮೇಲೂ ಚಿಮುಕಿಸುತ್ತಿದ್ದರು. ಒಬ್ಬನು ಎಲ್ಲ ಮಂದಿಯ ಮೇಲೆ ಸ್ವಲ್ಪಸ್ವಲ್ಪ ಪವಿತ್ರ ಜಲವನ್ನು ಸಿಂಪಡಿಸುತ್ತ ನಡೆದಿದ್ದನು. ಈ ನೀರು ಪಡೆದು ಎಲ್ಲ ಜನರೂ ತಮ್ಮ ಉಡಿಯಲ್ಲಿ ಕಟ್ಟಿತಂದ ಗೋಧಿಯನ್ನು ಒಂದು ರಾಶಿಯ ಮೇಲೆ ಒಗೆದು ಹೋಗುತ್ತಿದ್ದರು. ಬೆಳೆಪಾಲಿನ ವೇಳೆಯ ರೈತನ ಪೈರಿನ ರಾಶಿಯಷ್ಟು ದೊಡ್ಡದಾಯಿತು.

ಊರ ಎಲ್ಲ ದನಗಳೂ ಪ್ರಸಾದ ಭೋಗಿಸಿ ಹೋದಮೇಲೆಯೇ ಮನೆ ಮನೆ ಗಳಲ್ಲಿ ಒಲೆ ಹೊತ್ತಿದವು. ಪೊಸರಲ್ಲಿ ಕಡಗೋಲುಗಳು ನಿಂತವು ಮತ್ತು ಬಾವಿಯ ರಾಟೆಗಳು ಶುರುವಾದವು. ಇದಕ್ಕೂ ಮೊದಲು ಸಾಧುವು ಕೂತಲ್ಲಿ ದೊಡ್ಡ ಜಾತ್ರೆ ನೆರೆದಂತಿತ್ತು; ಉಳಿದ ಊರೆಲ್ಲ ಹಾಳು ಬಿದ್ದಂತೆ ನಿರ್ಜನವಾಗಿತ್ತು—ಅಲ್ಲಿ ಯಾರೋ ರಾಕ್ಷಸ ಬಂದು ಉತ್ಪಾತವೆಬ್ಬಿಸಿ ಹೋದಂತೆ.

ಸಾಧುವಿನ ಹತ್ತಿರ ಸುಮಾರು ಮೂವತ್ತು ಮಣ ಗೋಧಿ ಒಟ್ಟಾಯಿತು. ಚೇತೇಶಾಹನಿಂದ ತಂದ ವ್ಯಾಪಾರ ಮತ್ತು ತುಪ್ಪದ ಬದಲು ಅವನಿಗೆ ಎರಡು ಮಣ ಗೋಧಿ ಕೊಟ್ಟು ಉಳಿದ ಗೋಧಿಯನ್ನು ಎರಡು ಚಕ್ಕಡಿಗಳಲ್ಲಿ ಹೇರಿಕೊಂಡು ಆತ ತನ್ನ ಬಿಡಾರದತ್ತ ಹೊರಟುಹೋದನು.

ಒಂದು ತಂಡ ಹರನಾಮಾ ಹೊಲೆಯನನ್ನು ಹಿಡಿದು ತಂದಿತು. ಅವನ ಮೇಲೆ ಪಂಚಾಯತದ ಆಜ್ಞೆಯನ್ನು ಮುರಿದ ಆಪಾದನೆ ಇತ್ತು. ಆತ ಎಲ್ಲ ದನಗಳು ಹೊರಟು ಹೋಗುವ ಮುಂಚೆಯೇ ಜಳಕ ಮಾಡಿದ್ದನು.

"ಇಲ್ಲ, ಇದು ತೀರ ಸುಳ್ಳು. ನನ್ನ ದನಗಳಿಗೆ ಪ್ರಸಾದ ಉಣಿಸಿ ನಾನು ಮಿಂದು ಬಂದೆ. ಬೇಕಾದರೆ ಸಾಧುಗಳಿಗೇ ಕೇಳಿರಿ—ಏನೂ ಸಂದೇಹವಿಲ್ಲ."

"ಸಾಧುಗಳು ಹೊರಟುಹೋದಮೇಲೆ ಇವನು ಈ ಸೋಗು ಮಾಡು ತ್ತಿದ್ದಾನೆ!"

"ಸಾಧುಗಳಿಗೇನು ಗೊತ್ತು? ಅವರ ಮುಂದೆ ಸಾವಿರಾರು ಪಶುಗಳು ಮತ್ತು ಹಲವಾರು ಜನಗಳು ಹಾದು ಹೋದರು. ಅವರು ಯಾರಾರನ್ನು ಗುರುತಿಸಬಲ್ಲರು?"

"ನಡೆ, ನಾವು ಒಪ್ಪುತ್ತೇವೆ. ನಿನ್ನ ದನಕ್ಕೆ ಪ್ರಸಾದ ಕೊಟ್ಟಮೇಲೆಯೇ ನೀನು ಸ್ನಾನ ಮಾಡಿದಿ. ಆದರೆ ಆ ತನಕ ಊರ ಎಲ್ಲ ದನಗಳೂ ಪ್ರಸಾದ ಭೋಗಿಸಿ ಆಗಿತ್ತೋ?"

ಹರನಾಮನಿಗೆ ಈ ಸವಾಲಿಗೆ ಯಾವ ಉತ್ತರವೂ ತೋಚಲಿಲ್ಲ. ಒಂದು ಹೆಣ್ಣು ಕತ್ತೆ ತರಲಾಯಿತು.

ಒಬ್ಬ ಇಸಮು ಮನೆಗೆ ಓಡಿ ಬಂಡಿಯ ತಳದ ಮಸಿಯನ್ನು ತಂದನು.

ಅದೇ ಆಗ ಹರನಾಮನನ್ನು ಕತ್ತೆಯ ಮೇಲೆ ಕುಳ್ಳಿರಿಸಿ ಒಂದೆರಡು ಸುತ್ತು ತಿರುಗಿಸಿದಿಲ್ಲ, ಅಷ್ಟರಲ್ಲಿ ಇನ್ನೊಂದು ತಂಡ ಓಡುತ್ತ ಓಡುತ್ತ ಬಂದಿತು.

"ಕತ್ತೆಯನ್ನು ಇಲ್ಲಿಯೇ ಹಿಡಿದಿಡಿರಿ. ಭಾರಿ ದೊಡ್ಡ ಹುಂಜ ಸಿಕ್ಕಿ ಬಿದ್ದಾನೆ"

"ರಾಮಸುಂದರ ರಾತ್ರೆ ದೀಪ ಉರಿಸಿದ್ದ."

"ದೀಪವೇನು? ಮಿಂಚಿನ ಬಲ್ಬು!"

ರಾಮಸುಂದರ ಊರಿನ ಅಳಿಯ. ಅವನು ಇಲ್ಲಿ ಕಿರಾಣಿ ಅಂಗಡಿ ತೆರೆದಿದ್ದ. ಒಳ್ಳೆ ಪ್ರಾಮಾಣಿಕ ಮತ್ತು ಓದು ಬರಹ ಬಲ್ಲ ಮನುಷ್ಯ. ಕಾಂಗ್ರೆಸ್ ವಿಚಾರದವನಾದ್ದರಿಂದ ಕೆಲವು ರೈತರು ಅವನನ್ನು ಸರಕಾರೀ ಬಾಲಬಡಕನೆಂದು ಭಾವಿಸು ತ್ತಿದ್ದರು. ಮತ್ತು ಅವನಿಗೆ ಶತ್ರುಗಳಿದ್ದರು. ಖಾದಿಯ ಬಿಳಿಯ ಬಟ್ಟೆ ತೊಟ್ಟು ಆತ ಎಲ್ಲೋ ಹೊರಗೆ ಹೊರಟಿದ್ದ. ಅಷ್ಟರಲ್ಲಿ ತಂಡವು ಅವನನ್ನು ಹಿಡಿಯಿತು.

ರಾಮಸುಂದರ ಬೆವರಿಂದ ಮುದ್ದೆ ಆದ. ಎಲ್ಲರ ಮುಂದೆ ನಿಂತು, "ನನ್ನ ಕತ್ತೆಯ ಮೇಲೆ ಕೂಡ್ರಿಸಬೇಡಿ, ಬೇರೆ ಯಾವ ಶಿಕ್ಷೆಯನ್ನಾದರೂ ಕೊಡಿರಿ." ಮತ್ತು ಆತ ನಡುಗುವ ಕೈಯಿಂದ ಹತ್ತು ಹತ್ತು ರೂಪಾಯಿಯ ಐದು ನೋಟು ಎಣಿಸಹತ್ತಿದ.

"ಇವಂಗೆ ನೋಡಿಯಾದರೂ ನೋಡಿ. ಕತ್ತೆಯ ಮೇಲೆ ಕೂಡ್ರಿಸ ಬಾರದಂತೆ; ಏಕೆ ನಿನಗೇನು ರೆಕ್ಕೆ ಮೂಡಿ ಬಂದಾವೇ?"

ಸುತ್ತಲೂ ಜನ ಕಿಕ್ಕಿರಿದರು. ಯಾರ ದನಗಳು ಸತ್ತಿದ್ದವೋ ಅಂಥವರಿಗೆಲ್ಲ ವಿಪರೀತ ಸಿಟ್ಟು ಬಂದಿತ್ತು.

"ಘೋರ ಅನ್ಯಾಯ! ಊರೆಂಬ ಯಾವ ಋಣಾನುಬಂಧವೇ ಉಳಿದಿಲ್ಲ!"

"ಮರ್ಯಾದೆಯೆಂಬುದೇ ಮುಗಿದುಹೋಯಿತು. ಆದ್ದರಿಂದಲೇ ಇವೆಲ್ಲ ರೋಗ-ರುಜಿನ ಹಬ್ಬುತ್ತಿವೆ!"

"ಆಚಾರಭ್ರಷ್ಟ ಬ್ರಾಹ್ಮಣರೂ ಮತ್ತೆ ಈ ಹೊಲೆಯರೂ ಅನ್ಯಾಯ ಎಬ್ಬಿಸಿ ಬಿಟ್ಟಿದ್ದಾರೆ. ಸಾವಿರ ಸಾವಿರ ರೂಪಾಯಿಯ ಎಮ್ಮೆ ಸಾಯಹತ್ತಿವೆ. ಆದರೆ ಈ ಮಂದಿಯ ಕಿವಿಯಮೇಲೆ ಹೇನು ಹರಿದದ್ದೂ ಗೊತ್ತಾಗುವದಿಲ್ಲ ಇವರಿಗೆ!"

ಕಿಳ್ಳಿಕೇತ ಪೋರರ ತಂಡ ಒಮ್ಮೆ ಕತ್ತೆಯನ್ನು ಒಮ್ಮೆ ರಾಮಸುಂದರನನ್ನು ಹುರ್- ಹುಶ್ ಮಾಡಹತ್ತಿತು. ಜನಸಂದಣಿಯಲ್ಲಿ ಮಂದಿ ಅವನನ್ನು ಬರಿದೆ ಹೊಡೆದು ಬಿಡುತ್ತಿದ್ದರು.

ಇಬ್ಬರು ಹಿರಿಯರು ನಡುವೆ ಬಿದ್ದರು, "ಪೋರರೇ, ಇವ ಊರ ಅಳಿಯ. ಇವರಿಗೆ ಮಾಫೀ ಮಾಡಿರಿ."

"ನೋಡಿಯಾದರೂ ನೋಡಿ, ಊರ ಅಳಿಯ! ಅಳಿಯನಾದರೆ ಲೋಭೀ ಬ್ರಾಹ್ಮಣನಿಗೆ. ನಮಗೇನೂ ಇವನ ಸಂಬಂಧವಿಲ್ಲ."

"ಹಾಂ, ಭಾವಯ್ಯಾ ಆಗತಾನೆ!"

"ಐವತ್ತರ ಬದಲು ಅರವತ್ತು ವಸೂಲ ಮಾಡಿರಿ. ಆದರೆ ಕತ್ತೆಯ ಮೇಲೆ ಏರಿಸಬೇಡಿರಿ."

"ಯಾಕೆ, ಹರನಾಮ ಮನುಷ್ಯನಲ್ಲವೇ? ಅವನನ್ನು ನಾವು ಕತ್ತೆಯ ಮೇಲೇರಿಸಿಲ್ಲವೇ?"

"ನಾವು ಈ ಬಿಳಿಯಂಗಿಯ ಪರಿವೆ ಮಾಡುವವರಲ್ಲ, ದೇವರ ಮುಂದೆ ಎಲ್ಲರೂ ಸಮಾನ!"—ಒಬ್ಬ ಕಾಮರೇಡ ಅಂದನು. ಬಂತಾಜಾಟನು ಮೊದಲು ಕಾಮರೇಡರ ಪಾರ್ಟಿಯಲ್ಲಿ ಇದ್ದವನು. ಒಮ್ಮೆ ಕಿಸಾನರ ದೌಡಿನಲ್ಲಿ ಜೈಲಿಗೂ ಹೋಗಿ ಬಂದಿದ್ದ. ಆದರೆ ಪಾಕಿಸ್ತಾನವಾಗುವಾಗ ಊರಿನ ಮುಸಲಮಾನರ ಸೊತ್ತು ಲೂಟಿ ಮಾಡಿದ ನಿಮಿತ್ತ ಆತ ಕಾಮರೇಡರ ಪಾರ್ಟಿಯಿಂದ ಹೊರಬಿದ್ದ. ಈಗ ಆತ ಗಡಿಯಲ್ಲಿ ಕಳ್ಳಪೇಟಿ ಮಾಡುತ್ತಿದ್ದ; ಆದರೆ ಊರಲ್ಲಿ ಎಲ್ಲ ಜನ ಆಗಲೂ ಅವನಿಗೆ 'ಕಾಮರೇಡ' ಎಂದೇ ಕರೆಯುತ್ತಿದ್ದರು.

"ಅಚ್ಛಾ, ಹೀಗೇ ಮಾಡೋಣ—ಹರನಾಮನನ್ನೇ ಕೇಳಿ ನೋಡೋಣ. ಆತನೇ ಮಾಫಿ ಮಾಡಿದರೆ ನಮ್ಮ ಕಡೆಯಿಂದ ಅದೇ ಸರಿಯೆಂದು ತಿಳಿಯೋಣ."

ಹರನಾಮನನ್ನು ಕರೆಯಿಸಲಾಯಿತು. ಅವನ ಮೋರೆಯಿಂದ ಬಂಡಿಯ ಮಸಿ ಇನ್ನೂ ಪೂರ್ತಿ ಇಳಿದಿದ್ದಿಲ್ಲ. ಮಂದಿ ನಗಹತ್ತಿದರು.

ಹರನಾಮ ರೇಗಿ ಕೂಗಿದ, "ಅಣ್ಣಗಳಿರಾ, ನನ್ನ ಇಜ್ಜತ್ತು ಇವನ ಇಜ್ಜತ್ತಿಗಿಂತ ಕೀಳು-ಕಡಿಮೆ ಎಂದು ಇದ್ದರೆ, ಅಡ್ಡಿ ಇಲ್ಲ, ಅನುಮಾನವಿಲ್ಲದೆ ಇವನನ್ನು ಮಾಫಿ ಮಾಡಿಬಿಡಿ. ಆದರೆ ನನ್ನ ಅವನ ಇಜ್ಜತ್ತು-ಮರ್ಯಾದೆ ಸರಿ ಸಮಾನವೆಂದು ಭಾವಿಸುತ್ತೀರೋ—ಹಾಗಾದರೆ ನನಗೆ ಕೊಟ್ಟ ಶಿಕ್ಷೆಯನ್ನೇ ಇವನಿಗೂ ಕೊಡಿ!"

ಜನರು ರಾಮಸುಂದರನ ಮೇಲೆ ಮುರಿದು ಬಿದ್ದರು. ಕಿರಾತಪೋರರು ದೊಡ್ಡ ಗಲಭೆ ಎಬ್ಬಿಸಿದರು. ಕತ್ತೆಯ ಮೇಲೆ ಮತ್ತೆ ಕಂಬಳಿ ಕಟ್ಟಲಾಯಿತು.

ಇಬ್ಬರು ಹಿರಿ ಮುದುಕರು ರಾಮಸುಂದರ ಊರ ಅಳಿಯನೆಂದು ಸಾರಿದೂರಿ ಅವನ ಮೋರೆಗೆ ಕಪ್ಪು ಬಳಿಯುವದಕ್ಕೆ ಆ ಹುಡುಗರಿಂದ ವಿನಾಯತಿ ಪಡೆದರು. ರಾಮರೇಡ ಮತ್ತು ಅವನ ಸಂಗಡಿಗರು ರಾಮಸುಂದರನನ್ನು ಎತ್ತಿ ಕತ್ತೆಯ ಮೇಲೆ ಕೂಡ್ರಿಸಿದರು. "ಇವನ ಮೂತಿಗೆ ಕಪ್ಪು ಬಳಿಯುವ ಅಗತ್ಯವೇ ಇಲ್ಲ. ನೋಡಿ, ಅದು ಮೊದಲಿಸಿಂದಲೇ ಎಷ್ಟು ಕಪ್ಪಾಗಿ ಹೋಗಿದೆ!"

"ಎನ್ರೀ ಲಾಲಾ, ಯಾವ ಧಾರಣೆಗೆ ಮಾರಲಾಗುತ್ತೆ?"

"ಈಗ ಕೇಳಿಸಲ್ಲ—ಪತ್ರಿಕೆಗಳ ಸುದ್ದಿ ಏನಾದರೂ. ಹೇಗೆ ಬಾಯಿ ಚಪ್ಪರಿಸಿ ಚಪ್ಪರಿಸಿ ತನ್ನ ಸರಕಾರದ ಗುಣಗಾನ ಮಾಡುತ್ತಿರುತ್ತಾನೆ!"

ಮಧ್ಯಾಹ್ನದ ಈ ಉಪದ್ರವ ಮುಗಿಯಿತು ಎಂದಾಗ ಊರಿನ ಎರಡು ಎಮ್ಮೆಗಳು ಸತ್ತ ಸುದ್ದಿ ಬಂದಿತು.

ಚಿಟ್ಟೆಯ ಮೇಲೆ ಕೂತು ಜನ ಚರ್ಚೆ ಶುರುಮಾಡಿದರು.

"ಈ ಆಜ್ಞೆಮೀರುವವರು ನಿಯಮ ಮುರಿಯುವವರು ಪೂರಾ ಇಲಾಜು ಮಾಡಲು ಕೊಡುವದೇ ಇಲ್ಲ. ಅಂದಾಗ ಈ ರೋಗ ನಿಲ್ಲುವದಾದರೂ ಹೇಗೆ?"

"ನಾನು ಮೊದಲೇ ಅಂದಿದ್ದೆ, ಸಾಧೂನ ಬಿಡಿರಿ. ಡಾಕ್ಟರರಿಂದ ಮದ್ದು ಚುಚ್ಚಿಸಿರಿ ಎಂದು."

"ಇಂಥ ಪಾಷಂಡಿ ಸಾಧು. ಬರಿದೆ ಸಾಧುಗಳ ಹೆಸರನ್ನು ಕೆಡಿಸ ಹತ್ತಿದ್ದಾನೆ. ಪರತಾಪೀ ಸಾಧುವಿನ ಇದಿರು ಯಾರೂ ಬರಲಾರರು."

"ರಾತ್ರಿ ಈ ಸಾಧು ನಡುನಡುವೆ ಕೂರುತ್ತಿದ್ದ. ನಮ್ಮ ನೆರೆಮನೆಯ ಭಾಯಿ ಹೇಳುತ್ತಿದ್ದ."

"ಅಹ್ಹಾ, ಶುದ್ಧ ಅಧರ್ಮದ ಖರೀದಿ ಆಯಿತು"—ಸಾಧುವನ್ನು ತರಲು ಹೋದವರಲ್ಲಿ ಒಬ್ಬ ಅಂದನು.

"ಆದರೆ ದಾನದ ಗೋಧಿಯಲ್ಲಿ ಎರಡು ಮಣ ಗೋಧಿ ಆತ ಚೇತೇ ಶಾಹನಿಗೆ ತುಪ್ಪ-ಗಿಪ್ಪ ಎಂತ ಬೇರೆ ವ್ಯಾಪಾರದ ಬಾಬತ್ತು ಏಕೆ ಕೊಟ್ಟು ಹೋದ? ಊರು ದಾನಕ್ಕ ಕೊಟ್ಟ ವಸ್ತು ಊರಿನಲ್ಲಿ ಎಳ್ಳಷ್ಟಾದರೂ ಹೀಗೆ ಉಳಿದರೆ ಪುಣ್ಯವೆಲ್ಲಿಂದ ಬರಬೇಕು?"

ಇಷ್ಟು ಬುದ್ಧಿ ಕಂಜರ ಚೇತೂನಲ್ಲಿ ಆದರೂ ಇರಬೇಕಿತ್ತು. ಅವನೇಕೆ ಈ ಗೋಧಿ ಇಟ್ಟುಕೊಂಡ? ಹಣವೇನು ಓಡಿಹೋಗುತ್ತಿದ್ದಿಲ್ಲ. ನಾಳೆ-ನಾಡಿದ್ದು ಹೋಗಿ ಅವನ ಬಿಡಾರದಿಂದ ತರಬಹುದಿತ್ತು. ಬಿಡಾರವೇನು ವಿಲಾಯತಿಯಲ್ಲಿದೆಯೋ?"

ಈ ಅಂಗಡಿಕಾರರ ಬುದ್ಧಿಯೇನು ಕೇಳುತ್ತೀ ? ಇದೊಳ್ಳೆಯ ಮಾತು. ಇವರಿಗೆ ತಮ್ಮ ಹಣ ಒಂದೇ ಗೊತ್ತು. ಇನ್ನೊಬ್ಬರು ಬೇಕಾದರೆ ವಿಧವೆ ಆಗಲಿ, ಈ ಕೀಳು ಮಂದಿ ತಮ್ಮ ಹಣ ವಸೂಲಿ ಮಾಡುವವರೇ."

"ನಾನು ಇನ್ನೊಂದು ಮಾತು ಕೇಳಿದೆ. ಕೃಷ್ಣದೇವಸ್ಥಾನದ ಮುಂದಿನ ರಸ್ತೆಯ ಚೌಕಿನಲ್ಲಿ ರಾತ್ರಿ ಗೂಳಿಯ ತಲೆಯನ್ನು ಇಟ್ಟು ಒಬ್ಬ ಹೆಂಗಸು ಸ್ನಾನ ಮಾಡಿ ಹೋದಳು !"

ಯಾರೊಬ್ಬ ಸಾಧೂ ಮಕ್ಕಳನ್ನು ಪಡೆಯುವ ವಿಧಿ ಹೇಳಿರಬೇಕು. ಯಾವದೇ ಹೆಣ್ಣಿಗೆ ಯಾರಾದರೂ ಮಾಟ-ಮೋಡಿ ಮಾಡಿದ್ದರೆ ಎಲುಬುಗಳ ರಾಶಿಯೊಳಗಿಂದ ಗೂಳಿಯ ತಲೆ ತಂದು . . ."

ಯಾರದೋ ವಿಲಾಪದ ದನಿ ಕೇಳಿಸಿತು. ಹತ್ತಿರ ಬಂದಾಗ ಗೊತ್ತಾಯಿತು, ತೇಜೂ ಮಜಹಬೀ ಶೋಕದಿಂದ ಹುಚ್ಚನಾಗಿ "ಅಯ್ಯೋ ನನ್ನ ಬಿಲ್ಲೋಽ! ಅಯ್ಯೋ ! ನನ್ನ ಬಿಲ್ಲೋಽ!" ಎಂದು ಕೂಗುತ್ತ ಹೋಗುತ್ತಿದ್ದ.

ಬಹಳೇ ಕಷ್ಟದಿಂದ ಆತ ಪೂರ್ತಿ ಸಮಚಾರ ಹೇಳಿದ, "ಹೊರಗೆ ಮೇಯಲು ಹೋಗಿ ಬಂತು, ಕಿವಿ ಜೋಲು ಬಿದ್ದವು . . . ಕಣ್ಣಲ್ಲಿ ಜಿಡ್ಡು. ಅಳುಮೋರೆ . . . ನನ್ನ ಕೈಯಿಂದ ರೊಟ್ಟಿಯ ತುತ್ತೂ ತೆಗೆದುಕೊಳ್ಳಲಿಲ್ಲ . . . ಅಂಬಾಽ!" ಅಂದಿತು. ಅದಕ್ಕೆ ಊರ ತುಪ್ಪಾನೂ ಕೊಟ್ಟೆ. ಆದರೆ ಅದು ಹಾರಿ ಒಂದು ಕಡೆ ಹೋಗಿ ಬಿತ್ತು . . . ಭಾರೀ ಡಂದ ಎಮ್ಮೆ ಆಗಿತ್ತು . . . ನಾ ನನ್ನ ಬಿಲ್ಲೋಳ ಕೂದಲೂ . . ."

ಎಲ್ಲ ಜನ ತೇಜೂನಿಗೆ ತುಂಬ ಸಹಾನುಭೂತಿ ತೋರಿಸಿದರು. ದೇವರ ಇಚ್ಛೆ-ಒಪ್ಪಿಕೊಳ್ಳಲು ತಿಳಿಸಿ ಹೇಳಿದರು.

"ನನ್ನ ಮತವೇನೆಂದರೆ, ಪರತಾಪೀ ಸಾಧೂ ಹೊರತು ಊರಿನ ಆಪತ್ತಿ ದೂರವಾಗುವಂತಿಲ್ಲ. ಅವನ ಮಹಿಮೆಯೇ ಅಪಾರ!—ತನ್ನ ಇಂದ್ರಿಯವನ್ನೇ ಕೊಯ್ದುಕೊಂಡಿದ್ದ !"—ನರಪಂಚನು ದೊಡ್ಡದನಿಯಲ್ಲಿ ಅಂದನು.

"ನನ್ನ ಮಾತು ಕೇಳುವದಾದರೆ, ಈಗಲೇ ಪರತಾಪೀ ಸಾಧೂನ ತರಲಿಕ್ಕೆ ಜನ ಕಳುಹಿಸಿ. ನಾಳೆ ಮುಂಜಾವಿನ ತನಕ ದೂಡಿದರೆ ನಿನ್ನೆಯ ಹಾಗೆಯೇ ಬೇರೆ ಯಾರಾದರೂ ಬಂದು ಅವನನ್ನು ಸಂಗಡ ಕರೆದುಕೊಂಡು ಹೋಗಬಹುದು."

ಊರಿಗೆ ಊರೇ ಪರತಾಪೀ ಸಾಧೂನ ಪ್ರತೀಕ್ಷೆಮಾಡುತ್ತಿದ್ದರು—ಅವನ ಪಾದಧೂಳಿ ಈ ಊರಿನಲ್ಲಿ ಎಂದು ಬಿದ್ದೀತು ಮತ್ತು ಅವರ ದನಗಳಿಗೆ ಆತ ಮಂತ್ರೋಪಚಾರ ಮಾಡ್ಯಾನು—ಎಂದು. ಆದರೆ ಈಗ ತೇಜೂ ಮಹಜಬೀಗೆ ಯಾರ ಪ್ರತೀಕ್ಷೆಯೂ ಇದ್ದಿಲ್ಲ. ಅವನು ಯಾರಿಗಾಗಿಯೂ ಕಾಯುವದು ಉಳಿದಿಲ್ಲ. ಅವನ ಭಾಗ್ಯದ ಹಗ್ಗ ಕಿತ್ತುಹೋಗಿತ್ತು . . .

# ಮೋತೀ

"ಇಕೋ ನಿನಗೆ ಮೋತಿಯನ್ನು ಕೊಡುವೆ," ಉದಾಸನಾದ ದಿತ್ರೆಯು ಮೆಲ್ಲಗೆ ಹತ್ತಿರಕ್ಕೆ ಬಂದು ಸುಮಾರು ಹತ್ತು ದಿನದ ಹಾಲಿನಂತೆ ಬೆಳ್ಳನೆಯ ನಾಯಿಮರಿಯನ್ನು ಹೆಂಡತಿಯ ಕಾಲಿನತ್ತ ಸರಿಸುತ್ತ ಅಂದನು.

ಕಟ್ಟೆಯಮೇಲೆ ಕೂತ ರಕ್ಷೀಯು ದಿಗ್ಗನೆಮೆ ಮುದುಡಿಕೊಂಡಳು "ಮೋತೀ?" ಅವಳ ಈ ಚೀರು ದ್ವೇಷಪೂರಿತವೆನಿಸಿತು.

ಆದರೆ ಆ ಮರಿಯ ಕಣ್ಣು ನೋಡಿದಾಗ, ಅವಳಿಗೆ ಅವು ಮದ್ಯ ತುಂಬಿದ ಕುಪ್ಪಿಗಳಂತೆ ಜೇನಿನ ಹೂಜಿಗಳಂತೆ ಕಂಡವು. ಮರುಕ್ಷಣಕ್ಕೇ ಆಕೆ ಕುನ್ನಿಯನ್ನು ತನ್ನ ಹೊಟ್ಟೆಗೆ ಅವುಚಿಕೊಂಡಳು.

ದೇಶದ ವಿಭಜನೆಯ ಸಮಯ ಕೊಲೆ-ಕಡಿತಗಳ ಅಶುಭವಾರ್ತೆಗಳು ಹಬ್ಬಲು ಶುರುವಾಯಿತು. ಮಂದಿ ಗಂಟು-ಮೂಟೆ ಗುಡಿಚಾಪೆ ಕಟ್ಟಿಕೊಂಡು ಅತ್ತಿತ್ತ ಓಡಹತ್ತಿದರು. ಆಗ ಒಬ್ಬ ಜೀವದ ಗೆಳೆಯನು ಆತ್ಮೀಯತೆಯಿಂದ ದಿತ್ರೆಗೆ ಸಲಹೆಯಿತ್ತನು, "ನೀನೂ ಹೊರಟಿದ್ದು ಹೋಗು ಪಾಕಿಸ್ತಾನಕ್ಕೆ." ಆದರೆ ಕಾರೆಮುಳ್ಳಿನಂತೆ ಚುಚ್ಚುವ ಅಸಹ್ಯ ಬಯ್ಗುಳಿಂದ ಅವನನ್ನು ಬಯ್ದುರಂಬಂತೆ ದಿತ್ರೆ ಕತ್ತು ಸೆಟ್ಟಗೆ ಮಾಡಿ ನೋಡತೊಡಗಿದ. ಅವನ ತಂದೆ ಇಲ್ಲಿ ಇದ್ದ. ಅಜ್ಜ ಇಲ್ಲಿ ಇದ್ದ. ಅಜ್ಜನ ತಂದೆ, ಅಜ್ಜ ಇಲ್ಲಿ ಇದ್ದರು. ಅವರ ಮಣ್ಣು ಗೋಧಿ ಆಯಿತು, ಜೋಳವಾಯಿತು, ಮೆಣಸು, ಕಬ್ಬು ಆಯಿತು. ಮತ್ತು ಯಾರಿಗೆ ಗೊತ್ತು ಆ ಮಣ್ಣಿನ ಎಷ್ಟು ಪಾಲು ವರ್ಧಾವಾಸಿಂಗನ ರಕ್ತದಲ್ಲಿದೆ, ಇನ್ನೆಷ್ಟು ಜಗನನ ಜೀವದಲ್ಲಿದೆ!

ಬೀಟೆಮರದ ಕಾಂಡದಂಥ ಆರಡಿ ಎತ್ತರದ ಅವನ ಮಗ ಒಬ್ಬ ಪೋಲೀಸ ಅಧಿಕಾರಿಯೊಂದಿಗೆ ಜಗಳಾಡಿದ—ಗಾಂಧೀಬಾಪುವಿಗೆ ಆಡಿದ ಅಪಶಬ್ದ ಅವನಿಗೆ ಕೇಳಲಾಗಲಿಲ್ಲ—ಮತ್ತು ಯಾವೆಡೆಗೆ ಪೆಟ್ಟು ಬಿದ್ದುದರಿಂದ ಎಲ್ಲಿ ಆತ ಸತ್ತು ಮಣ್ಣಾಗಿ ಹೋದ. ಅವನ ಅಸ್ಥಿ ಸಿಕ್ಕಿದ್ದರೆ ಅದನ್ನು ದಿತ್ರೆ ತಾಯಿತದಲ್ಲಿ ಸುತ್ತಿ ಸಂಗಡವೇ ಇಟ್ಟುಕೊಂಡು ತಿರುಗಾಡುತ್ತಿದ್ದ. ಆದರೆ ಅದರ ವಾಸನೆಯೂ ಅವನ ಕಡೆಗೆ ಹಾಯಲಿಲ್ಲ. ಅವನ ಎರಡನೆಯ ಮಗ ಸಜ್ಜನಸುಲಿಂದ ಅವನ ಮುಪ್ಪಿನ ಆನುಗೋಲಾಗಿದ್ದ. ಹೊಸಲುಂಗಿ ಅಂಗಿತೊಟ್ಟು ಅಜ್ಜಿಯ ಮನೆಗೆ ಹೋಗಿದ್ದ. ಆತ ಅಲ್ಲಿಂದ ತಿರುಗಿ ಬರಲೇ ಇಲ್ಲ. ಅವನ ಹೆಣವು ಸರಹಿಂದ ಕಾಲುವೆಯಲ್ಲಿ ತೇಲುತ್ತಿದ್ದುದನ್ನು ಆತ ಕಣ್ಣಾರೆ ನೋಡಿದ್ದನೆಂದು ಬಚಿತ್ತರಸು ಆಣೆಮಾಡಿ

ಅನ್ನುತ್ತಿದ್ದ. ಯಾವುದೇ ತಂಡದವರು ಅವನನ್ನು ಕೊಂದೊಗೆದಿರಬಹುದು. ಆದರೆ ಯಾವುದೇ ಧರ್ಮನಿಷ್ಠ ಮುಸ್ಲಿಮನು ಇದನ್ನೇಕೆ ಜಾಹೀರು ಮಾಡಲಿಲ್ಲ? ಅಂದಾಗ ಯಾರ ಧರ್ಮ ಯಾವುದು, ಯಾರ ದೇವರು ಯೇನು? ಇತ್ತ ಕಾಹಲಾ ಸಿಂಹನೂ ಜಗಲಿಯ ಕಟ್ಟೆಯಮೇಲೆ ಮಲಗಿದ ಸೋದರಳಿಯನ ಕುತ್ತಿಗೆ ಕಡಿದು ಚಲ್ಲಿದ್ದ—ಅಂದುಕೊಂಡಿರಬೇಕು. ಅಯ್ಯಾ, ತನ್ನಾರ ಯಾರೊಬ್ಬ ಮುಸಲ್ಮಾನನ ಹೆಸರಿಗೆ ಇದು ಹಚ್ಚಲಾಗುವದು—ಆಸ್ತಿ ಒಳಗೆ ಹಾಕಿಕೊಳ್ಳಲಿಕ್ಕೆ.

ಮನುಷ್ಯ ಗಂಟುಮೂಟೆ ಕಟ್ಟಿಕೊಳ್ಳಬಹುದು. ಟ್ರಂಕು ಪೇಪಾಯಿ ಹೊತ್ತು ಕೊಳ್ಳಬಹುದು. ಆದರೆ ಅಲ್ಲಲ್ಲಿ ನಿದ್ದೆ ಹೋದ ಬಂಧುಬಳಗದವರ ಜೀವ ಏನು ಮಾಡಬೇಕು?

"ಅಲ್ಲ, ನೀವಂತೀರಿ, ಪಾಕಿಸ್ತಾನಕ್ಕೆ ಹೋಗಿಬಿಡು ಎಂತ." ದಿತ್ತೆ ನಕ್ಕು ನಕ್ಕು ಅಳಲಿಕ್ಕೆ ಬಂದ, "ಆದರೆ ಅಲ್ಲಿ ಯಾರಲ್ಲಿಗೆ ಹೋಗಬೇಕು? ಪಾಕಿಸ್ತಾನದಲ್ಲಿ ನಮ್ಮವರು ಯಾರಿದ್ದಾರೆ?"

ಆ ಮೇಲೆ ನಾಲ್ಕೂಕಡೆಗೆ ಬೆಂಕಿ ಭುಗಿಲೆದ್ದಿತು. ಆಗ ಊರ ಪ್ರೌಢರು ಅಲ್ಲಾದಿತ್ತೆಗೆ ಹೇಳಿದರು: "ಹೋಗುವದಿಲ್ಲವಾದರೆ ನೀವು ಹೆಸರನ್ನು ಬದಲಿಸಿ ಕೊಂಡುಬಿಡಿ. ಯಾರಿಗೆ ಗೊತ್ತು, ಹೊರಗಿನಿಂದ ಬಂದ ಪುಂಡರು ಯಾವ ಹೊತ್ತಿಗೆ ಕೈಯೆತ್ತಿ ಏರಿ ಬರುವರೆಂದು? ನಿನ್ನ ಹಳೆಯ ಹಿರಿಯರೂ ಮೊದಲು ನತ್ಥೂ, ಘೋಲೂವೇ ಆಗಿರಬೇಕು. ಅವರೇನು ಮಕ್ಕಾದಿಂದ ಇಲ್ಲಿಗೆ ನಡೆದು ಬಂದವರೇ? ನಿಮಗೇನು ಭೇದವಾದೀತು?"

"ನನಗೆ ಈ ಪ್ರಾಣಿಯ ಮಾಂಸವೇನು? ಆ ಪ್ರಾಣಿಯ ಮಾಂಸವೇನು? ಅದ ರಿಂದೇನಾಗಬೇಕು? ರೊಟ್ಟಿ ಉಪ್ಪಿನೊಂದಿಗೆ ತಿನ್ನುತ್ತಾರೆ, ಹೆಚ್ಚೆಂದರೆ ನೀರುಳ್ಳಿ ಯೊಂದಿಗೆ. ಸೈ ಒಪ್ಪು ಇಷ್ಟು ಸಣ್ಣ ಮಾತು." ದಿತ್ತೆ ತನ್ನ ಮನಸ್ಸಿನೊಂದಿಗೆ ವಿಚಾರ ವಿನಿಮಯ ಮಾಡಿದನು. ಮತ್ತು ಬಹಳಷ್ಟು ಮಂದಿ ಹೇಳಿದ ಮಾತನ್ನು ಮನ್ನಿಸಿದನು.

ಆಮೇಲೆ ಅವನಿಗೆ ಅನುಭವವಾಯಿತು. ನಿಜವಾಗಿಯೂ ಹೆಸರು ಬದಲಿಸುವದ ರಿಂದ ಏನೂ ಭೇದವಾಗಿದ್ದಿಲ್ಲ. ಹಿಂದೆ ಜನ ಅಲ್ಲಾದಿತ್ತೆಗೆ ದಿತ್ತೆ ಎಂದು ಕರೆಯು ತ್ತಿದ್ದರು. ಈಗ ಹರದತ್ತಸಿಂಹನೆಂದು ಕರೆಯಹತ್ತಿದರು. ಹೆಂಡತಿಯ ಹೆಸರು ಹಿಂದೂ ರಕ್ಖೀ ಇತ್ತು, ಇಂದೂ ಲಕ್ಖಿಯೇ ಉಳಿಯಿತು.

ಆದರೆ ಊರಿನ ಕೆಲವು ಜಗಳಗಂಟ ಹುಡುಗರು ಈ ರೀತಿ ಧರ್ಮಲಂಡ ದಿತ್ತೆಯನ್ನು ತಮ್ಮೊಳಗೆ ಹಾಕಿಕೊಂಡ ಬಗ್ಗೆ ಸಿಟ್ಟಿಗೆದ್ದರು. ಅನ್ನಹತ್ತಿದರು, "ನಾವೇನೂ ಒಪ್ಪುವದಿಲ್ಲ. ಈ ಧರ್ಮ-ಗಿರ್ಮ ಬದಲಿಸುವ ಮಾತು. ಒಂದೇ ಈ

ಕುಂಬಾರ ಇಲ್ಲಿಂದ ನೇರ ಹೊರಟಿದ್ದು ಹೋಗಬೇಕು, ಇಲ್ಲವಾದರೆ ನಮಗೆ ಗೊತ್ತು, ನಮ್ಮ ಹಕ್ಯಾರುಗಳಿಗೆ ಗೊತ್ತು."

ಯಾವದೋ ಊರ ಹಿರಿಯ ದಿತ್ತೆಯವರಿಗೆ ಎಚ್ಚರಿಕೆಯ ಸೂಚನೆ ಮುಟ್ಟಿಸಿದ: ನೀನು ನಿನ್ನ ಬಟ್ಟೆ-ಬರೆ, ವಸ್ತ್ರ-ಒಡವೆ ನಿನ್ನಲ್ಲಿ ಇಟ್ಟುಕೊ. ಆದರೆ ನಿನ್ನ ನಾಲ್ಕು ಕತ್ತೆ ಮಕ್ಕಳಿಗೆ ಕೊಟ್ಟುಬಿಡು. ಇವರು ಜಿದ್ದಿಗೆ ಬಿದ್ದಿದ್ದಾರೆ. ನಾವು ನಿನ್ನ ಬಾಂಧವರಾದೆ ವೆಂಬ ಸಂತೋಷದಲ್ಲಿ. ನೀನು ಇಲ್ಲಿ ನಮ್ಮ ದೇಶದಲ್ಲಿಯೇ ಉಳಿದಿಯೆಂಬ ಸಂತೋಷ ದಲ್ಲಿ ಆನಂದಿಸುತ್ತೇವೆ. ದಿತ್ತೆಗೆ ಸೊಕ್ಕು ಏರಿತು. 'ಅಯ್ಯಾ, ಶಾಭಾಸ್ ನಮ್ಮನ್ನು ತಮ್ಮ ಸಂಗಡ ಸೇರಿಸಿಕೊಳ್ಳಲಿಕ್ಕೆ, ಸೋದರರೆಂದು ತಿಳಿಯಲಿಕ್ಕೆ ಇವರಿಗೆ ಇಷ್ಟು ರುಚಿಯಾದರೆ, ಕತ್ತೆಯೇ ಏನು, ನನ್ನ ನಾಲ್ಕು ಕೈಕಾಲು ಅವರಿಗೆ ಅರ್ಪಿಸಲಿಕ್ಕೆ ಸಿದ್ಧ!"

ಬಾಡಿಗೆಗೆ ಸಾಮಾನು ಹೊರುವದರಿಂದ ಎರಡು ರೂಪಾಯಿಯ ಸಂಪಾದನೆ ಬರುತ್ತಿತ್ತು. ಅದು ಈ ಕತ್ತೆಗಳೊಂದಿಗೇ ಹೊರಟುಹೋಯಿತು. ಆದರೂ ದಿತ್ತೋ ಕೆಲಸವಿಲ್ಲದೆ ಉಳಿಯಲಿಲ್ಲ. ಬಿಳಿಯಂಗಿಯ ಸಂಭಾವಿತ ನತಾರಸಿಂಹ ಅವನನ್ನು ತನ್ನ ದನಗಳ ನಿಗರಾಣಿಗಾಗಿ ಅನ್ನವಸ್ತ್ರ ಕೊಟ್ಟು ನೇಮಿಸಿದನು. ಇಷ್ಟೇ ಅಲ್ಲ, ಹದಿನೈದು ರೂಪಾಯಿ ಕೊಡಲಿಕ್ಕೂ ಒಪ್ಪಿದ—ಅದೂ ಬೆಳೆ ಕೊಯ್ದ ಮೇಲೆ—ಜೇಬಿನ ಖರ್ಚಿಗೆಂದು.

ಐವತ್ತೈದು ದಾಟಿದ ರಕ್ಖೀ ಯಾರದೋ ಹತ್ತಿ ಹಿಂಜುತ್ತಿದ್ದಳು. ಇನ್ನಾರದೋ ಧಾನ್ಯ ಬೀಸುತ್ತಿದ್ದಳು. ಕಾಳು ಕುಟ್ಟುತ್ತಿದ್ದಳು. ಅಥವಾ ಗೋಡೆ ಮೆತ್ತುತ್ತಿದ್ದಳು. ಇಷ್ಟೆಲ್ಲ ದುಡಿದರೂ ಅವಳ ಗಡಿಗೆಯಲ್ಲಿ ಒಂದು ಪಾವು ಹಿಟ್ಟುಬಿದ್ದರೆ ಬಿತ್ತು, ಇಲ್ಲದಿದ್ದರೆ ಇಲ್ಲ. ಆದರೆ ಈ ಬಗ್ಗೆ ಅವಳಿಗೆ ಸಿಡುಕಿಲ್ಲ. ಆದರೆ ಮನಸ್ಸನ್ನು ಹೀಗೆ ನೂರು ಪೇಚುಗಳ ಚಕ್ರದಲ್ಲಿ ಸಿಲುಕಿಸಿಕೊಂಡರೂ ಅವಳಿಗೆ ಕಳೆದುಕೊಂಡ ತನ್ನ ಮಕ್ಕಳು ಒಂದು ಕ್ಷಣವೂ ಮರೆಯುತ್ತಿದ್ದಿಲ್ಲ. ಇಡೀ ರಾತ್ರಿ ಅವಳು ದುಪ್ಪಟಿಯಲ್ಲಿ ಮೋರೆ ಅಡಗಿಸಿಕೊಂಡು ಅಳುತ್ತಿದ್ದಳು; ಹಾಗೆಯೇ ಎಲ್ಲೂ ಕೆಲಸ ಸಿಗದಿದ್ದಾಗ ಹಗಲಹೊತ್ತೂ ಅಳುತ್ತಿದ್ದಳು.

ಒಂದು ಸಂಜೆ ಜಂಗೀರಭಂಗೂ ಅವಳನ್ನು ಕರೆಯಲು ಬಂದನು. ಅವನ ಸೊಸೆ ಹಡೆಯುವವಳಿದ್ದಳು. ನಿಯಮಿತ ದಾಯಿ ಊರು ಬಿಟ್ಟು ಹೋದಂದಿನಿಂದ ಹತ್ತಿರದಲ್ಲಿ ಎಲ್ಲೂ ಬೇರೆ ಸೂಲಗಿತ್ತಿ ಸಿಗುತ್ತಿದ್ದಿಲ್ಲ. ರಕ್ಖಿಗೆ ಆ ಕೆಲಸ ಬರಲಿ ಬರದಿರಲಿ ಅವಳಿಗೇ ಕರೆ ಬರುತ್ತಿತ್ತು. ಆಕೆ ದಿತ್ತೆಯ ನಾಲ್ಕು ಮಕ್ಕಳನ್ನು ತಾನೇ ಹೆತ್ತಿದ್ದಳು. ಆದರೆ ಆ ದಿನಮಾನದಲ್ಲಿ ಕಷ್ಟಪಟ್ಟು ರಾತ್ರಿ ನಿದ್ದೆಗೆಟ್ಟು ಕ್ಷೇಮದಿಂದ ಪ್ರಸೂತಿ ಮುಗಿಸಿದ್ದಳು. ಅವರು ಒಳ್ಳೇ ತಿಂದುಂಡ ಜಾಟ ಜನರಾಗಿದ್ದರು. ಅರವತ್ತು

'ಘುಮಾವ್'* ಜಮೀನಿನ ಒಡೆಯ ತನ್ನ ಮೊದಲನೇ ಮಗನ ಮುಖ ಕಂಡೊಡನೆ ಮುತ್ತುಗದ ಹೂವಿನಂತೆ ಅರಳಿಬಿಟ್ಟನು. ಸೊಸೆ ಅಂದಳು, "ರಕ್ಖೀಯೇ, ನಾನು ಹಿಂಜರಿದೆ ಎಂದು ಹಿಂದೆ ಆಡಿಕೊಳ್ಳುವುದು ಬೇಡ. ಏನು ಬೇಕೋ ಬೇಡಿಕೋ" ರಕ್ಖೀ ಏನೂ ವಿಚಾರಮಾಡದೆ ಹೇಳಿದಳು: "ನಿಮ್ಮ ಆಯುಷ್ಯ ಹೆಚ್ಚಾಗಲಿ, ನನಗೊಂದು ಕತ್ತೆ ತೆಗಿಸಿಕೊಡಿರಿ."

ರಕ್ಖೀಯ ಮಾತು ಕೇಳಿ ನಕ್ಕು ನಕ್ಕು ಜಂಗೀರ ಮತ್ತು ಅವನ ಪರಿವಾರದವರ ಹೊಟ್ಟೆ ಹುಣ್ಣಾಯಿತು. ಆದರೆ ಮರುದಿನ ಮುಂಜಾನೆಯೇ ಆ ಮಂದಿ ಸುಮಾರು ಮೂರು ತಿಂಗಳ ಕತ್ತೆಯ ಮರಿಯೊಂದನ್ನು ಅವಳ ಅಂಗಳದಲ್ಲಿ ತಂದು ನಿಲ್ಲಿಸಿದರು.

ದಿತ್ತಾ ತನ್ನ ಹೆಂಡತಿಯ ಸ್ಥೂಲಬುದ್ಧಿಯ ಬಗೆಗೆ ಸಿಡಿದೆದ್ದನು. "ಲೇ ಅಭಾಗಿ, ಬೇಡುವದೇ ಆಗಿದ್ದರೆ ಯಾವದೇ ಅಂದದ ವಸ್ತು ಒಂದು ಬೇಡಬೇಕಿತ್ತು. ಈ 'ಭಾವಯ್ಯ' ಇನ್ನೆಷ್ಟು ಕಾಲ ನಮ್ಮ ಪಾಲಿಂದೇ ತಿನ್ನುವನೋ ಗೊತ್ತಿಲ್ಲ. ಅಲ್ಲದೆ ಒಂದು ಕತ್ತೆಯಿಂದ ಏನಾಗಬೇಕು? ಇಟ್ಟಿಗೆಯನ್ನು ಹೊರಲಾರ, ಧಾನ್ಯವನ್ನು ಹೊರಲಾರ!" ಆತ ದೊಡ್ಡ ಗಲಾಟೆ ಮಾಡಿದನು. ಆದರೆ ರಕ್ಖೀ ಅವನದೇನೂ ಕೇಳಲಿಲ್ಲ.

ಕತ್ತೆಯಮರಿ ಅಪ್ಪಟ ಬಿಳಿದು, ಹತ್ತಿಯಂತೆ ಇತ್ತು. ರಕ್ಖೀ ಅದನ್ನು ಒಮ್ಮೆ ಬಿಸಿಲಲ್ಲಿ ಮೈ ತಿಕ್ಕಿತಿಕ್ಕಿ ಮೀಯಿಸುತ್ತಿದ್ದಳು; ಒಮ್ಮೆ ಅದರ ಕೂದಲನ್ನು ಬಾಚುತ್ತಿದ್ದಳು, ಕಟ್ಟುತ್ತಿದ್ದಳು. ಅದರ ಮೈಮೇಲೆ ಹತ್ತಿ ಮತ್ತು ಮೆಂತೆಯಿಂದ ಹೂಬಳ್ಳಿ ಬರೆಯುತ್ತಿದ್ದಳು. ಒಮ್ಮೆ ಅದರ ಬೆನ್ನಿಗೆ ಒಟ್ಟೆ ಹೊದಿಸುತ್ತಿದ್ದಳು. ದಿತ್ತಾ ಏನೋ ದೂರದ ಆಸೆಮಾಡಿ ಸಣಬಿನ ಹುರಿಗಳನ್ನು ಬೇರ್ಪಡಿಸುತ್ತಿದ್ದನು. ಆದರೆ ರಕ್ಖೀ ಅವನ ಆ ದಾರದ ಲಡಿ ಮಾಡುವ ಯಂತ್ರವನ್ನು ಸ್ಟ್ಯಾಂಡಿನ ಮೇಲೆ ಒಗೆದು ಅಂದಳು, "ಹಗ್ಗ ಮಾಡುವದಿದ್ದರೆ ಮಾಡಿಕೋ. ಅಡ್ಡಿ ಇಲ್ಲ. ಆದರೆ ಹಗ್ಗದ ಮೂಟೆ ನೀನು ನಿನ್ನ ಹೆಗಲಿಗೇ ಹೊತ್ತು ಒಯ್ಯಬೇಕಾದೀತು. ನಾನು ನನ್ನ ಮೋತಿಗೆ ಒಂದು ತೊಲೆಯಷ್ಟು ಹೊರೆಯನ್ನು ಹೊರಲು ಕೊಡುವಳಲ್ಲ,—ಎಂದೆಂದಿಗೂ ಇಲ್ಲ."

ರಕ್ಖೀಯು ಕತ್ತೆಗೆ 'ಮೋತೀ' ಎಂದು ಹೆಸರಿಟ್ಟಿದ್ದಳು. ಜನಕ್ಕೆ ಗೊತ್ತು ಯಾಕೆಂದು. ಏಕೆಂದರೆ ಆ ಮರಿ ಬಹಳ ಚೆಂದವಿತ್ತು ಆದರೆ ರಕ್ಖೀಯ ಉದ್ದೇಶ ಬೇರೆಯೇ ಇತ್ತು. ಮಾಮದೀನ ಅವಳ ಹಿರಿಯ ಮಗನಾಗಿದ್ದ. ತೆಫೀಕ ಅವಳ ಕಿರಿಯವನು. 'ಮೋತೀ' ಶಬ್ದದಲ್ಲಿ ಇವೆರಡೂ ಹೆಸರು ಜೋಡಿಸಿದಂತಿತ್ತು. ಒಬ್ಬನ 'ಮ', ಇನ್ನೊಬ್ಬನ 'ತ'. 'ಮೋತೀ' ಎಂದು ಬಾಯಿಂದ ಮಾತು ಹೊರಟಾಗೆಲ್ಲ ಅವಳ ಎರಡೂ ತುಟಿಗಳು ಜೇನಿನಿಂದ ತೊಯ್ಯುತ್ತಿದ್ದವು.

* 55×55 ಚದರಗಜ ಭೂಮಿಯನ್ನು ಒಂದು ಬೀಘಾ ಎಂದೂ ಎರಡು ಬೀಘಾ ಜಮೀನನ್ನು ಒಂದು ಘುಮಾವ್ ಎಂದೂ ಪಂಜಾಬಿನಲ್ಲಿ ಹೇಳುತ್ತಾರೆ.

ಮುಂದೆ ವಿಷಮಜ್ವರ ದಿತ್ತೋನನ್ನು ಬಳಲಿಸಿತು. ಇಪ್ಪತ್ತು ದಿನ ಎಡಬಿಡದೆ ಜ್ವರವೇರಿತ್ತು. ನಾಲ್ಕುದಿನ ಬಿಟ್ಟು ಮತ್ತೆ ಏರಿತು. ರಕ್ಖಿ ಅವನಿಗೇ ನೀರು ಕುಡಿಸು ತ್ತಿದ್ದಳು. ಕೈಕಾಲು ಒತ್ತುತ್ತಿದ್ದಳು. ಅಥವಾ ಮನೆಮನೆಗೆ ಹೋಗಿ ಕೆಲಸದ ಚಾಕರಿ ಮಾಡುತ್ತಿದ್ದಳು. ಹುಡಿಪೊಟ್ಟು, ಕಾಫಿ, ಬೆಲ್ಲದ ತುಣುಕು ಎಲ್ಲ ಸರಕೂ ಮಾರು ತ್ತಿದ್ದಳು. ಚಹ, ಆಡಿನ ಹಾಲಿನ ನಾಲ್ಕೈದು ಧಾರೆ ಇವನ್ನೂ ಮಾರಿ ಹಣ ತರುವಳು. ಒಂದುದಿನ ಯಾರಿಂದ ಐದುರೂಪಾಯಿ ಬೇಡಿ ತಂದಳೋ ಅವನೇ ಇನ್ನೊಂದು ದಿನ ಅವಳಿಂದ ಎಂಟುರೂಪಾಯಿ ತಿರುಗಿ ಬೇಡುತ್ತಿದ್ದ. ತಾಳ್ಮೆಗೆಟ್ಟ ಹತ್ತು ಬಾಯಿ ಮುಚ್ಚಲಿಕ್ಕೆ ಆಕೆ ಗಿದ್ದಾ ಮಲ್ಲನಿಗೆ ಮೊರೆ ಹೊಕ್ಕಳು. ಆತ ಮನೆಗೆ ಬಂದವಳ ಮಾತು ಮನ್ನಿಸಿದ, ಆದರೆ ತಿಂಗಳು ಪೂರಾ ಆಗುವ ಮೊದಲೇ ಅವನ ಮಗ ಲಛಮನ ಮೋತಿಯ ಕೊರಳಿಗೆ ಹಗ್ಗ ಹಾಕಿ ದರದರ ಎಳೆದುಕೊಂಡೇ ಹೋದನು.

ರಕ್ಖೀ ಮನೆ ಹೊಕ್ಕವಳೆ ಸಾವಿರ ಬಯ್ಗಳನ್ನು ಆ ಗಿದ್ದಾ ಮಾರವಾಡಿಗೆ ಆಡಿದಳು. ಅವನ ಹಿಂದಿನ ಮುಂದಿನ ಪೀಳಿಗೆಗೆ ಒಂದೊಂದು ಬಿರುನುಡಿ ಒಗೆದಳು. ದಿತ್ತಾ ತಿಳಿದ, "ಗಿದ್ಧಿಯ ಮನೆತನದೊಂದಿಗೆ ನಮ್ಮ ತಲೆಮಾರುಗಳೂ ಬೆಳೆದು ಬಂದಿವೆ. ಅವನೇ ಊರಲ್ಲಿ ಇದ್ದಿದ್ದರೆ ನೀನು ನೋಡಿಕೊಳ್ಳಬಹುದಿತ್ತು. ಲಛಮನನೂ ಹೊರಗಿನಿಂದ ಉಗ್ರ ಜುಲುಮೆಗಾರನಾಗಿ ಕಾಣುತ್ತಾನೆ. ಆದರೆ ನಿಜವಾಗಿಯೂ ಆತ ಹಾಗೆ ಇಲ್ಲ. ನಿನಗೆ ಗೊತ್ತಿದೆ. ಆತ ನಿನ್ನ ಪಾತ್ರೆ ಪೋಗಡೆಗಳಿಗೆ ಕೈ ಹಚ್ಚಲಿಲ್ಲ. ಮನೆಯ ಎಲ್ಲ ಸಾಮಾನೂ ಆತ ಬಡ್ಡಿಯೆಂದು ದೋಚಿಕೊಂಡು ಹೋಗಿದ್ದರೆ ಆಗ ನಾವು ಏನು ಮಾಡಬೇಕಿತ್ತು?"

ಆದರೆ ರಕ್ಖೀ ಅವನ ಮೇಲೆ ಏರಿ ಬಿದ್ದಳು. ಮತ್ತು ತನ್ನ ಉಗುರುಗಳಿಂದ ಅವನ ಮೋರೆ ತಲೆ ಪರಚಾಡಿದಳು.

ದಿತ್ತೆಯ ಮನೆಗೆ ಬರುವ ಮುಂಚೆ ಮೋತಿಯ ಒಡೆಯರು ಅದನ್ನು ತಿಪ್ಪೆಗಳ ಮೇಲೆ ಬಿಡುತ್ತಿದ್ದರು. ಅದು ದಿನವಿಡಿ ಅಲ್ಲಿಯ ಕಸ-ಕಡ್ಡಿಗಳನ್ನು ಮೇಯುತ್ತ ಇರುತ್ತಿತ್ತು. ಆದರೆ ರಕ್ಖೀಯ ಮನೆಗೆ ಬಂದಂದಿನಿಂದ ಆಕೆ ಅದನ್ನು ಹೊಸ್ತಿಲ ಆಚೆಗೆ ಹೋಗಲು ಬಿಡುತ್ತಿದ್ದಿಲ್ಲ. ಚಿನ್ನದಂಥ ಚೊಕ್ಕ ಗೋಧಿಯ ದಂಟಿನ ಎಲೆ ಗಳನ್ನು ತಾನೇ ಕೈಯಿಂದ ಮುರಿದು ಮುರಿದು ತಿನ್ನಿಸುತ್ತಿದ್ದಳು. ಅದರೊಂದಿಗೆ ಕಡಲೆಯನ್ನು ಸೇರಿಸಿ ಕೊಡುತ್ತಿದ್ದಳು—ಹೊಟ್ಟೆ ತುಂಬ ತಿನ್ನಲಿ ಎಂದು. ಆ ಕತ್ತೆ ಮರಿ ಸ್ವಲ್ಪವಾದರೂ ಲದ್ದಿ ಹಾಕಿದರೂ ಅದನ್ನು ತನ್ನ ಸೆರಗಿನಲ್ಲಿ ಹಿಡಿಯುತ್ತಿದ್ದಳು. ಅದನ್ನು ಕಣ್ಣುರಪ್ಪೆಗಳಿಂದಲೇ ಝಾಡಿಸಿ ಮಡಿ ಮಾಡಿರುವಂತೆ ಮೋತಿಯ ಮೈ ಈ ರೀತಿ ಝಗಝಗಿಸುತ್ತಿತ್ತು. ರಕ್ಖೀ ಇತ್ತಣದಿಂದ ಬಂದರೆ ಅದನ್ನು ತೋಳು ಗಳಲ್ಲಿ ಎತ್ತಿಕೊಳ್ಳುತ್ತಿದ್ದಳು. ಅತ್ತಣಿಂದ ಬಂದರೆ ಅದರ ಮುಖವನ್ನು ಮುದ್ದಿಡು ತ್ತಿದ್ದಳು. ಈಗ ಲಾಲಾರ ಹವೇಲಿ ಮೋತಿಗೆ ಸುಡುಗಾಡಿಗಿಂತಲೂ ಹಾಳೆನಿಸಿತು.

ಅದು ಕೆಲವು ದಿನಗಳ ತನಕ ಅಲ್ಲಿ ಹೊಟ್ಟು ಹುಲ್ಲುಕಡ್ಡಿಗೆ ಕೂಡ ಬಾಯಿ ಹಾಕಲಿಲ್ಲ. ತಲೆ ತಗ್ಗಿಸಿ ನಿಂತುಬಿಡುತ್ತಿತ್ತು ಮತ್ತು ತನ್ನ ದೈವಕ್ಕಾಗಿ ಕಣ್ಣೀರು ಬಿಡುತ್ತಿತ್ತು.

ಶುಕ್ರವಾರ ರಾತ್ರಿ ರಕ್ಷೀಗೆ ಒಂದು ಕನಸಾಯಿತು. ಅವಳ ಇಬ್ಬರೂ ಹುಡುಗರನ್ನು ತಲೆಕೆಳಗೆಮಾಡಿ ತೂಗುಹಾಕಿದ್ದಾರೆ. ಮತ್ತು ಅವರ ತಲೆಗಳಿಂದ ಮೇದಸ್ಸು ಕೆಳಗೆ ಕುದಿಯುತ್ತಿರುವ ಎಣ್ಣೆಯ ಕಡಾಯಿಯಲ್ಲಿ ಬೀಳುತ್ತಿತ್ತು. ಅವಳು ಕಳವಳಗೊಂಡು ಎದ್ದು ಕುಳಿತಳು. ಮತ್ತು ದಿತ್ತೆಯನ್ನು ಎಬ್ಬಿಸಿ ಇನ್ನು ತಾನು ಲಾಲಾನ ಮೋರೆಯನ್ನು ನೋಡಲಿಕ್ಕಿಲ್ಲವೆಂದು ಆಣೆ ಮಾಡಿದಳು. ಆದರೆ ಈ ಅವಸ್ಥೆಯಲ್ಲಿ ಆಕೆ ತನ್ನ ಪ್ರತಿಜ್ಞೆಗೆ ಅಂಟಿಕೊಂಡು ಉಳಿಯುವದಾದರೂ ಹೇಗೆ? ಬಹಳ ಕಷ್ಟದಿಂದ ಕತ್ತಲೆಯ ಗಳಿಗೆಗಳನ್ನು ಕಳೆದು ಹೊತ್ತು ಮೂಡಿದ ಕೂಡಲೆ ಗಿದ್ದೆಯ ಮನೆಯ ಕಡೆಗೆ ಓಡಿದಳು.

ಹಸಿವೆ ಆನೆಯ ಅಹಂಕಾರವನ್ನೂ ಮುರಿದು ಬಿಡುತ್ತದೆ. ಮತ್ತು ಎಳೆ ಪ್ರಾಯದ ಹಸಿವೆ ಋಷಿ-ಮುನಿ ಬೈರಾಗಿಗಳೂ ಸಹ ಸಹಿಸಲಾರರು. ಕೆಲದಿನಗಳಿಂದಲೂ ಮೋತಿಯ ಕಾಲುಗಳು ಐದು ಪರ್ವತಗಳ ಭಾರದಡಿಗೆ ಚಡಪಡಿಸುತ್ತಿದ್ದವು. ಅದರ ಮೆದುಳಿನಲ್ಲಿ ಮೊಳದಷ್ಟು ಉದ್ದ ಮೊಳೆಗಳು ಜಡಿದು ಚುಚ್ಚುತ್ತಿದ್ದವು. ಹೊಟ್ಟೆಯಲ್ಲಿ ಗಡಿಗೆಗಟ್ಟಲೆ ದ್ರಾವಕ ಕುದಿಯುತ್ತಿತ್ತು. ಕ್ಷಣಕ್ಷಣಕ್ಕೂ ಮುಂಗಾಲ ಪುಟಿಗೆಯಿಂದ ಏರುತ್ತಿದ್ದ ನೋವು ಮತ್ತೆ ಒಮ್ಮೆಲೆ ನಿಂತಿತು. ರಕ್ಷೀ ಅಲ್ಲಿಗೆ ಮುಟ್ಟಿದ ಹೊತ್ತಿಗೆ ಮೋತೀ ಹೊಲಸು ಮಲ-ಮೂತ್ರಗಳಲ್ಲಿ ಬಾಯಿ ಕಳೆದು ಬಿದ್ದಿತ್ತು. ಅದರ ಪ್ರಾಣ ಹೊಸ್ತಿಲ ಮೇಲೆ ನಿಂತು ಅದರ ಅಂಗೋಪಾಂಗಗಳಿಗೆ ಬೀಳ್ಕೊಟ್ಟು ಹೊರಟು ಹೋಗುತ್ತಿತ್ತು.

ರಕ್ಷೀಯ ತತ್ತರಿಕೆ ಎಲ್ಲ ಮಾಯವಾಯಿತು. ಅವಳು ಕೂಡಲೇ ಹೆಜ್ಜೆ ಹೊರಳಿಸಿ ಮನೆಗೆ ಓಡಿಬಂದಳು : ಒಂದು ಕಟ್ಟೆಯಮೇಲೆ ಬಿದ್ದುಬಿಟ್ಟಳು.

"ಇಕೋ ನಿನಗೆ ಮೋತಿಯನ್ನು ಕೊಡುವೆ." ಉದಾಸನಾದ ದಿತ್ತೆಯು ನಿಧಾನವಾಗಿ ಹತ್ತಿರ ಬಂದು ಸುಮಾರು ಹತ್ತುದಿನದ ಹಾಲಿನಂತೆ ಬೆಳ್ಳಗಾದ ಕುನ್ನಿಯನ್ನು ಅವಳ ಕಾಲಿನತ್ತ ಸರಿಸುತ್ತ ಅಂದನು :

"ಮೋತೀ ?" ಬಿಕ್ಕಿನ ಬಿರುಮಳೆಯನ್ನೇ ತೂರುತ್ತ ಅವಳು ಒಮ್ಮೆಲೆ ಚೀರಿದಳು. ಯಾವದೋ ಬೀದಿಯ ಕುನ್ನಿಯೊಂದಿಗೆ ಒಂದು ಅತ್ಯಂತ ಪವಿತ್ರ ಶಬ್ದವನ್ನು ಜೋಡಿಸಿ ದಿತ್ತೆ ಪಿತ್ತದ ಮದ್ದಿನ ಮನೆಗೇ ಕಡ್ಡಿ ಗೀರಿಟ್ಟಿದ್ದನು.

"ಇದರ ಕಣ್ಣಾದರೂ ಒಮ್ಮೆ ನೋಡು" ದಿತ್ತೆ ಮೃದುವಾದ ಕೈಯಿಂದ ಆ ಕುನ್ನಿಮರಿಯ ಬೆನ್ನಿನ ತುಪ್ಪಳ ನೇವರಿಸುತ್ತ ಅಂದನು.

ರಕ್ಷೀ ಎವೆಯಿಕ್ಕದೆ ಕುನ್ನಿಯ ಮೋರೆಯತ್ತ ದಿಟ್ಟಿಸಿದಳು. ಅದು ತುಟಿ ನೆಕ್ಕುತ್ತ ಬಾಲ ಅಲ್ಲಾಡಿಸುತ್ತಿತ್ತು. ರಕ್ಷೀ ಅದರ ಕಣ್ಣುಗಳಲ್ಲಿ ತಾಫೀಕನ ಮಧ್ಯದ

ಎರಡು ಗುಟುಕುಗಳಂಥ ಕಣ್ಣನ್ನು ಮಾಮದೀನನ ಜೇನಿನ ಎರಡು ಹೂಜಿಗಳಂಥ ಕಣ್ಣನ್ನು ಹುಡುಕುತ್ತಿರಬೇಕು. ಆ ವೇಳೆ ಅವಳು ಅದರ ಹೊಟ್ಟೆಯಲ್ಲಿ ಮೋರೆ ಹುಗಿದು ಚೀರಿದಳು: "ನನ್ನ ಮಗೂ ಊ".

ಕುನ್ನಿಮರಿಗೆ ಈ ಮಾತಿನ ಅರ್ಥವೇನೂ ಆಗಲಿಲ್ಲ. ಅದು ರಕ್ಖೀಯ ಕಡೆಗೆ ನೋಡಿಯೇ ನೋಡಿತು—ಕೇವಲ ದಿಕ್ಕಿಲ್ಲದ ತಬ್ಬಲಿ ಪರಕೀಯರನ್ನು ನೋಡುವಂತೆ.

ರಕ್ಖೀ ಇನ್ನೂ ಕೆಲಸಲ ಚೀರಿದಳು—ಮೊದಲಿಗಿಂತಲೂ ಎತ್ತರದ ದನಿಯಲ್ಲಿ. ಕುನ್ನಿ ಹೆದರಿ 'ಕೂಂ ಕೂಂ' ಕುಂಯ್ಗುಡಹತ್ತಿತು. ಅದರ ಕಾಲು ಜಡಪಡಿಸುತ್ತಿದ್ದವು. ಕಾಲಕೆಳಗೆ ಕೆಂಡ ಹರಡಿಟ್ಟಂತೆ!

ರಕ್ಖೀ ಒಂದು ಚೀತ್ಕಾರ ತೆಗೆದು ತನ್ನ ಎಡಬಲಕ್ಕೆ ಹರಡಿದ ಎಲ್ಲ ಶೋಕವನ್ನೂ ತನ್ನ ಮನಸ್ಸಿನಲ್ಲಿ ತುಂಬಿಕೊಂಡಳು. ಮತ್ತು ಆ ಕುನ್ನಿಯ ಮೂತಿಯನ್ನು ಮುತ್ತಿಡ ಹತ್ತಿದಳು. ಆಗ ಅವಳ ಸಗುವ ಕಣ್ಣುಗಳಿಂದ ಮಮತೆಯು ಸೂಸುತ್ತಿತ್ತು.

# ಬಾಜಾರಿನ ಪ್ರೇತಯಾತ್ರೆ

ಆತ ಸತ್ತುಹೋದ.

ಇನ್ನೂ ಅರ್ಧರಾತ್ರಿಯೂ ಕಳೆದಿಲ್ಲ. ಈಗಾಗಲೇ ಫೆಶನೇಬಲ್ ಬಾಜಾರದ ಶೋಕೇಸುಗಳ ದೀಪಗಳು ಲಖಲಖ ಉರಿಯುತ್ತಿದ್ದವು. ಈಗಾಗಲೇ ನಿಯೋನ ದೀಪಗಳು ಪೂರಾ ಪ್ರಖರ ಪ್ರಭೆಯಿಂದ ಝುಗಝುಗಿಸುತ್ತಿದ್ದುವು. ಮತ್ತು ಈ ಜಗಜ್ಜಂಜಾಳದ ಬಾಜಾರಿನಲ್ಲಿ ಅವನಿಗೆ ಸಾಯುವದು ತೋಚಿತು. ಸದ್ಗೃಹಸ್ಥಾ, ಇನ್ನೂ ಸಿನೇಮದ ಎರಡನೆಯ ಆಟ ಮುಗಿದಿದ್ದಿಲ್ಲ. ಇನ್ನೂ ರಸ್ತೆಯಲ್ಲಿ ರಿಕ್ಷಾವಾಲಾರ ಉದ್ದಸಾಲು ಕಟ್ಟಿದ್ದಿಲ್ಲ. ಇನ್ನೂ ವೀಳ್ಯದ ಉಗುಳು ಚಿಮ್ಮಿ ಸೇರಿದ್ದಿಲ್ಲ. ಇನ್ನೂ ಮಲ್ಲಿಗೆಯ ದಂಡೆಗಳು ತೂಗಾಡಿದ್ದಿಲ್ಲ. ಮತ್ತೇನೇ ಇರಲಿ, ಜೂಜುಗಾರ ಸಿಲಿಯಾ ಸೆರೆಕುಡಿದು ತತ್ತರಿಸುವ ಹೆಜ್ಜೆಗಳಿಂದ ಮನೆಗೆ ಮರಳಿದ್ದಿಲ್ಲ. ಅಂದಾಗ ನಿನಗೇನು ತೋಚಿತು. ಇವೆಲ್ಲ ನೋಟಗಳನ್ನು ಬಿಟ್ಟು ನೀನು ಈ ತುಂಬಿತುಳುಕುವ ಲೋಕದಿಂದ ದೂರವಾಗಿಬಿಟ್ಟೆ. ನೀನಂತೂ ಬಾಜಾರಿನ ಫೂಟಪಾಥಿನ ಮೇಲೆ ಹಾಯಾಗಿ ಮಲಗಿಬಿಟ್ಟೆ.—ನಿನ್ನ ಅಮ್ಮ ಅಲ್ಲಿ ನಿನ್ನ ಬಗ್ಗೆ ಹಾಸಿಗೆ ಹಾಸಿಟ್ಟಂತೆ, ಎಷ್ಟು ಸಲೀಸಾಗಿ ನೀನು ಸಾವನ್ನು ಅಪ್ಪಿಕೊಂಡೆ. ಇಷ್ಟು ಸುಲಭವಾಗಿ ಜೂಜುಗಾರ ಸಿಲಿಯಾ ನಿನಗೆ ಒಂದು ಕಾಸನ್ನೂ ಕೊಟ್ಟಿರಲಾರ.

ಅವನ ಹೆಣವು ಒಮ್ಮೆ ಕಂಪಿಸಿತು. ಮತ್ತು ನಿಯೋನ್ ದೀಪದ ಬೆಳಕಿನಲ್ಲಿ ಅವನ ಮೋರೆಯ ನರನಾಡಿಗಳು ಸೆಟೆದು ನಿಂತವು.

ಇಲ್ಲ, ಇಂದು ನೀವು ನನ್ನಕಡೆಗೆ ಹೀಗೆ ನೋಡಲಾರಿರಿ. ಈಗ ನೀವು ನನ್ನೊಂದಿಗೆ ಸಹಾನುಭೂತಿ ಕಾಣಿಸಲಾರಿರಿ. ಇನ್ನೂ ನನ್ನೊಳಗೆ ಪ್ರಾಣ ಉಳಿದಿದೆ ಇನ್ನೂ ನನ್ನ ಕಣ್ಣಿನಲ್ಲಿ ನಿಮ್ಮ ಚಿತ್ರವಿದೆ. ನಾನು ನಿಮ್ಮ ದನಿ ಕೇಳಬಲ್ಲೆ: ಸಿಲಿಯಾ ಜೂಜುಗಾರನ ತತ್ತರಿಸುವ ಹೆಜ್ಜೆಗಳನ್ನು ಗುರುತಿಸಬಲ್ಲೆ. ನಿಮಗೆ ಒಂದು ಮಾತು ಹೇಳುತ್ತೇನೆ.—ಸಿಲಿಯಾ ಗೆದ್ದುಬರಲಿ ಅಥವಾ ಸೋತುಬರಲಿ. ಆತ ಗೆದ್ದುಬಂದರೆ ನನ್ನ ಆಟ ಗೆದ್ದಂತೆ. ಸೋತು ಬಂದರೆ ನನ್ನದು ಮೂರಾಬಟ್ಟೆ. ಸಿಲಿಯಾ ಹಾಗೇ ಇದ್ದಾನೆ. ನಿಜವಾಗಿಯೂ ಇವರು ದೊಡ್ಡ ಕಿಲಾಡಿ. ಈ ಬಾಜಾರಿನ ದೊಡ್ಡ ವ್ಯಾಪಾರಿ. ಇವರು ನನ್ನಕಡೆಗೆ ಹೊರಳಿ ನೋಡಿದ್ದೇ ಇಲ್ಲ—ಬದುಕಿದ್ದಾನೋ ಸತ್ತಿದ್ದಾನೋ ಎಂದು.

ಮತ್ತು ಈ ಹೊತ್ತು ಆತ ಸತ್ತುಹೋಗಿದ್ದ.

ಅವನ ಬರೆಬತ್ತಲೆ ಹೆಣವು ಆ ಫೆಶನೇಬಲ್ ಬಾಜಾರಿನ ಫೂಟ್‌ಪಾಥಿನ ಮೇಲೆ

ಬಿದ್ದಿತ್ತು. ಅವನ ಮೈಮೇಲೆ ಏನೂ ಬಟ್ಟೆ ಇದ್ದಿಲ್ಲ. ಮತ್ತು ಆ ಫೆಶನೇಬಲ್ ಬಾಜಾರಿನ ಎಲ್ಲ ಅಂಗಡಿಗಳೂ ರೆಡಿಮೇಡ್ ಬಟ್ಟೆಗಳಿಂದ ತುಂಬಿದ್ದುವು. ಚಳಿಯಿಂದ ಅವನ ಮೈ ನಡುಗುತ್ತ ಇತ್ತು. ಎಲ್ಲ ಕಡೆಗೂ ತೆಳ್ಳಗೆ ಮಂಜು ಪಸರಿಸಿತ್ತು. ದೂರದಲ್ಲಿ ಎಲ್ಲೋ ಸಾಧುಗಳು 'ಧುನಿ' (ಬೆಂಕಿಯಕೊಂಡ) ಉರಿಸಿಕೊಂಡು ಕೂತಿದ್ದರು, ಮೈ ಕಾಸಿಕೊಳ್ಳುತ್ತ. ಕುಂಡದಲ್ಲಿ ಒದ್ದೆ ಸೌದೆ ಹೊತ್ತಿಸಿದ್ದರು. ಹೊಗೆಯು ಉರಿ ಮಂಜಿನಲ್ಲಿ ಕವಿದು ನಿಂತಿತ್ತು. ಅವನೂ ಇಡಿಯ ಬಾಳು ಒದ್ದೆ ಸೌದೆಯಂತೆಯೇ ಹೊತ್ತಿಸುತ್ತ ನಿಂತಿದ್ದನು. ಮತ್ತು ಅವನ ಹೊಗೆ ಹೊಕ್ಕ ಕಣ್ಣು ಗಳಲ್ಲಿ ನೀರು ತುಂಬಿತ್ತು—ಅಲ್ಲಿ ಸಾಧುವಿನ ದನಿ ಮೊಳಗುತ್ತಿತ್ತು—"ನೀರೊಳಗಿದ್ದೂ ಮೀನಕೆ ದಾಹ! ಅದನು ಕೇಳಿ ಕೇಳಿನಗೆ ನಗೆ ಮಹಾ!"—ಹಾಂ, ಅಂಜನದಲ್ಲಿಯೂ ನಿರಂಜನನಾಗಿರುವ ಜೋಗಿಯೇ, ಬಾ ಇಲ್ಲಿ ನೋಡು, ನಾನು ನೀರೊಳಗಿನ ಮೀನಿನಂತೆಯೇ ದಾಹಗೊಂಡಿದ್ದೇನೆ. ಅರಿವೆ ಬಟ್ಟೆಗಳಿಂದ ತುಂಬಿದ ಬಾಜಾರಿನಲ್ಲಿ ಬತ್ತಲೆ ಬಯಲಾಗಿದ್ದೇನೆ. ನನ್ನ ಬತ್ತಲೆ ದೇಹದಲ್ಲಿ ಆತ್ಮವು ಬತ್ತಲೆ. ಮತ್ತು ಈ ಬತ್ತಲೆ ಆತ್ಮ ಬಟ್ಟೆ ಬದಲಿಸಲಿಕ್ಕೆ, ಅಂಗಿ ಬದಲಿಸಲಿಕ್ಕೆ ಉತಾವಳಿ ಆಗಿರುತ್ತದೆ.

ಮತ್ತೆ ನಿಯೋನ್ ಬತ್ತಿಗಳು ಕಣ್ಣು ಮಿಟುಕಿಸುತ್ತಿವೆ. ಉರಿಯುತ್ತಿವೆ ಆರುತ್ತಿವೆ. ಮಿಂಚಿನ ಜಗಮಗಿಸುವ ಆ ಬೆಳಕಿನಲ್ಲಿಯೂ ಅವನ ಆತ್ಮ ಕಗ್ಗತ್ತಲೆಯಲ್ಲಿ ಅಲೆದಾಡುತ್ತಿದೆ. ಕಗ್ಗತ್ತಲೆಯ ಕೇರಿ, ಅದರ ನಾಲ್ಕೂಕಡೆಗೆ ಗೋಡೆಗಳು ನಿಂತಿವೆ. ಉದ್ದುದ್ದ ಗೋಡೆಗಳು. ಮತ್ತು ಅವನ ಆತ್ಮವು ಬಿಡುಗಡೆ ಆಗಲಿಕ್ಕೆ ಆ ಕತ್ತಲೆ ಯಲ್ಲಿ ಮತ್ತೆ ಮತ್ತೆ ಚಕ್ಕರು ಹಾಕುತ್ತಿತ್ತು. ಆ ಗೋಡೆಗಳಿಗೆ ತಿರುತಿರುಗಿ ಚಕ್ಕರು ಹೊಡೆಯುತ್ತಿತ್ತು. ಗೋಡೆಗಳಮೇಲೆ ತಲೆ ಜಪ್ಪಿಕೊಳ್ಳುತ್ತಿತ್ತು.

'ಢಣ್—ಢಣ್—ಢಣ್—' ದೂರ ಎಲ್ಲಿಯೋ ಗಡಿಯಾರ ಸದ್ದು ಮಾಡಿತು. ಅವನ ಒಳಗಿಂದಲೆ ಆ ಸದ್ದು ಹೊರಟಿದಂತೆ ಅನಿಸಿತು. ವೇಳೆ ಆಗಿಹೋಯಿತು. ಪ್ರತಿಯೊಬ್ಬರೂ ವೇಳೆಯನ್ನು ಗುರುತಿಸುತ್ತಾರೆ, ಪ್ರತಿಯೊಬ್ಬರೂ ತನ್ನ ತನ್ನ ವೇಳೆಯ ಶೋಧದಲ್ಲಿಯೇ ಇರುತ್ತಾರೆ. ಅಲ್ಲಿಂದ ಗಡಿಯಾರದ ಸದ್ದಾಯಿತು, ಇಲ್ಲಿಂದ ದನಿ ಬಂತು—"ಇದೇವೇಳೆ ಮುರಿದುಬೀಳಿರಿ."

ಢಣ್—ಢಣ್—ಒಂದು ಫಕೀರನ ಸದ್ದು:
"ಮೈಮರೆತವನ ಈ ಗಡಿಯಾರು
ಹೊಡೆವುದು ಡಂಗುರವ!
ಆಯುಸ್ಸಿನ ಇನ್ನೊಂದು ಗಳಿಗೆ ಇಕೊ ಕಳೆದಿದೆ, ಭಂಗುರವು!"

ಆತ್ಮ ಹಳಹಳಿಸುತ್ತಿದೆ, ಗೋಳಿಡುತ್ತದೆ. ಇದನ್ನು ಗಡಿಯಾರದ ಸದ್ದು ಗುರುತಿಸು ತ್ತದೆ. ಗಡಿಯಾರಕ್ಕೂ ಮತ್ತೆ ಮತ್ತೆ ನೋವು ಅನಿಸುತ್ತಿದೆ. ಅದಂತೂ ನಿರಪರಾಧಿ.

ನಾವು ಅಪರಾಧಿಗಳು—ನಮ್ಮ ಪಾಡು ಏನಾದೀತು? ಬಿಡಿರಿ—ಇವೆಲ್ಲ ಬರೆ ಸಾಧುಗಳ ಮಾತುಗಳು. ನೀವು ಕುಂಡ ಹೊತ್ತಿಸಿರಿ. ಅದರಲ್ಲಿ ಹಸಿ ಸೌದೆಯಾಗಿ ಉರಿಯುತ್ತ ಸಾಗಿರಿ—ಹೀಗೆ ಆಲೋಚಿಸಿ ಆತ ನಕ್ಕು ನಕ್ಕು ಬಿದ್ದ. ಮತ್ತು ಅವನ ಆ ಕೊನೆಯ ನಗು ಅವನ ಮೊಗದಲ್ಲಿ ಹೆಪ್ಪುಗಟ್ಟಿ ಉಳಿದುಬಿಟ್ಟಿತು, ಕಂಡರೆ ಅನಿಸುತ್ತಿತ್ತು. ಆತ ನಗನಗುತ್ತಲೇ ಇದೀಗ ಈ ಸಂಸಾರದ ಭಂಗುರತೆಯ ಬಗೆಗೆ ಏನೋ ಹೇಳುವನು. ಆದರೆ ಅವನ ಮೂಕದನಿ ಅವನ ಕೊರಳಲ್ಲಿಯೇ ಹೆಪ್ಪುಗಟ್ಟಿತ್ತು. ಅವನ ಕಣ್ಣು ತೆರೆದವು. ತೆರೆದೇ ಉಳಿದವು. ಗಾಜಿನಂಥ ಪಿಂಗಾಣಿಯಂಥ ಒಂದು ಹೊಳಪು ಅವುಗಳಲ್ಲಿ ಹೆಪ್ಪುಗಟ್ಟಿ ಉಳಿದುಬಿಟ್ಟಿತ್ತು, ಅವನ ಕಣ್ಣಲ್ಲಿ ಒಂದು ಮಾತು ಒಂದು ಸವಿ ನಿಂತಿತ್ತು. ಅದು ಅಲ್ಲಿಂದ ಕೇಳುವ ಹೆಸರೇ ಎತ್ತುತ್ತಿದ್ದಿಲ್ಲ. ರಂಗುರಂಗಿನ ನಿಯೋನ್ ದೀಪಗಳು ಅವನ ಕಣ್ಣುಗಳಲ್ಲಿ ಉರಿಯುತ್ತಿದ್ದುವು, ಆರುತ್ತಿದ್ದವು. ಇದೀಗ ಕೆಂಪು ಇದೀಗ ಹಳದಿ ; ಇದೀಗ ಹಸಿರು ಮತ್ತೆ ತಿರುಗಿ ಬೆಳ್ಳಗೆ ಬಟ್ಟ ಬೆಳ್ಳಗೆ!

ಖಟ ಖಟ—ಸದ್ದು ಬರುತ್ತಿದೆ. ಯಾರೋ ಯಾವದೋ ಅಂಗಡಿಯ ಬೀಗ ಒಡೆಯುತ್ತಿರಬೇಕು. ಈ ಕಳ್ಳರು ರಾತ್ರಿಯ ವೇಳೆಗೇ ಏಕೆ ಬರುತ್ತಾರೆ? ಹೆದರಿಕೆಯೇ? ಥೂಃ ನಿಮ್ಮಃ! ನಾವು ಎಂದೂ ಯಾರಿಗೂ ಹೆದರುವದಿಲ್ಲ. ಎಲ್ಲ ಕೋಣೆ ಕೊಠಡಿಗಳನ್ನೂ ಬಾಗಿಲುಗಳನ್ನೂ ಮುರಿದೊಡೆದು ಒಳಗೆ ನುಗ್ಗುತ್ತದೆ,—ವೇಳೆ ಅವೇಳೆ ಎನ್ನದೆ, ಮೆಲ್ಲ ಮೆಲ್ಲಗೆ ಹೆಜ್ಜೆ ಇಡುತ್ತ. ಆದರೆ ಇವನು ಯಾರೋ ಹಗುರು ಹಗುರಾಗಿ ಹೆಜ್ಜೆ ಇಡುತ್ತಾ ಇಲ್ಲ. ಇವು ಭಾರೀ ಬೂಟು, ಮೊಳೆಗಳನ್ನು ಜಡಿದ ಬೂಟು. ಹಾಂ ಸರಿ, ಈ ಖಟ ಖಟ ಸದ್ದು ಫೌಜಾಸಿಂಗನ ಕಬ್ಬಿಣದ ಕೊಳೆವೆ ಜಡಿದ ದೊಣ್ಣೆಯ ಸದ್ದು. ಫೆಶನೇಬಲ್ ಬಾಜಾರಿನ ಚೌಕೀದಾರ ಫೌಜಾಸಿಂಗ್. ಎರಡನೆಯ ಮಹಾಯುದ್ಧದಲ್ಲಿ ಜರ್ಮನ್ ದಂಡುಗಳು ಮೆಜಿನೂಲೈನ ಪಾರುಮಾಡಿ ಬರಹತ್ತಿದವು. ನಾವು ಆಗಿಷ್ಟು ತ್ವರೆ ಎಂದೂ ಮಾಡಿದ್ದಿಲ್ಲ. ಮುಂದೆ ಬರುವ ಸಾವಿನ ಹೆದರಿಕೆಯಾದರೂ ಏನು? ಅದು ಒಂದಲ್ಲ ಒಂದುದಿನ ಬರುವದೇ. ಆದರೆ ಏನು ಹೇಳಲಿ ಸ್ವಾಮೀ? ಈ ಸುಟ್ಟ ಚೌಕೀದಾರಿಕೆಯಲ್ಲಿ ಮಾತ್ರ ಭಾರಿ ಜಾಗ್ರತೆಯಿಂದ ಇರಬೇಕಾಗುತ್ತದೆ! ಯಾವ ಹೊತ್ತಿಗೆ ಏನು ಪೀಕಲಾಟ ಬಂದೀತು, ಯಾರು ಹೇಳಬೇಕು? ಹೇಳತಾರಿಲ್ಲ, ಕಳ್ಳನದೂ ಗಿರಾಕಿಯದೂ ಏನೂ ನೇಮ ಇಲ್ಲ—ಅಂತ. ಈ ಪ್ರಪಂಚಾನೇ ಒಂದು ಬಾಜಾರು—ಪೇಟೆ. ಅಣ್ಣಾ, ಹಗಲು ಗಿರಾಕಿ ಬರುತ್ತಾನೆ, ರಾತ್ರಿ ಕಳ್ಳ—ಆದರೆ ಹವಲದಾರ ಫೌಜಾಸಿಂಗನೂ ಸರಿ, ಕಳ್ಳ ಮತ್ತು ಗಿರಾಕಿಗಳನ್ನೇ ಗುರುತಿಸಬಲ್ಲ. ಸಾವಿನ ಗುರುತು ಅವನ ಕಣ್ಣಿನಲ್ಲಿ ಕೂಡ ಇಲ್ಲ. ಈಗ ಆತ ಅದರ ಹತ್ತಿರದಿಂದಲೇ ಹಾಯುತ್ತಿದ್ದ.

"ಓ, ನಾಲ್ಕುರಸ್ತೆ ಕೂಡುವಲ್ಲಿ ಬಿದ್ದಿದ್ದಾನೆ! ನಿನಗೇನೋ ಸಂಬಂಧವಿತ್ತು ಅವಳು...? ಈಹೊತ್ತು ಬಂದಿಲ್ವೆ...?" ರಸ್ತೆಯ ಬದಿಗೆ ಬಿದ್ದ ಹೆಣದ ಕಣ್ಣು

ಪಿಳಿಪಿಳಿ ದಿಟ್ಟಿಸುತ್ತಲೇ ಇದ್ದುವು. ಅದರ ತುಟಿಗಳು ಫೌಜಾಸಿಂಗ್ ಹವಲದಾರನನ್ನು ಕೂಗಿ ಕರೆಯುತ್ತಲೇ ಇದ್ದುವು. ಆದರೆ ಆ ದನಿ ಅದರ ಕೊರಳಲ್ಲಿಯೇ ಹೆಪ್ಪುಗಟ್ಟಿ ನಿಂತಿತ್ತು. ಫೌಜಾಸಿಂಗ್ ಅಲ್ಲಿ ಹತ್ತಿರದಿಂದಲೇ ಲಗುಲಗು ಹಾದು ಹೋದಂತೆ ಅನಿಸುತ್ತಿತ್ತು, ಅವನ ಕಣ್ಣು ಯಾವದೋ ಜರ್ಮನ ದಂಡನ್ನು ಹುಡುಕುತ್ತಿದ್ದುವು. ಅಣ್ಣಾ, ಇದು ಬಾಜಾರು ಅಲ್ಲ, ಯುದ್ಧಭೂಮಿ. ಇಲ್ಲಿಯೂ ಗೊತ್ತಾಗುವದಿಲ್ಲ, ಯಾವ ಹೊತ್ತು ಏನು ಒದಗುವದೆಂದು. ಸರಿ, ಫೌಜಾಸಿಂಗ್, ನೀನು ಅನ್ನುವದು ಸರಿಯೇ. ಜರ್ಮನ್ ದಂಡುಗಳ ಗೊತ್ತು ಪತ್ತೆ ಆದರೂ ಒಂದಲ್ಲ ಒಂದು ಕಡೆ ಸಿಕ್ಕೀತು. ಆದರೆ ಈ ಸತ್ತವಳ ಪತ್ತೆ—

ಫೆಶನೇಬಲ ಬಾಜಾರಿನ ಫೂಟ್‌ಪಾಥಿನ ಮೇಲೆ ಬಿದ್ದಲ್ಲಿ ಅವನ ಮೈ ಕೊರಟಾಗ ಹತ್ತಿತು. ರಂಗುರಂಗಿನ ನಿಯೋನ್ ದೀಪಗಳು ಕ್ಷಣಕ್ಷಣಕ್ಕೆ ರಂಗು ಬದಲಿಸುತ್ತ ಇದ್ದುವು. ಕ್ಷಣಕ್ಷಣಕ್ಕೂ ರಂಗು ಬದಲಿಸುವ ಪ್ರಪಂಚ! ಗಾಳಿಚಕ್ಕೆಯ ಹುಡುಗಿ! ಮತ್ತೆ ಈ ಪ್ರಪಂಚವೂ ಕುಂಟಾಗಿಹೋಯಿತು. ಮೆಲ್ಲಮೆಲ್ಲಗೆ ಕುಂಟ ಕೈಕಾಲು ಎಳೆಯುತ್ತ ಅವಳು ಅವನ ಕಡೆಗೆ ಸರಿಯಹತ್ತಿದಳು. ಅವಳ ಮೈ ಹೊಗೆಸೊಪ್ಪಿನ ಹೊಗೆಯಲ್ಲಿ ಸುತ್ತಿಹೋಗಿತ್ತು. 'ಹೀ-ಹೀ-ಹೀ'—ಎಂದು ಎಂದಿನಂತೆ ತನ್ನ ಕೀಳು ನಗುವನ್ನು ನಗುತ್ತ ಬರುತ್ತಿದ್ದಳು. ಅವನು ಅವಳನ್ನು ಗುರುತಿಸಿದ್ದನು—ಕುಂಟಠಕ್ಕೀ! ಈ ಬಾಜಾರನಲ್ಲಿ ಅವಳನ್ನು ಎಲ್ಲರೂ ಬಲ್ಲರು. ಯಾರೋ ಅವಳನ್ನು ತಿರುಕಿ ಎನ್ನುತ್ತಿದ್ದರು, ಇನ್ನಾರೋ ಹುಚ್ಚಿ ಎನ್ನುತ್ತಿದ್ದರು. ಆಕೆ ದಿನವೆಲ್ಲ ಸಿಗರೇಟಿನ ತುಂಡುಗಳನ್ನು ಹೆಕ್ಕುತ್ತ ಇರುತ್ತಿದ್ದಳು. ಮತ್ತು ರಾತ್ರೆ ಇವನ ಹತ್ತಿರ ಕೂತು ಕೊಂಡು ಬರೇ ಸಿಗರೇಟು ಸೇದುತ್ತ ಇರುತ್ತಿದ್ದಳು.

ಠಕ್ಕಿಯನ್ನು ಕಂಡು ಅವನ ಲಕ್ಷ್ಯ ಮೇಲ್ಗಡೆಗೆ ಹೋಯಿತು. ಮೇಲೆ ಮುರಲೀ ಮನೋಹರ ಮೂರ್ತಿಯ ಹತ್ತಿರ ಒಂದು ಬದಿಗೆ ಒಂದು ನಾಗುಂದಿಗೆ ಮುಂದೆ ಚಾಚಿತ್ತು. ಇದೇ ಸ್ಥಳದಲ್ಲಿ ಆತ ದಿನಾಲು ತನ್ನ ರೊಟ್ಟಿಯ ಗಂಟು ತೂಗು ಹಾಕುತ್ತಿದ್ದ. ಯಾವಾಗಲೂ ಠಕ್ಕಿ ಬರುವ ಮುಂಚೆ ಇಲ್ಲಿ ರೊಟ್ಟಿಯ ಗಂಟು ನೇತುಹಾಕಿ, ಇದೇ ಸ್ಥಳದಲ್ಲಿ ಅವಳ ಪ್ರತೀಕ್ಷೆ ಮಾಡುತ್ತಿದ್ದ ಮತ್ತು ಇಬ್ಬರೂ ಕೂಡಿ ಆ ರೊಟ್ಟಿಗಳನ್ನು ತಿನ್ನುತ್ತಿದ್ದರು. ಆದರೆ ಇಂದು ಅವನಿಗೆ ಹಸಿವೆಯೂ ಆಗಲಿಲ್ಲ. ಅವನ ಹೊಟ್ಟೆ ಕೊರಡಾಗಿಹೋಗಿತ್ತು.

"ನಿದ್ದೆ ಮಾಡಿದ್ದೆಯಾ?"—ಠಕ್ಕಿ ಕೇಳಿದಳು.

ಏನೂ ಉತ್ತರವಿಲ್ಲ. ಅವಳು ಅವನ ಬಳಿಗೆ ಕೂತಳು, ಒಂದು ಕೀಳುನಗೆ ಹವೆಯಲ್ಲಿ ತೇಲಹತ್ತಿತು ಅವನ ದೇಹ ಹಾಗೆಯೇ ಕೊರಟಾಗಿ ಬಿದ್ದಿತ್ತು. ಗಾಜಿನಂತೆ ಜಡವಾದ ಅವನ ಕಣ್ಣು ಬೆರಗಾಗಿ ನೋಡುತ್ತಲೇ ಇದ್ದುವು. ಠಕ್ಕಿ ಅವನ ಮೈಯನ್ನು ಮುಟ್ಟಿ ನೋಡಿದಳು. ಒಮ್ಮೆಲೇ ಅವಳ ಸಿಗರೇಟಿನ ಹೊಗೆ ಆಳವಾಗಿ

ಹೊರಹೊಮ್ಮಿತು. ಅನಾಗರಿಕತೆಯ ಸ್ವರೂಪವಾದ ಅವಳ ಕಣ್ಣುಗಳು ದೊಡ್ಡದಾದುವು. ಆ ಕಣ್ಣುಗೊಂಬಿಗಳೊಳಗಿಂದ ಒಂದು ಘೋರ ಕಪ್ಪು ನೆಳಲು ಹೊರಟು ನಿಯೋನ್ ಬತ್ತಿಗಳ ಬೆಳಕಿನಲ್ಲಿ ಬತ್ತಲೆ ಆಯಿತು. ಠಕ್ಕಿ ಮತ್ತೊಮ್ಮೆ ಅವನ ಮೈಯನ್ನು ಮುಟ್ಟಿ ನೋಡಿದಳು. ಆದರೆ ಅವನು ಅದೇ ರೀತಿ ಬಿದ್ದಿದ್ದನು—ಬೋಳು ಬತ್ತಲೆ. ಹೆಸರು ಮಾತ್ರದ ಲಂಗೋಟಿ ಬಿಟ್ಟರೆ ಅವನ ಮೈಯಮೇಲೆ ಬೇರೆ ಯಾವ ಬಟ್ಟೆಯೂ ಇದ್ದಿಲ್ಲ. ಲಂಗೋಟಿ! ಇದುವರೆಗೆ ಆತ ತನ್ನ ಬದುಕಿನ ಎಲ್ಲ ಗಳಿಗೆಯನ್ನು ಈ ಲಂಗೋಟಿಯಲ್ಲಿಯೇ ಬಚ್ಚಿಟ್ಟಿದ್ದನು!—ಒಂದು ಸಣ್ಣ ಚೀಲದಲ್ಲಿ. ಒಂದು ಜಗ್ಗಿಗೆ ಠಕ್ಕಿಯು ಅವನ ಲಂಗೋಟಿಯನ್ನು ಬಿಚ್ಚಿದಳು. ಆದರೆ ಆ ಥೈಲಿ ಅಲ್ಲಿ ಕಾಣಲಿಲ್ಲ. ಅವಳು ತುಟಿಯಲ್ಲಿಯೇ ಒಂದು ಹೊಲಸು ಬೈ ಬಡಬಡಿಸಿದಳು. ಅವಳು ಬಹಳೇ ತಿರಸ್ಕಾರದಿಂದ ಆ ಅಲುಗಾಡದೇ ಬಿದ್ದಿದ್ದ ದೇಹದತ್ತ ನೋಡಿ ಉಗುಳಿದಳು; ಮತ್ತು ತನ್ನಷ್ಟಕ್ಕೇ ಹೀ-ಹೀ-ಹೀ ಎಂದು ನಗತೊಡಗಿದಳು. ಮತ್ತೆ ನಗುತ್ತ ನಗುತ್ತ ಅವಳ ಹೊಟ್ಟೆಯೊಳಗಿಂದ ಒಂದು ಚೀತ್ಕಾರ ಎದ್ದಿತು. ಲಾಲಸೆಯಿಂದ ತುಂಬಿದ ಕಣ್ಣಿನಿಂದ ಅವಳು ಮೇಲೆ ತೂಗುತ್ತಿದ್ದ ಗಂಟಿನತ್ತ ನೋಡಿದಳು. ಗಂಟಿನ ತನಕ ಅವಳ ಕೈ ಮುಟ್ಟುತ್ತಿದ್ದಿಲ್ಲ. ಅವಳು ಹೆಣವನ್ನು ಕೊಂಚ ಗೋಡೆಯ ಕಡೆಗೆ ಎಳೆದುಕೊಂಡಳು; ಮತ್ತು ಆ ಹೆಣದ ಎದೆಯ ಮೇಲೆ ಕಾಲೂರಿ ಸ್ವಲ್ಪ ನೆಗೆದು ಆ ಗಂಟನ್ನು ಇಳಿಸಿಕೊಂಡಳು ಮತ್ತು ಹಿಂದಿರುಗಿ ನೋಡದೆ ಹೀ-ಹೀ-ಹೀ ಎಂದು ಮುಂದೆ ನಡೆದುಬಿಟ್ಟಳು.

ಅನಂತರ ಒಂದೊಂದಾಗಿ ನಿಯೋನ್ ಬತ್ತಿಗಳು ನಂದಿಹೋದವು. ಮುಂಜಾನೆ ತಿರುಗಾಟಕ್ಕೆ ಹೋಗುವವರ ರಹದಾರಿ ಶುರುವಾಯಿತು. ಇಬ್ಬರು ಮುದುಕರು ಅವನ ಬದಿಯಿಂದ ನಡೆದು ಹೋದರು. ಅವನು ಗಾಢನಿದ್ದೆಯಲ್ಲಿಯೇ ಬಿದ್ದಿರುವನೆಂದು ತಿಳಿದು ಅಂದರು, " ಕತ್ತೆ-ಕುದುರೆ ಮಾರಿ ಹೇಗೆ ಆರಾಮಾಗಿ ಮಲಗಿದ್ದಾನೆ! "

" ಈ ಮಂದಿ ಎಂಥ ನಿಶ್ಚಿಂತೆಯ ನಿದ್ದೆಯಲ್ಲಿ ಬಿದ್ದಿರುತ್ತಾರೆ. ನಮಗಂತೂ ಇಡೀರಾತ್ರಿ ನಿದ್ದೆ ಹತ್ತುವದಿಲ್ಲ. "

ಹಗಲ ಬೆಳಕು ಏರುತ್ತ ಹೋದಂತೆ ಮಂದಿಯ ಬರ-ಹೋಗುವಿಕೆ ಬೆಳೆಯುತ್ತ ನಡೆಯಿತು. ಮತ್ತೆ ಯಾರೋ ಅಂದರು, " ಇದೇ ಇಲ್ಲಿ ಯಾರೋ ಸತ್ತು ಬಿದ್ದಾನೆ. "

" ನಮ್ಮ ಪೇಟೆಯ ಹುಚ್ಚಾ! "

ಈ ದನಿ ಸೇಠ ಘನೀರಾಮರದಿತ್ತು. ಹೆಣ ಬಿದ್ದಿರುವ ಜಗಲಿಯುಳ್ಳ ಮುರಲೀ ಮನೋಹರನ ಮೂರ್ತಿ ಇದ್ದ ಅಂಗಡಿಯಿಂದ ಎರಡು ಅಂಗಡಿ ಮುಂದೆ ಹೋದರೆ ಸೇಠ ಘನೀರಾಮರ ಅಂಗಡಿ ಅವನಿಗೂ ಈ ಸೇಠಜೀ ಚೆನ್ನಾಗಿ ಗೊತ್ತು. ನೀಚ! ಇಂದು ಸಹಾನುಭೂತಿ ಕಾಣಿಸುತ್ತಿದ್ದಾನೆ. ಹೇಗೆ ಗೋಸುಂಬೆಯಂತೆ ಬಣ್ಣ

ಬದಲಿಸುತ್ತದೆ ಈ ಪ್ರಪಂಚ! ಈಗಲೂ ಅವನಿಗೆ ಈ ಸಂಗತಿ ನೆನಪಿತ್ತು— ಬೇಸಿಗೆಯ ರಣಬಿಸಿಲಿನ ಮಧ್ಯಾಹ್ನ. ಸೀರಡಿಕೆಯಿಂದ ಅವನ ನಾಲಿಗೆ ಬಾಯಂಗಳಕ್ಕೆ ಅಂಟಿಕೊಂಡಿತ್ತು. ಎರಡು ಗುಟುಕು ನೀರಿಗಾಗಿ ತಳಮಳಿಸಿ ಅವನು ಸೇಠ ಘನೀರಾಮರ ಅಂಗಡಿಯ ಇದುರು ಹೋಗಿ ನಿಂತನು. ಘನಿರಾಮ ಆ ಸಮಯ ಅಂಗಡಿಯ ಒಳಗಡೆ ತಣ್ಣೀರನ್ನು ತರೆಸಿಕೊಂಡು ಕುಡಿಯುತ್ತಿದ್ದರು.

ಅವನಂದ, "ಸೇಠಜೀ ಎರಡು ಗುಟುಕು ತಂಪುನೀರು ಕೊಡಿರಿ."

"ತಂಪುನೀರು,? ಎಲೋ ನಡೆ, ನಡೆ. ಹೋಗು, ದೊಡ್ಡವನಾಗಿ ಬಂದಿದ್ದಿ. ಅಲ್ಲಿ ನೋಡು ಮುಂದೆ. ಆ ಮಶೀನಿನವ (ಐಸಕ್ರೀಮ ಮಾಡಿ ಮಾರುವವ) ತಂಪು ನೀರು ಮಾರುತ್ತಾ ಇದ್ದಾನೆ. ಎರಡು ಪೈಸಗೆ ಒಂದು ಲೋಟಾ ಕೊಡುತ್ತಾನೆ. ಹೀಃ ಹೀಃ— ನೀಚಸೂ . . ."

ಆಗ ಆತ ಆ ಮಶೀನಿನವನ ಹತ್ತಿರ ಹೋದ. ಆಗ ಅವನೆಂದ, "ಏ ನಡೆ ಹೋಗು. ನಾನೇನು ಇಲ್ಲಿ ಅರವಟ್ಟಿಗೆ ಇಟ್ಟಿಲ್ಲ. ಕಾಣುವದಿಲ್ಲವೇ? ಮೇಲಿಂದ ಎಂಥ ಶಕೆ-ಉರಿತಾ ಇದೆ. ಮತ್ತೆ ಇವ ತಂಪುನೀರು ಬೇಡುತ್ತಿದ್ದಾನೆ, ನಡೆ ದೂರ ಸರಿ. ಇದೀಗ ನನ್ನ ಗಿರಾಕಿಗಳು ಬರುವ ಹೊತ್ತು!"

"ಅಲ್ಲೋ, ಗಿರಾಕಿ ಮತ್ತು ಸಾವು ಇವುಗಳ ಪತ್ತೆಯೇ ಸಿಗೋದಿಲ್ಲವೋ ನೀಚಾ, ಇವರೆಲ್ಲ ಒಂದೇ ಭಾಷೆ ಆಡುತ್ತಾರೆ. ಎಲ್ಲರೂ ತಮ್ಮ ತಮ್ಮ ಗಿರಾಕಿಯನ್ನೇ ಗುರುತಿಸುತ್ತಾರೆ. ಇವರಿಗೆ ತಮ್ಮ ಗಿರಾಕಿಗಳಿಂದ ಏನೂ ಪುರಸೊತ್ತೆ ಸಿಗುವದಿಲ್ಲ."

ಮತ್ತೆ ಸ್ವಲ್ಪ ಹೊತ್ತಿನ ಮೇಲೆ ಜನ ಅವನ ಸುತ್ತಲೂ ಒಟ್ಟಾಗಲು ಶುರುವಾಯಿತು. ಯಾವಾಗ "ಮದ್ದೀ" ಮತ್ತು "ಭೋಲಾ" ಕೈಯಲ್ಲಿ ಡಬ್ಬಿ ತೂಗಾಡಿಸುತ್ತ ಮುರಲೀ ಮನೋಹರನ ಮೂರ್ತಿಯುಳ್ಳ ಆ ಅಂಗಡಿಗೆ ತಲುಪಿದರೋ ಆಗ ಅದು ಇನ್ನೂ ಮುಚ್ಚಿಯೇ ಇತ್ತು. ಇದೊಂದು ಸೋಜಿಗ. ಸಾಮಾನ್ಯವಾಗಿ ಅವರಿಬ್ಬರು ಬರುವ ಮುಂಚೆಯೇ ಆ ಅಂಗಡಿ ತೆರೆದಿರುತ್ತಿತ್ತು.

ಭೋಲಾ ಮೆಲ್ಲಗೆ ಅಂದ, "ಇಂದು ಲಾಲಾಜಿಯವರ ಮನೆಯಲ್ಲಿ ಕ್ಷೇಮವಿಲ್ಲ-"ಇದೇ ಅಂಗಡಿ ಇನ್ನೂ ತೆರೆದಿಲ್ಲ. ಏನೋ ಸಂಶಯದ ಸಂಗತಿ ಇದೆ."

"ಹೌದು ತಮ್ಮ, ದೊಡ್ಡ ಸೇಠಜೀ ಕೆಲವು ದಿನಗಳಿಂದ ಖಾಯಿಲೆ ಬಿದ್ದಿದ್ದರು. ಅವರೇ ಏನಾದರು . . ."

ಇಬ್ಬರೂ ಒಬ್ಬರನ್ನೊಬ್ಬರು ಭಾವಪೂರ್ಣ ಕಣ್ಣಿನಿಂದ ನೋಡಿದರು. ಇಬ್ಬರ ಕಣ್ಣು ತಾನೇ ತಾನಾಗಿ ಇದುರಿಗೆ ಗೋಡೆಗೆ ಹಚ್ಚಿದ ಸಿನೇಮಾ ಪೋಸ್ಟರತ್ತ ಹಾಯ್ದವು. ಮತ್ತು ಕಣ್ಣು ಕಣ್ಣುಗಳೇ ತೀರ್ಪು ಕೊಟ್ಟವು. ಇಂದು ಬಾಜಾರು ಬಂದು. ಆದರೆ ಅಗತ್ಯವಾಗಿ ಸಿನೇಮಾ ನೋಡಬೇಕು.

"ಆದರೆ ತಮ್ಮ; ಇಂದು ಯಾವ ಅಂಗಡಿಯೂ ತೆರೆದಿಲ್ಲ." ಮತ್ತು ಒಮ್ಮೆಲೆ ಅವರ ದೃಷ್ಟಿ ಜನಸಂದಣಿಯ ಮೇಲೆ ಊರಿತು—ಆ ಸಂದಣಿಯಲ್ಲಿ ಅವರ ಮಾಲಕರೂ ಬಾಜಾರಿನ ಎಲ್ಲ ವ್ಯಾಪಾರಿಗಳೂ ಲಗುಬಗೆಯಿಂದ ಹಿಂದೆ ಮುಂದೆ ಓಡಾಡುತ್ತಿದ್ದರು, ಎಲ್ಲರೂ ಹುಚ್ಚೆದ್ದಂತೆ. ಅವರೆಲ್ಲರೂ ಒಂದು ಸಿದಿಗೆಯನ್ನು ಸಿಂಗರಿಸ ಹತ್ತಿದ್ದರು. ತೆಂಗು ಮತ್ತು ಖರ್ಜೂರದ ಗರಿಗಳು ಅದರ ನಾಲ್ಕೂ ಬದಿಗೆ ತೂಗಾಡುತ್ತಿದ್ದವು. ರಂಗು ರಂಗಿನ ಕಾಗದದ ಪತಾಕೆಗಳು ಮಿಸುಗುತ್ತ ತೊನೆಯುತ್ತಿದ್ದವು. ದೊಡ್ಡ ಶಾಲು ದುಪ್ಪಟ್ಟಿಗಳ ರಾಶಿ ಕುತುಬ ಮಿನಾರಿನಂತೆ ಎತ್ತರಕ್ಕೆ ಬೆಳೆಯುತ್ತ ಹೋಗಿತ್ತು. ಅದರಲ್ಲಿ ಎಲ್ಲ ವ್ಯಾಪಾರಿಗಳೂ ತಾಮುಂದೆ ತಾಮುಂದೆ ಎಂದು ಭಾಗ ವಹಿಸುತ್ತಿದ್ದರು—ರಾಶಿಯ ಎತ್ತರ ಇನ್ನೂ ಹೆಚ್ಚಿಸಲಿಕ್ಕೆ. ಆ ಕುತುಬ ಮಿನಾರಿನ ಹೊಸ ಅಂತಸ್ತು ಪೂರ್ತಿ ಆದೊಡನೆ ವ್ಯಾಪಾರಿಗಳ ಎದೆ ಗರ್ವದಿಂದ ಉಬ್ಬಿಹೋಗುತ್ತಿತ್ತು.

"ಯಾರು ಸತ್ತರು?" ಭೋಲಾ ಯಾರನ್ನೋ ಕೇಳಿದ.

"ನಮ್ಮ ಬಾಜಾರಿನ ಒಬ್ಬ ಇಸಮು. ಇಂದು ಬಾಜಾರು ಬಂದು" ಹೀಗೆಂದು ಆತ ಮತ್ತೆ ಆ ಜನಸಂದಣಿಯಲ್ಲಿ ಸೇರಿಕೊಂಡು ಸಿದಿಗೆ ಸಿಂಗರಿಸುವದರಲ್ಲಿ ತೊಡಗಿದ.

ಈ ನಡುವೆ ಮದ್ದೀ ಸತ್ತವನ ಶೋಧ ಮಾಡಿಬಿಟ್ಟಿದ್ದ. ಅವರಿಬ್ಬರೂ ಆ ಜನರ ನೆರವಿಯೊಳಗಿಂದ ಪಾರಾಗಿ ಹೊರಗೆ ಬಂದರು.

"ಸತ್ತವರು. ಈವರೆಗೆ ಆತ ಹುಚ್ಚನಿದ್ದ. ಈಗ ಇಸಮು ಆದ. ನೀಡರು ಒಯ್ದು!"

ಅವರಿಬ್ಬರೂ ಕೈಯಲ್ಲಿ ರೊಟ್ಟಿ ಬುತ್ತಿಯ ಡಬ್ಬಿ ತೂಗಾಡಿಸುತ್ತ ಕಂಪನೀ ತೋಟದ ಬಳಿಗೆ ನಡೆದರು.

"ದೋಸ್ತ್, ಕೇಳಿದೆಯಾ? ಯಾರಾದರೂ ಸತ್ತರೆ ಅದಕ್ಕೂ ಮೊದಲೇ ಸುಟ್ಟರೊಟ್ಟಿ ತಿನ್ನಬಾರದು" ಅವನ ದನಿಯಲ್ಲಿ ಖಿನ್ನತೆಯಿತ್ತು.

"ಅದೇ ಹೋಗಲಿ ಬಿಡು. ರೊಟ್ಟಿಗೆಲ್ಲಿ ಸೂತಕ-ಮೈಲಿಗೆ?" ಮತ್ತು ಆತ ಫೆಶನೇಬಲ್ ಬಾಜಾರಿನ ಬೀದಿಯೊಳಗಿಂದ ಬ್ಯಾಂಡ-ಬಾಜಂತ್ರಿಗಳ ಮೊಳಗುವ ಅಬ್ಬರದಲ್ಲಿ ಭಾರಿ ಸಂಭ್ರಮದಿಂದ ಸಿದಿಗೆ ಹೊರಟಿತು. ಮದ್ದೀ ಮತ್ತು ಭೋಲಾರು ಆ ಜನಸ್ತೋಮದಲ್ಲಿ ಸೇರಿಕೊಂಡರು. ಸಿದಿಗೆಯ ಮೇಲೆ ಒಂದೇ ಸವನೆ ಹಣದ ಮಳೆ ಆಗುತ್ತಿತ್ತು. ಅದರಲ್ಲಿ ಹಿಡಿಯಷ್ಟು ನಾಣ್ಯಗಳು ಬಂದು ಭೋಲಾನ ಜೋಳಿಗೆಯಲ್ಲೂ ಬಿದ್ದವು. ಅವನೂ ಘೋಷಣೆ ಮಾಡಿದ "ನಮ್ಮ ಬಾಜಾರಿನ ಹುಚ್ಚ!"

"ಜಿಂದಾಬಾದ್" ಮದ್ದೀ ಕೂಗಿದ. ಮತ್ತು ಬಿದ್ದ ಹಣವನ್ನು ಹೆಕ್ಕಿಕೊಂಡ ಮೇಲೆ ಇಬ್ಬರೂ ಮ್ಯಾಟನಿ ಶೋ ನೋಡಲು ನಡೆದರು.

# ಮುಳ್ಳು ಬಿದಿರಿನ ಟೊಂಗೆ

ಬಲಂತೋಳ ಮಾವ ಮತ್ತು ಮೈದುನ ಜಗ್ಗಿ ಹೆಂಡ ಕುಡಿದಿದ್ದರು. ಇಡಿ ರಾತ್ರಿ ಬಯ್ದಾಡುತ್ತಿದ್ದರು. ಅವಳ ಪ್ರಾಯದ ಮಗಳು ಅವಳ ಬದಿಯಲ್ಲಿಯೇ ಮಲಗಿದ್ದಳು. ಆದರೂ ಆ ತಂದೆ-ಮಗಂದಿರು ಆ ಬಗ್ಗೆ ಸ್ವಲ್ಪವೂ ನಾಚಿಕೆ ಪಡುತ್ತಿದ್ದಿಲ್ಲ. ಅವಳ ಇಬ್ಬರೂ ಮಕ್ಕಳು ಹೆದರಿ ಕಂಗೆಟ್ಟು ತಿತ್ತಿರಿ ಹಕ್ಕಿಗಳಂತೆ ಹಚ್ಚಡಗಳಲ್ಲಿ ತಲೆಮೋರೆ ಮುಸುಕು ಹಾಕಿಕೊಂಡು ತೆಪ್ಪಗೆ ಬಿದ್ದುಕೊಂಡಿದ್ದರು. ಮತ್ತು ಗಿಯಾಲಾ 'ಹೆಂಗಸರಂತೆ' ಪಕ್ಕದಲ್ಲಿಯೇ ಒರಗಿ ಕೇಳುತ್ತಲಿದ್ದ. ಆದರೆ ಅವಳ ಮನಸ್ಸು ನೆಲೆಯಲ್ಲಿ ಇದ್ದಿಲ್ಲ. ಗಿಯಾಲಾನಿಗೆ ಆಕೆ ಕೊಟ್ಟ 'ವಚನ'ವೂ ಅವಳಿಗೆ ನೆನಪಾಯಿತು. ಆದರೆ ಮೊದಲಿನಂತೆ "ಹೋಗಲಿ, ಆದದ್ದಾಗುತ್ತದೆ" ಎಂಬ ಮಾತು ಅವಳಿಂದ ಈಗ ಹೊರಡುತ್ತಿದ್ದಿಲ್ಲ (ಕಳೆದ ಕೆಲವು ತಿಂಗಳಿಂದ ಆಕೆ ಹಾಗೆ ಏನೂ ಕೇಳುವಂತೆ ಇದ್ದಿಲ್ಲ).

ಅವಳ ಮಾವ—ಮೈದುನರು ಅವಳನ್ನು ಹೀಗೆ ಬಯ್ದಾಡಿದ್ದು ಇದೇ ಮೊದಲನೆಯ ಸಲವಲ್ಲ. ಕಳೆದ ಹನ್ನೆರಡು ಹದಿಮೂರು ವರ್ಷಗಳಿಂದಲೂ ಅವರಲ್ಲಿ ಹುಚ್ಚು ಹಿಂಸ್ರವೃತ್ತಿಯು ಸಂಚಾರವಾದಾಗೆಲ್ಲ ಅವರು ಹೀಗೆ ಬಲಂತೋಳನ್ನು ಬಯ್ಯುತ್ತಿದ್ದರು. ಅವಳು ಅವರಲ್ಲಿ ಯಾರೊಬ್ಬರಿಗೂ ಕೆಟ್ಟಮಾತು ಆಡುತ್ತಿದ್ದಿಲ್ಲ. ಆದರೂ ಅವರು ಇಂಥ ದುರ್ದೈವಿ ದೆಸೆಗೆಟ್ಟವರು ಅವಳನ್ನು ಬಯ್ದಾಡಿದ ಹೊರತು ಅವರು ಕುಡಿದ ಹೆಂಡ 'ಖರೆ' ಅನಿಸಿಕೊಳ್ಳುತ್ತಲೇ ಇದ್ದಿಲ್ಲ—ಎಂಬಂತೆ ಅನಿಸುತ್ತಿತ್ತು. ಅವರು ಅದೇ ಮಾತನ್ನು ತಿರುಗಿಸಿ ಅವಳ ಕೊರಳಿಗೆ ಕಟ್ಟುವರೋ ಎಂಬ ಹೆದರಿಕೆಯಿಂದ ಶಕ್ಯವಿದ್ದಷ್ಟುಮಟ್ಟಿಗೆ, ಸಹನೆ ನಿಲ್ಲುವಷ್ಟುಮಟ್ಟಿಗೆ ಬಲಂತೋ ಒಂದು ಪಶುವಿಗೂ ಬಯ್ಯುತ್ತಿದ್ದಿಲ್ಲ. ಮೊದಲು ಅವಳು ಎಲ್ಲವನ್ನೂ ಸಹಿಸಿಕೊಳ್ಳುತ್ತಿದ್ದಳು. ಆದರೆ ಈಗ ಅವಳ ಪಕ್ಕದಲ್ಲಿಯೇ ಮಲಗಿದ ಅವಳಿಗೆ ಸರಿಸಮಾನವಾಗಿ ಬೆಳೆದ ಮಗಳ ಇದುರಿಗೆ ಯಾವದೇ ಅಪರಾಧವಿಲ್ಲದೆ ಕಾರಣವಿಲ್ಲದೆ ಯಾರದೇ ಇಂಥ ಹೊಲಸು ಬೈಗಳನ್ನು ಅವಳು ಸಹಿಸುವದು ಸಾಧ್ಯವಿದ್ದಿಲ್ಲ.

ರಾತ್ರಿಯಿಡೀ ಬಲಂತೋಳಿಗೆ ನಿದ್ದೆ ಹತ್ತಲಿಲ್ಲ. ಅವಳ ಒಡಲಲ್ಲಿ ಯಾರೋ ಒಂದು ಹಿಡಿ ಕಾರೆಮುಳ್ಳುಗಳನ್ನು ತುಂಬಿ ಹರಡಿ ಇಟ್ಟಂತೆ ಆಗಿತ್ತು. ಮಗ್ಗಲು ಮಗ್ಗಲು ಮುರಿಯಲೂ ಅವಳಿಗೆ ಶಕ್ಯವಾಗಲಿಲ್ಲ. ನಡುರಾತ್ರಿಯವರೆಗೂ ಅವಳ ಕಣ್ಣುಗಳಲ್ಲಿ ಶ್ರಾವಣ-ಭಾದ್ರಪದದ ಮಳೆಯಂತೆ ನೀರು ತುಂಬಿದ್ದುವು. ಆದರೆ ಮಧ್ಯರಾತ್ರಿಯ ನಂತರ ಅವು ಒಣಗಿ ಉರಿದು ಬಿಸಿ ಆಗಲು ಹತ್ತಿದವು. ಅದೇ

ಕಾವಿಗೆ ಕಣ್ಣು ತನ್ನಾರೆ ಮುಚ್ಚಿಕೊಂಡುವು. ಮತ್ತು ಅವು ಮತ್ತೆ ತೆರೆದಾಗ ಅವಳು ಗಡಿಬಿಡಿಯಿಂದ ಎದ್ದು ಕುಳಿತಳು.

ಹೊತ್ತು ಏರಿ ಬಂದಿತ್ತು. ಗಿಯಾಲಾ ಎತ್ತುಗಳಿಗೆ ಮೇವು ಹಾಕುತ್ತಿದ್ದ. ಬಲಂತೋಳ ಹಿರಿಯ ಮಗಳು ಒಲೆಯ ಮೇಲೆ ಚಹಕ್ಕೆ ಇಡುತ್ತಿದ್ದಳು. ಅವಳು ಆಚೆ-ಈಚೆ ನೋಡಿದಳು. ನಿದ್ದೆಗೆಟ್ಟ ನೋವಿನ ನೋಟದಿಂದ ನೋಡುವಾಗ ಅವಳಿಗೆ ಪ್ರತಿಯೊಂದು ವಸ್ತುವೂ ಹೊಸದಾಗಿ ಹೊರಗಿನದಾಗಿ, ಅಪರಿಚಿತವಾಗಿ ಕಂಡಿತು. ಅವಳ ಕಣ್ಣು ಮತ್ತೆಮತ್ತೆ ವಿವಶತೆಯಿಂದ ಮುಚ್ಚುತ್ತಿದ್ದುವು. ಅಂಗೈಗಳಿಂದ ಆಕೆ ಕಣ್ಣು ಉಜ್ಜಿಕೊಂಡಳು. ಆದರೆ ಒಮ್ಮೆಲೆ ಅವಳು ಎರಡೂ ಕೈಗಳನ್ನು ಮುಂದೆ ಎತ್ತಿ ಹಿಡಿದುಕೊಂಡು ತನ್ನ ಅಂಗೈಗಳನ್ನು ನೋಡಿಕೊಂಡಳು.—ಅವುಗಳೊಳಗಿಂದ ಮುಳ್ಳು ಹುಟ್ಟಿ ಬಂದವೋ ಎಂಬಂತೆ. ಒಂದುಕ್ಷಣ ತಡೆದು ಅವಳು ಕೈಕುಡುಗಿ ಮತ್ತೆ ಕಣ್ಣುಜ್ಜಿಕೊಳ್ಳಹತ್ತಿದಳು. (ಕಳೆದ ಎರಡು ವರ್ಷಗಳಿಂದಲೂ ಕಣ್ಣು ಉಜ್ಜಿಕೊಂಡಾಗೆಲ್ಲ ಅವಳಿಗೆ ಜವೆಗೋಧಿಯ ಉದ್ದ ರೊಣೆಯ ಚೂರಿನಿಂದ ತನ್ನ ರೂಪವನ್ನೇ ತಿಕ್ಕಿಕೊಂಡಂತೆ ಅನಿಸುತ್ತಿತ್ತು. ಪ್ರತಿಸಲವೂ ಅವಳ ರೂಪದ ಎಲ್ಲ ಕಣಗಳೂ ಚೆಲ್ಲಿ ಹೋಗಿ ಹಿಂದೆ ಬರೆ ಹೊಟ್ಟು ಉಳಿದಿದೆ. ಮತ್ತು ಆ ಹುಸಿಹುಸಿ ಹೊಟ್ಟನ್ನೂ ಹಕ್ಕಿಗಳು ಕೊಕ್ಕಿನಿಂದ ಕುಕ್ಕಿಕುಕ್ಕಿ ಹರಡಿಬಿಟ್ಟಿವೆ—ಎಂದೂ ಅನುಭವಕ್ಕೆ ಬರುತ್ತಿತ್ತು.)

ಬಲಂತೋ ಮದುವೆಯಾಗಿ ಬಂದಾಗ ಅವಳನ್ನು ನೋಡಲು ಬಂದ ಹೆಂಗಸರಿಗೆ ಅವಳ ರೂಪವನ್ನು ಬಣ್ಣಿಸಲು ಶಬ್ದಗಳೇ ಇಲ್ಲವಾದುವು. ಊರಿಗೇ ಹಿರಿಯ ಟೀಕೆಕೋರಳಾದ ಸೌಧಾಲಸ್ಸೈನಳಿಗೂ ಅವಳ ರೂಪದಲ್ಲಿ ಯಾವ ಕುಂದೂ ಕಂಡುಬರದೇ ಹೋಯಿತು. ಆಕೆ ಆ ರೂಪಕ್ಕೆ ಯಾವ ಹೋಲಿಕೆಯನ್ನೂ ಕೊಡಲಾರದೇ ಹೋದಳು. "ಅಪ್ಸರೆಯಂತೆ" "ಪುತ್ಥಳಿಯಂತೆ" "ಪುಷ್ಪರಾಣಿ"—ಇಂಥ ಯಾವ ಶಬ್ದವೂ ಅವಳ ಇದುರಿಗೆ ಬಣ್ಣಗೆಟ್ಟಂತೆ ಅನಿಸಿದುವು. ಆಗ ಆಕೆ ಅಂದಳು, "ಬತ್ರಲೆ ಜಾಟರಿಗಂತೂ ಭೂಮಿಯ ಮೇಲೆ ಬಿದ್ದ ಮಾಣಿಕವೇ ಸಿಕ್ಕಿತು." ಅವಳ ಕಣ್ಣುಗಳು ನಿಜವಾಗಿಯೂ ಮಾಣಿಕದಂತೆ ಉರಿಯುತ್ತಿರುವಂತೆ ಅನಿಸುತ್ತಿತ್ತು. ಆದರೆ ಇಂದು ಹೇಗೋ ಕಷ್ಟದಿಂದ ಹದಿನಾಲ್ಕುವರ್ಷ ಕಳೆದ ಮೇಲೆ ಆ ಮಾಣಿಕದಂಥ ಕಣ್ಣುಗಳು ಮಾಸಿದ ಕವಡೆಗಳಂತೆ ಆಗಿದ್ದುವು. ಆ ಮಾಣಿಕಮಣಿಗಳೊಳಗಿಂದ ಸೂಸುವ ಕಿರಣಗಳೆಲ್ಲ ಮಂದವಾಗಿ ಅಕ್ಕಪಕ್ಕದಲ್ಲಿ ಯಾವುದನ್ನೂ ಬೆಳಗುತ್ತಿದ್ದಿಲ್ಲ.—ಒಳಗಿನ ಯಾವದೇ ವಸ್ತು ಅಥವಾ ಹೊರಗಿನ ಯಾವದೇ ವಸ್ತುವಿನ ಆಕಾರ—ಯಾವದನ್ನೂ ಬೆಳಗುತ್ತಿದ್ದಿಲ್ಲ. ಎರಡು ಬದಿಗೂ ಹದಿನಾಲ್ಕು ವರ್ಷಗಳ ಧೂಳಿಯ ಸ್ತರಗಳು ಕೂತು ಆ ಕಿರಣಗಳಿಗೆ ಮಣ್ಣುಮಾಸಲು ಬಣ್ಣ ಕವಿದಂತೆ ಆಗಿತ್ತು.

ಎತ್ತುಗಳಿಗೆ ಮೇವು ಕೊಟ್ಟು ಗಿಯಾಲಾ ಒಲೆಯ ಮುಂದೆ ಬಂದು ಕೂತನು. ಅವನ ಹಿರಿಯ ಮಗಳು ಜೇತಾಂ ಲೋಟಾದಲ್ಲಿ ಚಹ ಬಗ್ಗಿಸಿ ಅವನ ಇದುರಿಗೆ

ತಂದು ಇಟ್ಟಳು. ಗಿಯಾಲಾ ಲೋಟವೆತ್ತಿ ಬಾಯಿಗೆ ಹಚ್ಚಿದಾಗ ಜೀತಾಂ ಕಣ್ಣೆತ್ತಿ ತನ್ನ ತಂದೆಯ ಚರ್ಯೆಯ ಕಡೆಗೆ ನೋಡಿದಳು. ಆಗ ತನ್ನ ಮಗಳ ಕಣ್ಣಿನ ಹೊಳಪು ಗಿಯಾಲಾನಿಂದ ಸಹಿಸಲಿಕ್ಕೆ ಆಗಲಿಲ್ಲ. ಆತ ತನ್ನ ಕಣ್ಣನ್ನು ತಗ್ಗಿಸಿದನು. ಆದರೆ ಜೀತಾಂ ಅದೇ ರೀತಿ ನೋಡುತ್ತಲೇ ಉಳಿದಳು—ಒಮ್ಮೆ ಅಪ್ಪನ ಆಳವಾದ ಕಣ್ಣುಗಳತ್ತ, ಒಮ್ಮೆ ಅವನ ಕರಡದಂತೆ ಒರಟಾಗಿ ಬೆಳೆದ ಗಡ್ಡದತ್ತ.

ಅಪ್ಪ-ಮಗಳ ಈ ನೋಟ-ಕೂಟದಲ್ಲಿ ಏನಿತ್ತೋ. ಬಲಂತೋಳಿಗೆ ಅಳು ಉಕ್ಕಿಬಂತು. ಅವಳು ತನ್ನ ದುಪಟ್ಟೆಯ ಸೆರಗನ್ನು ಮುದ್ದೆಮಾಡಿ ಬಾಯಲ್ಲಿ ತುರುಕಿಕೊಂಡಳು, ಅವೇ ಮುಳ್ಳು ಬಲಂತೋಳ ಒಳಗೆ ಚುಚ್ಚಹತ್ತಿದವು. ಮತ್ತು ಆ ಪೀಡೆಯಿಂದ ಅವಳ ರೋಮ-ರೋಮ ಎದ್ದವಾದುವು, ಅವಳು ಅಲ್ಲಿ ಕೂತಲ್ಲಿಯೇ ಹೊರಸಿನ ಮೇಲೆ ಅಡ್ಡಬಿದ್ದಳು. (ಅವರತ್ತ ಬೆನ್ನಾದ್ದರಿಂದ ಗಿಯಾಲಾ-ಜೀತಾಂರಿಗೆ ಇದು ಯಾವದೂ ಗೊತ್ತಾಗಲಿಲ್ಲ.)

ಚಹ ಕುಡಿದು ಗಿಯಾಲಾ ಹತ್ತಿಯ ಹೊಲದಲ್ಲಿ ಹೆಟ್ಟೆ ಕಡಿದು ಹುಡಿಮಾಡಲು ಹೊರಟು ಹೋದನು. ಜೀತಾಂ ಮನೆಯ ಎಲ್ಲ ಕಸ-ಕಡ್ಡಿ ಸಗಣಿ ಗೊಬ್ಬರದ ಕೆಲಸ ಮುಗಿಸಿ, ಅಡಿಗೆ ಕೆಲಸವನ್ನೆಲ್ಲಾ ನೋಡಿಕೊಂಡು, ಹೊಲದಲ್ಲಿ ಬುತ್ತಿ ಮುಟ್ಟಿಸಲಿಕ್ಕೂ ತಾನೇ ಹೋದಳು. ಬಲಂತೋ ಕೆಲಸವೆಲ್ಲ ಮುಗಿದು ಹಾಯಾಗಿ ಹೊರಸಿನ ಮೇಲೆ ಬಿದ್ದು ಉಳಿದಳು. ಅವಳು ಊಟವನ್ನೇ ಮಾಡಿದ್ದಿಲ್ಲ. ಇಬ್ಬರು ಚಿಕ್ಕಮಕ್ಕಳು ತಮ್ಮಷ್ಟಕ್ಕೆ ತಾವೇ ಎಂದೋ ಸದ್ದಿಲ್ಲದೆ ಶಾಲೆಗೆ ಯಾವಾಗ ಹೊರಟಿದ್ದು ಹೋದವೋ ಗೊತ್ತಿಲ್ಲ. ಆ ಬರಿದಾದ ಮನೆಯಲ್ಲಿ ಬಲಂತೋಳ ಜೀವ ಹೆದರಿತು. ಏನಾದರೊಂದು ಕೆಲಸದಲ್ಲಿ ತೊಡಗಬೇಕೆಂದು ಅವಳು ಎದ್ದು ಕುಳಿತಳು. ಆದರೆ ಹೊರಸಿನಿಂದ ಎದ್ದಕೂಡಲೇ ಅವಳಿಗೆ ಇದುರಿಗಿದ್ದ ಗೋಡೆಯಮೇಲೆ ತನ್ನ ಮಾವನ ಪಗಡಿಯು ಕಣ್ಣಿಗೆ ಬಿತ್ತು. ಮತ್ತು ಬಲಂತೋಳ ಒಳಗೆ ಹರಡಿದ ಮುಳ್ಳುಗಳು ತಿರುಗಿ ಅವಳ ರೋಮ ರೋಮಗಳನ್ನು ಚುಚ್ಚಿ ಛಿದ್ರಗೊಳಿಸಿದವು. ಅವಳು ಮತ್ತೆ ಹೊರಸಿನ ಮೇಲೆ ಅಡ್ಡಬಿದ್ದಳು ಮತ್ತು ಗಿಯಾಲಾನಿಗೆ ಕೊಟ್ಟ 'ವಚನ'ವನ್ನು ಮರೆತುಹೋದಳು.

ಮದುವೆಯಾದೊಡನೆ ಯಾವ ದಿವಸ ಅವಳು ಈ ಮನೆಯಲ್ಲಿ ಕಾಲಿಟ್ಟಿದ್ದಳೋ ಆ ದಿವಸದಿಂದಲೇ ಅವಳ ಅತ್ತೆ ಕೊಂಕು ಮಾತಾಡಲು ಶುರುಮಾಡಿದ್ದಳು, "ನಾವೇನು ಕತ್ತಿ ಮಸೆವವರೋ, ದೊಡ್ಡ ಮಂದಿ ಬೆಳ್ಳಿಯ ಬಳೆ ತೊಡಿಸಿ ಇವಳನ್ನು ನಮ್ಮ ತಲೆಗೆ ಬಡಿದುಬಿಟ್ಟರು . . . ಬರೇ ರೂಪ ತೆಗೆದುಕೊಂಡು ಯಾರು ಏನು ಮಾಡಬೇಕು? ಅದೇನು ಜೇನುತುಪ್ಪ ಹಾಕಿ ನೆಕ್ಕುತ್ತಾರೋ?" ಅವಳು ಬಲಂತೋಳ ಮೋರೆಯ ಮುಂದೆಯೇ ಹೀಗೆ ಕೊಂಕು ಮಾತು ಆಡಿದ್ದಿಲ್ಲ; ಆದರೆ ನೆರೆಹೊರೆಯ ಹೆಂಗಸರ ಮುಂದೆ ಅವಳ ಬಗೆಗೆ ಕೆಟ್ಟ ಕೆಟ್ಟ ಮಾತು ಆಡಿದ್ದಿಲ್ಲ.

ಬಲಂತೋಳಿಗೆ ಗೊತ್ತಾಗುತ್ತಿತ್ತು. ತನ್ನ ಕಡೆಯಿಂದ ಬಲಂತೋ ಯಾವುದೇ ದೂರಿಗೆ ಕಾರಣವಾಗಲು ಕೊಡುತ್ತಿದ್ದಿಲ್ಲ. ದಣಿಯದೆ ಅವಳು ಎಲ್ಲ ಮನೆಗೆಲಸ ಮಾಡುತ್ತಿದ್ದಳು. ಮನೆಯ ಹತ್ತು ಜೀವಗಳಿಗಾಗಿ ಅವಳು ಅಡಿಗೆ ಮಾಡುತ್ತಿದ್ದಳು. ಎಂಟು-ಹತ್ತು ದನಗಳನ್ನು ನೋಡಿಕೊಳ್ಳುತ್ತಿದ್ದಳು. ಯಾರ ಮೈ ಮೇಲೂ ಹೊಲಸುಬಟ್ಟೆ ಉಳಿಯಲು ಬಿಡುತ್ತಿದ್ದಿಲ್ಲ. ಮನೆಯನ್ನು ಕನ್ನಡಿಯಂತೆ ಹೊಳೆಯುವ ಹಾಗೆ ಇಡುತ್ತಿದ್ದಳು. ಇಷ್ಟೆಲ್ಲ ಮಾಡಿಯೂ ದಿನೇ ದಿನೇ ಅತ್ತೆಯ ಕೊಂಕು ನುಡಿಗಳು ಹೆಚ್ಚುತ್ತಲೇ ಹೋಗುವದನ್ನು ಕಂಡು ಕೇಳಿ ಅವಳ ಮನಸ್ಸು ಕುಂಠಿತ ವಾಗಹತ್ತಿತು. ಮೆಲ್ಲ ಮೆಲ್ಲಗೆ ಅವಳು ಏನಾದರೊಂದು ನೆವ-ನಿಮಿತ್ತ ಮಾಡಿ ಬಲಂತೋಳ ಮೋರೆಯ ಮೇಲೂ ಅವಳನ್ನು ದೂಷಿಸಿ ಮಾತಾಡಲು ಶುರು ಮಾಡಿದಾಗ ಬಲಂತೋಳ ತಾಳ್ಮೆ ಕೆಟ್ಟಿತು.

ಒಂದು ರಾತ್ರಿ ಅವಳು ಗಿಯಾಲಾನಿಗೆ ಎಲ್ಲ ವೃತ್ತಾಂತವನ್ನು ತಿಳಿಸಿದಳು. ಆದರೆ ಗಿಯಾಲಾ "ಹೆಣ್ಣಿನಂಥ ಗಂಡಸು" ಆಗಿದ್ದನು. ಆತ ಬಹಳ ಮಿದುವಾಗಿ ಹೇಳಿದ, "ನಾನು ಹುಟ್ಟಿದಂದಿನಿಂದಲೂ ಅವ್ವ- ಅಪ್ಪರ ಇದಿರು ಮಾತಾಡಿದ್ದೇ ಇಲ್ಲ. ಈಗ ನಾನು ಅವರಿಗೆ ಇದಿರಾಡಿದರೆ ಇಷ್ಟು ಕಾಲ ಬಚ್ಚಿಟ್ಟುಕೊಂಡು ಬಂದದ್ದೆಲ್ಲ ಬಾವಿಗೆ ತಳ್ಳಿದಂತೆ. ಬೇಕಾದ್ದು ಮಾಡು. ಆದರೆ ನನ್ನ ಅವ್ವ- ಅಪ್ಪಂದಿರ ಇದಿರು ಮಾತಾಡಬೇಡ, ಆಯುಷ್ಯವಿರುವನಕವೂ ಮಾತಾಡಬೇಡ."

ಗಿಯಾಲಾ ಅವಳಿಂದ ತಾಯಿ ತಂದೆಯ ಮುಂದೆ ಮಾತಾಡುವದಿಲ್ಲವೆಂದು 'ವಚನ' ತೆಗೆದುಕೊಂಡನು. ಈ 'ವಚನ' ಬಲಂತೋಳಿಗೆ ಹೀಗೆ ಅನಿಸಿತು, ಹೊಲ ದಲ್ಲಿ ಹರಿಯುವ ನೀರಿನ ನಾಲೆಗೆ ಯಾರೋ ಒಮ್ಮೆಲೇ ಬಾಯಿಕಟ್ಟಲು ಮುಳ್ಳು ಬಿದಿರಿನ ಟೊಂಗೆ ಕಟ್ಟಿಬಿಟ್ಟರು—ಬಲಂತೋಳ ಮನಸ್ಸು ನೀರಡಿಸಿದ ಹೊಲದಂತೆ ಮೊದಲು ಒಣಗಹತ್ತಿತು. ಆಮೇಲೆ ಅದರಲ್ಲಿ ಒಡೆದು ಬಿರುಕು ಬೀಳ ಹತ್ತಿದವು.

ಪೂರ್ತಿ ಮೂರುವರ್ಷ ಅವಳು ಅತ್ತೆಯ ಕಠೋರ ಕೊಂಕುಮಾತುಗಳನ್ನು ಕೇಳುತ್ತ ಕಳೆದಳು. ಹೆಂಡಕುಡುಕ ಮಾವ ಮತ್ತು ಮೈದುನರ ತಡೆಯಲಾರದಂತಹ ಬಿರುನುಡಿ ಬೈದಾಟಗಳನ್ನೂ ಕೇಳಿಕೊಳ್ಳುತ್ತಿದ್ದಳು. ಆದರೆ ಅವಳು ಗಿಯಾಲಾನಿಗೆ ಕೊಟ್ಟ 'ವಚನ'ವನ್ನು ಮುರಿಯಲಿಲ್ಲ. ಮದುವೆಯಾಗಿ ಬಂದ ಮೊದಲನೆಯ ದಿನದಿಂದಲೇ ಅವಳಿಗೆ ಗಿಯಾಲಾನ ಮೇಲೆ ಅಪಾರ ಮರುಕ. ಅವನನ್ನು ಎಳೆ ಮಗುವಿನಂತೆ ಎಲ್ಲ ಕಡೆಯಿಂದಲೂ ಅವಳು ಅಡಗಿಸಿ ಇಡುತ್ತಿದ್ದಳು.—ಈಗ ಅವಳ ಆ ಮರುಕ ಇಂಥ ಮಹಾ ಮೋಹವಾಗಿಬಿಟ್ಟಿತ್ತು. ಅವಳು ಅವನಿಗಾಗಿ ತನ್ನ ಸರ್ವಸ್ವವನ್ನೂ ಬಲಿಕೊಡಲು ಸಿದ್ಧಳಿದ್ದಳು.

ಆ ಮೇಲೆ ಅವಳ ಮೈದುನನ ಮದುವೆ ಆಯಿತು. ಅವನ ಹೆಂಡತಿ ಮನೆಯ ಒಳ-ಹೊರವನ್ನೆಲ್ಲ ವರದಕ್ಷಿಣೆಯ ಒಡವೆಗಳಿಂದ ತುಂಬಿಟ್ಟಳು. ಈಗ ಬಲಂತೋಳ

ಇದ್ದಬಿದ್ದ ಮಾನವೂ ಕಳೆದುಹೋಯಿತು. ಅವಳು ಗಿಯಾಲಾನಿಗೆ ಬೇರೆ ಆಗಲಿಕ್ಕೆ ಕೆಲವುಸಲ ಸಲಹೆಕೊಟ್ಟಳು. ಆದರೆ ಎಲ್ಲಿಯವರೆಗೆ ಅವನ ತಾಯಿ ತಂದೆ ಹಾಗೂ ತಮ್ಮ ಅವನನ್ನು "ಹೆಂಡತಿಯ ಗುಲಾಮ"ನೆಂದು ಜರೆದು ಹೆಂಡತಿಯ ಮೇಲೆ ನೂರಾರು ಆರೋಪ ಹೇರಿ ಅವನನ್ನು ಮನೆಯಿಂದ ಹೊರಗೆ ಹಾಕಲಿಲ್ಲವೋ ಅಲ್ಲಿಯವರೆಗೆ ಆತ ಅವರಿಂದ ಬೇರೆ ಆಗಲಿಲ್ಲ.

ಬೇರೆ ಆಗಬೇಕಾದರೂ ಅವನು ಹೆಣ್ಣಿನಂಥ ಸಂಗತಿಯನ್ನೇ ಮಾಡಿದ. ಅಪ್ಪ ಅವನ ಪಾಲಿನ ಗದ್ದೆಯನ್ನೂ ಪೂರ್ತಿ ಕೊಡಲಿಲ್ಲ. ಕೊಟ್ಟಗದ್ದೆಯೂ ಬಹಳ ಬಿರುಸು, ಕಸುವಿಲ್ಲದು. ಗಿಡ-ಗಂಟೆಗಳಿಂದ ತುಂಬಿದ್ದು. ಮನೆಯ ಪಾತ್ರೆ—ಪರಟೆಗಳೊಳಗೂ ಅವನಿಗೆ ಐದರಲ್ಲಿ ಒಂದು ಪಾಲು ಕೊಟ್ಟರು. ದುಡಿದು ದಣಿದು ಸುಕ್ಕಾದ ಮುದಿ ಎತ್ತುಗಳ ಒಂದು ಜೋಡಿ. ಯಾವ ಕೆಲಸಕ್ಕೂ ಬಾರದ್ದು ಅವನ ಪಾಲಿಗೆ ಬಂತು. ಬಲಂತೋ ತವರಿನಿಂದ ತಂದ ಪಾತ್ರೆ, ಅರ್ಧದಷ್ಟು ಬಟ್ಟೆಬರೆ ಎಲ್ಲವನ್ನೂ ಅವರು ಇಟ್ಟುಕೊಂಡರು. ಗಿಯಾಲಾ ಸುಮ್ಮನಿದ್ದ. ಬಲಂತೋಳೂ ಅವನಿಗೆ ಕೊಟ್ಟ 'ವಚನ'ಕ್ಕೆ ದೃಢವಾಗಿ ಅಂಟಿಕೊಂಡು ಇದ್ದಳು. ಇಬ್ಬರೂ ಸಹನೆಯ ಗುಟುಕು ನುಂಗಿ ಉಳಿದರು.

ಅವರು ಹೀಗೆ 'ಸಹನೆಯ ಗುಟುಕು' ಕುಡಿದು ಈಗ ಹನ್ನೊಂದು ವರ್ಷಗಳು ಕಳೆದವು. ಹನ್ನೆರಡನೆಯ ವರ್ಷವಾಗಿದೆ. ಹನ್ನೆರಡನೆಯ ವರ್ಷಕ್ಕೆ ತಿಪ್ಪೆಯ ರೂಪವು ಬದಲಾಗುವುದಂತೆ. ಅದೇ ಈ ವರ್ಷ. ಆದರೆ ಇವರಿಬ್ಬರ ಅದೃಷ್ಟ ಬದಲಾಗಲಿಲ್ಲ. ಅವರ ಅರೆ ಕುಸಿದ ಮನೆ ಅದೇ ಅವಸ್ಥೆಯಲ್ಲಿ ಬಿದ್ದಿತ್ತು—ಅದಕ್ಕೆ ಪಕ್ಕಾ ಇಟ್ಟಿಗೆಯ ಮಾತಿರಲಿ, ಕಚ್ಚಾ ಇಟ್ಟಿಗೆಯನ್ನು ಹಾಕಲು ಅವರಿಗೆ ಶಕ್ಯವಾಗಲಿಲ್ಲ. ಅದೇ ಕೊಟ್ಟಿಗೆ—ಜೇಷ್ಠ ಆಷಾಢದಲ್ಲಿ ಅಲ್ಲಿ ದನಗಳ ಮೈಮೇಲೆ ನೇರವಾದ ಉರಿಬಿಸಿಲು ಬೀಳುತ್ತಿತ್ತು, ಕೊಟ್ಟಿಗೆಯ ಮೇಲೆ ಹಾಕಿದ ಚಪ್ಪರವೂ ಅದೇ—ಬಿಸಿಲು ಕಂಡೊಡನೆ ಕೆಳಗೆ ದನಗಳಿಗೆ ಆಶ್ರಯ ಕೊಡುವ ಬದಲು ತಾವೇ ಹೆದರಿ ಎಬ್ಬಿಸಬಿಡುತ್ತಿತ್ತು. ಹಿತ್ತಲಮನೆ ಮಳೆಗಾಲದಲ್ಲಿ ನೀರಿನಿಂದ ತುಂಬಿರುತ್ತಿತ್ತು. ಬಲಂತೋ ಪ್ರತಿಸಲ ಮೈ ಮುರಿದು ಮನೆಯನ್ನು ಸಾವರಿಸಿಕೊಳ್ಳಲು ಹೆಣಗುತ್ತಿದ್ದಳು. ಆದರೆ ಕೇವಲ ಅವಳ ಕೈಯ ದುಡಿಮೆಯಿಂದ ಅರ್ಧ ಶತಮಾನ ಹಳೆಯ ಗೋಡೆಗಳೂ ಕಟ್ಟಿಗೆಯೂ ಹೊಸತಾಗುವಂತಿದ್ದಿಲ್ಲ. ಬೇರೆ ಆದಂದಿನಿಂದ ಅವಳು ಒಂದು ಭಾರಿ ಎಮ್ಮೆಯನ್ನು ಕೊಂಡು ಕೊಂಡಿದ್ದಿಲ್ಲ, ಬಲಿಷ್ಠ ಎತ್ತನ್ನೂ ತಂದಿದ್ದಿಲ್ಲ, ಚಕ್ಕಡಿಯ ಜೋಡಿಯೂ ಹೊಸತು ಮಾಡಿಸಿದ್ದಿಲ್ಲ. ತಿರುತಿರುಗಿ ಅಲ್ಲಲ್ಲಿ ತಗಡು ಹೊಡೆಯಿಸಿ ಆ ಜೋಲಿ ಹೊಡೆಯುವ ಡೊಗ್ಗಾಲ ಬಂಡಿಯನ್ನು ಹರಕು ಚಪ್ಪಲಿಯಂತೆ ಎಳೆದೆಳೆದು ನಡೆಯಿಸುತ್ತಿದ್ದ ಗಿಯಾಲಾ. (ಮಂದಿ ಗಿಯಾಲಾನ ಚಕ್ಕಡಿಯನ್ನು ಕಂಡು ತಮಾಷೆ ಮಾಡುತ್ತಿದ್ದರು.)

ಕಳೆದ ಹನ್ನೊಂದು ವರ್ಷ ಅವಳು ಅತ್ತೆ, ಮಾವ, ಮೈದುನರ ಶೀತ ಉಷ್ಣ ಕಟು ಶಬ್ದಗಳನ್ನು ಕೇಳುತ್ತಲೇ ಇದ್ದಳು, ಮತ್ತು ಗಿಯಾಲನ 'ವಚನ'ದ ಬಾಯಿಗೆ ಕಟ್ಟಿದ್ದ ಮುಳ್ಳು ಬಿದಿರಿನ ಟೊಂಗೆಯನ್ನು ಮುರಿಯಗೊಡಲಿಲ್ಲ. ಆ ಟೊಂಗೆ ಯೊಂದಿಗೆ ಇನ್ನೂ ಎಷ್ಟೋ ಚಿಕ್ಕ ದೊಡ್ಡ ವಸ್ತುಗಳೂ ಬಂದು ಒಟ್ಟಾಗಿದ್ದವು. ಮತ್ತು ನೀರಿನ ಚಲುವೆ ಒಮ್ಮೆಲೇ ತಡೆದು ಕಟ್ಟಿಹೋಗಿತ್ತು . . . ಅವಳ ಮನಸ್ಸು ಇಷ್ಟು ಕಾಲ ಬತ್ತಿ ಒಣಗಿದ್ದರಿಂದ ಎಕ್ಕದ ಹಣ್ಣಿನಂತೆ ಬಿರಿದುಹೋಗಿತ್ತು . . . ಮತ್ತು ಒಮ್ಮೊಮ್ಮೆ ನೀರು ಇಷ್ಟು ಒತ್ತಡದಿಂದ ಒತ್ತಿ ಬರುತ್ತಿತ್ತು—ಮುಳ್ಳು ಬಿದಿರ ಟೊಂಗೆ ಮುರಿದು ಬೀಳುವಂತಾಗುತ್ತಿತ್ತು.

ಇತರ ಜನ ಏನೇ ಬೇಕಾದ್ದು ಹೇಳಲಿ, ಆದರೆ ಸವತಿಯಂತೆ ಬಂದ ಮೈದುನನ ಹೆಂಡತಿಗೂ ಏನಾದರೂ ಉರಿಮಾತು ಚುಚ್ಚು ಮಾತು ಆಡದಿದ್ದರೆ ಬೇಸರ ಕಳೆಯುತ್ತಲೇ ಇದ್ದಿಲ್ಲ. ಅವಳು ಎಂಥ ಕುಲದಿಂದ ಬಂದವಳೋ ಗೊತ್ತಿಲ್ಲ. ಏಕೆಂದರೆ ಬಲಂತೋಳ ಸ್ಥಿತಿಗತಿ ಹಾಳಾಗುತ್ತ ಹೋದಂತೆ ಅವಳ ಕೊಂಕು ಮಾತಾಡುವದು ಹೆಚ್ಚಾಗುತ್ತಲೇ ಹೋಯಿತು. ಬಲಂತೋಳ ಹುಡುಗ ಏನಾದರೂ ಬೇಕೆಂದು ಅಳಹತ್ತಿದರೆ ಅವಳಿಗೆ ಒಳ್ಳೇ ಖುಷಿ. ಗಿಯಾಲಾ ಮತ್ತು ಬಲಂತೋ ದೊಡ್ಡ ದನಿಯೇರಿಸಿ ಮಾತಾಡುತ್ತಿದ್ದರೆ ಅವಳ ಎದೆಗೇನೋ ತಂಪು. ಗೋಡೆಗೆ ಕಿವಿ ಹಚ್ಚಿ ಎಲ್ಲವನ್ನೂ ಕೇಳಿಕೊಳ್ಳುತ್ತಿದ್ದಳು. ಮತ್ತು ಕಣವನ್ನೇ ಪರ್ವತವನ್ನಾಗಿ ಮಾಡಿ ಪ್ರಪಂಚದ ತುಂಬ ಹಬ್ಬಿಸುತ್ತಿದ್ದಳು.

ಮೊದಮೊದಲು ಬಲಂತೋಳಿಗೆ ಗೊತ್ತೇ ಆಗಲಿಲ್ಲ. ಈ ಮೈದುನನ ಹೆಂಡತಿಗೂ ತನ್ನೊಂದಿಗೆ ಏನು ವೈರವೆಂದು. ಒಂದು ದಿನ ಅವಳ ತಂದೆ ಹೊಸದಾಗಿ ಕರು ಹಾಕಿದ ಎಮ್ಮೆಯನ್ನು ಅವರಲ್ಲಿ ತಂದು ಕಟ್ಟಿಹೋದ. ಆಗ ನೆರೆಹೊರೆಯ ಬಚಂತೀ ಬಂದು ಮೈದುನನ ಹೆಂಡತಿಗೆ ಧನ್ಯವಾದ ಕೊಟ್ಟಳು ; ಆಗ ಗೋಡೆಯ ಮೇಲಿಂದ ಬಲಂತೋಳನ್ನು ವಾರೆ ನೋಟದಿಂದ ನೋಡುತ್ತ ಅವಳಿಗೆ ಕೇಳಿಸುವಂತೆ ಅಂದಳು, "ದೇವರು ಕೊಟ್ಟದ್ದೆಲ್ಲ ಉಂಟು. ಕಡಿಮೆ ಇಲ್ಲ—ಏಳು ಎಮ್ಮೆ ಕೊಟ್ಟಿಗೆ ಯಲ್ಲಿ ನಿಂತಿವೆ—ಆನೆಗಳಂತೆ. ಅಪ್ಪಯ್ಯ ಅನ್ನುತ್ತಿದ್ದ—ಮಗಳೇ ಬೇಕಾದ ಎಮ್ಮೆ ತೆಗೆದುಕೊಂಡು ಹೋಗು . . . ಮಂದಿಹಾಗೆ ಮಡಕೆ ಎತ್ತಿಕೊಂಡು ಮಜ್ಜಿಗೆಗಾಗಿ ಮನೆ ಮನೆಗೆ ತಿರುಗಾಡುವುದೇನೂ ಇಲ್ಲ . . ."

ಆಗಲೇ ಬಲಂತೋಳಿಗೆ ನಿಜವಾದ ಸಂಗತಿ ಗೊತ್ತಾದದ್ದು. ಮೈದುನನ ಹೆಂಡತಿಗೆ ತನ್ನ ತವರಿನ ಶ್ರೀಮಂತಿಕೆಯ ಹೆಮ್ಮೆ ಇತ್ತು. ಇದರಿಂದ ಅವಳಿಗೆ ಮಾವನ ಮನೆಯಲ್ಲಿಯೂ ಮನ್ನಣೆ ಇತ್ತು. ಆದ್ದರಿಂದಲೇ ಅವಳು ಬಲಂತೋಳನ್ನು ಒಂದು ಹುಳ-ಹುಪ್ಪಟೆಯಂತೆ ಕಾಣುತ್ತಿದ್ದಳು.

ಆಗಲೇ ಬಲಂತೋಳ ಮನಸ್ಸಿನಲ್ಲಿ ಮೊತ್ತಮೊದಲಿಗೆ ವಿಚಾರ ಬಂದಿತು—

ನಾನೂ ಉಂಡು ತಿಂದು ಸುಖವಾಗಿದ್ದ ತಂದೆ ತಾಯಂದಿರ ಮಗಳಾಗಿದ್ದರೆ. ಆ ಮೈದುನನ ಹೆಂಡತಿಯಂತೆ ನಾನೂ ನನ್ನ ಮನೆಬಾಗಿಲಿಗೆ ಎಮ್ಮೆ ತಂದು ಕಟ್ಟುತ್ತಿದ್ದೆ. ಆಗ ನನಗೆ ಈ ಕೊಂಕು ಮಾತು ಸಹಿಸಬೇಕಾಗುತ್ತಿರಲಿಲ್ಲ. ಆದರೆ ಅವಳ ಬಡ ತಾಯ್ತಂದೆಗಳಿಗೆ ಅವಳಿಗೆ ಮೂರು ಬಟ್ಟೆ ಕೊಂಡುಕೊಡುವಷ್ಟು ಯೋಗ್ಯತೆ ಇದ್ದಿಲ್ಲ. (ಆ ಕ್ಷಣದಲ್ಲಿ ಅವಳಿಗೆ ತನ್ನ ಬಡತನ ತುಂಬ ಅವಲಕ್ಷಣವಾಗಿ ಕಂಡಿತು.)

ಮತ್ತೆ ದಿನ ದಿನವೂ ನೀರು ಏರುತ್ತಲೇ ನಡೆಯಿತು. ಮುಳ್ಳು ಬಿದಿರಿನ ಟೊಂಗೆಗೆ ತನ್ನ ಕಸುವು ಮೀರಿ ಒತ್ತಡ ತಾಳಬೇಕಾಯಿತು. ಆದರೆ ಟೊಂಗೆಯ ಸುತ್ತು ಒಟ್ಟಾಗಿದ್ದ ಇತರ ವಸ್ತುಗಳು ಅದನ್ನು ಮುರಿಯಗೊಡಲಿಲ್ಲ. ಬಲಂತೋಳ ಒಳಗಿನ ನೆಲ ಇನ್ನೂ ಹೆಚ್ಚು ಬಿರುಕುಬಿಟ್ಟವು. ಅಲ್ಲಿಯ ಹುಲ್ಲುಕರಿಕೆಯ ಬುಡಗಳೂ ಸುಟ್ಟುಹೋದವು.

ಬಂಲತೋ ದಿನವಿಡೀ ಕೆಲಸಮಾಡದೆ ನಿಶ್ಚಲವಾಗಿ ಬಿದ್ದು ಉಳಿದಳು. ದಿನ ಏಳಿದಾಗ ಗಿಯಾಲಾ ಮನೆಗೆ ಮರಳಿದ. ಆಗ ಬಲಂತೋ ಹೊರಸಿನ ಮೇಲೆ ಬಿದ್ದಿರುವದನ್ನು ಕಂಡಾಗ ಅವನ ಎದೆಯಲ್ಲಿ ಹಿಂಡಿದಂತೆ ಆಯಿತು. (ಬಲಂತೋಳ ಅಳಿದುಳಿದ ರೂಪ-ರಂಗು ಕೂಡ ನಷ್ಟವಾಗಿ ಹೋಗಿತ್ತು. ಕಣ್ಣು ಇನ್ನಿಷ್ಟು ಆಳಕ್ಕೆ ಹೊಕ್ಕಿಕೊಂಡಿದ್ದವು. ಕೆಳಗಿಂದ ನೋಡಿದರೆ ಕಣ್ಣ ಕುಳಿಗಳಿಗೆ ಕಪ್ಪು ಚೆಲ್ಲಿದಂತೆ ಕಾಣುತ್ತಿತ್ತು. ಮುಖಚರ್ಯೆ ಮತ್ತು ಕೈಗಳು ಅರಸಿಣ ಹಚ್ಚಿದಂತೆ ಹಳದಿಯಾಗಿದ್ದುವು.)

ಗಿಯಾಲಾ ನಿರಾಶನಾಗಿ ದನಗಳ ಮೇವಿನ ದೊಡ್ಡ ಹೌದದ ಮೇಲೆ ಕೂತನು. ಅವನ ತಲೆ ಬೆನ್ನು ನೋಯಹತ್ತಿದ್ದುವು. ಅವನು ತಲೆತಗ್ಗಿಸಿ ಗುದ್ದಲಿಯ ಕಾವಿನತ್ತ ನೋಡಹತ್ತಿದನು. ಅವನ ತಲೆ ತಿರುಗುತ್ತಿತ್ತು. ಕನಸಿನಂತೆ ಅವನಿಗೆ ಬಲಂತೋಳ ಆ ನಯನ ನಕ್ಷತ್ರಗಳ ನೆನಪು ಬಂದಿತು; ಇಂದಿಗೆ ಹದಿನಾಲ್ಕುವರ್ಷಗಳ ಆಚೆ ಅವುಗಳ ತೇಜಸ್ಸು ನೋಡಲು ಹಿಡಿಸುತ್ತಿದ್ದಿಲ್ಲ. (ಹಾಲಿನಂಥ ಮೇಣದ ಹಾಳೆಯ ಗೊಂಬೆಯಂತೆ ಇದ್ದ ಈ ಹೆಣ್ಣಿಗೆ ಆತ ಜಗ್ಗಿ ಕೈ ಹಚ್ಚಲಿಕ್ಕೂ ಹಿಂಜರಿಯುತ್ತಿದ್ದ— ಆಕೆ ಎಲ್ಲಾದರೂ ಮಾಸಿ ಮೈಲಾಗಿಹೋದರೆ?—ಆ ಮುಖ ಸುಕ್ಕುಬಿದ್ದರೆ?)

ಗಿಯಾಲಾ ತಲೆ ಮೇಲೆತ್ತಿದಾಗ ಕಂಡ; ಇದಿರಿಗೆ ಮಾಧೀ ಕೂದಲು ಕೆದರಿ ಅಡ್ಡಾಡುತ್ತಿದ್ದನು. ಜಗ್ಗಿ ಹೆಂಡಕುಡಿದು ಆತ ಅಮಲಿನಲ್ಲಿ ತೂರಾಡುತ್ತಿದ್ದ. ಗಿಯಾಲಾ ಹೌದದ ಮೇಲೆ ಹೀಗೆ ಉದಾಸೀನನಾಗಿ ಕೂತಿದ್ದನ್ನು ಕಂಡು ಆತ ತುದಿಗಾಲ ಮೇಲೆ ನಿಂತು ನೋಡಿದನು, ಮತ್ತು ವ್ಯಂಗ್ಯದಿಂದ ದನಿಯೇರಿಸಿ ಅಂದನು: "ಕೇಳಿದೆಯಾ? ಗಂಡು ಗಂಡಾ, ಯಾವರಂಗಿನಲ್ಲಿದ್ದೀ?" ಅವನ ದನಿ ಕರ್ಕಶವಾಗಿತ್ತು, ನಿರ್ದಯತೆಯಿಂದ ತುಂಬಿತ್ತು.

ಗಿಯಾಲಾ ಅವನೊಡನೆ ಯಾವ ಮೇಲು-ಕೀಳು ಮಾತನ್ನೂ ಆಡಿದ್ದಿಲ್ಲ. ಅವನು ಬೇರೆಯಾಗಿ ಹನ್ನೊಂದು ವರ್ಷಗಳಾಗಿದ್ದವು. ಅವನ ಈ ಹೆಂಡಕುಡುಕ ತಮ್ಮ ಈ ನಡುವೆ ಹಲವಾರು ಸಲ ಅವನಿಗೆ ಕಟುವಾದ ಮಾತುಗಳನ್ನು ಆಡಿದ್ದುಂಟು. ಕೊಂಕು ನುಡಿದದ್ದುಂಟು. ಚುಚ್ಚಿ-ಚುಚ್ಚಿ ಮಾತಾಡಿದ್ದುಂಟು. ಬಲಂತೋಳಿಗೆ ನೇರವಾಗಿ ಬೈದದ್ದುಂಟು. ಆದರೆ ಅದಕ್ಕೆ 'ಲೇ' ಎಂದು ಕೂಡ ಗಿಯಾಲಾ ಮರು ಮಾತಾಡಿದ್ದಿಲ್ಲ. ಎಲ್ಲ ಮಾತುಗಳನ್ನು ನೀರಿನಂತೆ ಕುಡಿದು ಮನೆಯೊಳಗೆ ಹೊಕ್ಕಿ ಬಿಡುತ್ತಿದ್ದ. ಹಾಗೆ ಈಗಲೂ ಅವನು ಸುಮ್ಮನೆ ಒಳಗೆ ಹೋಗಿಬಿಟ್ಟನು. ಕೋಣೆಯ ನೆಳಲಿನಲ್ಲಿ ಅಡ್ಡಬಿದ್ದ ಬಲಂತೋ ಹೀಗೆ ಗಿಯಾಲಾ ಒಳಗೆ ಹೊಕ್ಕುವದನ್ನು ನೋಡಿದಾಗ ಅವಳ ಈ ಹದಿಮೂರುವರ್ಷ ಒಣಗಿ ಎಕ್ಕದದ ಹಣ್ಣಿನಂತೆ ಬಿರಿದ ಅವಳ ಮನಸ್ಸು ಬಿಸಿಲಿನ ಎಲ್ಲ ಕಿಚ್ಚು ಅದರ ಮೇಲೆಯೇ ಸುರಿದಂತೆ ಒಳಒಳಗೆ ಉರಿದೆದ್ದಿತು.

ಬಲಂತೋ ಎದ್ದು ಕುಳಿತಳು. ಆದರೆ ಮೈದುನನ ಬದಲು ಅವಳಿಗೆ ಹೆಂಡದಿಂದ ಮತ್ತನಾದ ಮಾವನು ಮುಂದೆ ನಿಂತದ್ದು ಕಂಡುಬಂತು. ಮಾಧೀ ನಗುತ್ತ ಆಚೆಗೆ ಹೊರಟು ಹೋಗಿದ್ದನು. ಅವಳು ತನ್ನ ಮರಣಾಸನ್ನ ಕಣ್ಣಾನಿಂದ ಯಮದೂತರ ಕಡೆಗೆ ನೋಡುವಂತೆ ಮಾವನ ಕಡೆಗೆ ನೋಡಿದಳು. (ಅವಳಿಗೆ ತಾನು ಮಾವನ ಇದುರು ತಲೆಯ ಮೇಲೆ ಸೆರಗು ಇಲ್ಲದೇ ಕೂತಿದ್ದೇನೆಂಬುದು ಬಹಳ ಹೊತ್ತಿನತನಕ ಧ್ಯಾನದಲ್ಲಿಯೇ ಬರಲಿಲ್ಲ. ಹೊರಸಿನ ಮೇಲೆ ಎದ್ದುಕುಳಿತಾಗ ಅವಳ ತಲೆಯಿಂದ ಜಾರಿದ ದುಪಟಿಯನ್ನು ಇನ್ನೂ ಎತ್ತಿ ಮೇಲೆ ಎಳೆದುಕೊಂಡಿದ್ದಿಲ್ಲ).

—ಮತ್ತು 'ವಚನ'ದ ಮುಳ್ಳುಬಿದಿರಿನ ಟೊಂಗೆ ಚಟ್ಟನೆ ಮುರಿಯಿತು. ಎಲ್ಲ ನೀರು ಆ ಮುರಿದ ಟೊಂಗೆಯೊಂದಿಗೆ ಅದರ ಆಚೆ ಈಚೆ ಒಟ್ಟಾಗಿ ಬಿದ್ದ ಚಿಕ್ಕದೊಡ್ಡ ವಸ್ತುಗಳೊಂದಿಗೆ, ಹತ್ತುವರ್ಷ ನೀರಿಗಾಗಿ ಹಸಿದಿದ್ದ ಕಾಲುವೆಯಲ್ಲಿ ನೆರೆಹಾವಳಿಯ ನೀರಿನಂತೆ ಹರಿದು ನುಗ್ಗಿತು ಮತ್ತು ಉರಿಯುತ್ತಿರುವ ಮನಸ್ಸಿನ ನೆಲದ ಕಲ್ಲರೆಯಂಥ ಬಿರುಸು ಬಿರುಕುಗಳು ಒದ್ದೆಯಾಗಿ ಇನ್ನಿಷ್ಟು ಒಡೆದುಬಿದ್ದವು.

"ನಿನ್ನs . . ." ಅವಳ ಮಾವ ಅವಳು ಹೀಗೆ ಬರಿತಲೆಯಿಂದ ಕೂತದ್ದು ಕಂಡು ದನಿಯೇರಿಸಿ ಬಯ್ದನು, "ನೀನು ನಮ್ಮನ್ನು ಬೇವರ್ಶಿಜನರಂತೆ ಮಾಡಿಬಿಟ್ಟಿ. ಲಜ್ಜೆಗೆಟ್ಟ ಹಾದರಗಿತ್ತಿ! ಚೂರು ಚೂರು ಮಾಡಿ ಕಡಿದುಹಾಕಿಬಿಟ್ಟೇನು. ಹೊರಗೆ ಗಾಳಿ-ಉಸಿರು ಹೊರಬೀಳಲಿಕ್ಕಿಲ್ಲ. ನೀನೇನೆಂದು ತಿಳಿದಿ? ಏನು ಮೈಮರೆತು ತಿರುಗುತ್ತಿದ್ದೀ?"

ಆದರ ಇಂದು ಬಲಂತೋಳಿಗೆ ಹಿಂದಿನಂತೆ ಮಾವನ ಬಗ್ಗೆ ಹೆದರಿಕೆ ಹುಟ್ಟಲಿಲ್ಲ. ದುಪಟ್ಟಿ ಎತ್ತಿ ತಲೆಯ ಮೇಲೆ ಎಳೆದುಕೊಳ್ಳಲೂ ಇಲ್ಲ. ಕಣ್ಣೂ ತಗ್ಗಿಸಲಿಲ್ಲ. ಮಾವನ ಕಡೆಗೆ ಹಾಗೆಯೇ ಕಣ್ಣುಬಿಟ್ಟು ನೋಡುತ್ತ ಕುಳಿತಳು.

"ಏನು ಮಾತು?" ತಂದೆ ಬಯ್ಯುವುದನ್ನು ಕೇಳಿ ಮಾಧೀ ಹತ್ತಿರಕ್ಕೆ ಬಂದು ಹೆಂಡವೇರಿದ ಸ್ವರದಲ್ಲಿ ತಂದೆಯನ್ನು ಕೇಳಿದನು.

"ನೋಡು, ಈ ಬೇವರ್ಶಿ ಜಂಗಲೀ ಕುಲದ ಮಗಳು ನಮ್ಮನ್ನು ಹೇಗೆ ನಗೆಗೀಡುಮಾಡಿದ್ದಾಳೆ—ಜಗದ ಮುಂದೆ! ಬಾಕಿ ಎಲ್ಲ ಕರ್ಮ ಮಾಡಿ ಮುಗಿಯಿತು. ಈಗ ಇದೊಂದು ಐಬು ಉಳಿದಿತ್ತು. ಅದನ್ನು ಪೂರಾ ಮಾಡಿದಳು. ನೋಡಿದೆಯಾ ಹೇಗೆ ಬೇವರ್ಶಿ ಜಂಗಲಿ ಹೆಣ್ಣಿನಂತೆ ಕೂತಿದ್ದಾಳೆ, ನಾಚಿಕೆಬಿಟ್ಟು . . . ಇಲ್ಲಿ ಸ್ವಲ್ಪ ನನ್ನ ಕೈಹಿಡಿ. ನಾನು ಈಗಲೇ ಹೋಗಿ ಇವಳ ತಂಟೆ ಮುಗಿಸಿಬಿಡುತ್ತೇನೆ. ಇಡೀ ಆಯುಷ್ಯದ ಶೋಕ ಮುಗಿದುಹೋಗಲಿ."

"ನೀನೇಕೆ ನಿನ್ನ ಬಿಳಿಕೂದಲಿಗೆ ಕಲಂಕ ಹಚ್ಚಿಕೊಳ್ಳುತ್ತೀ? ಆ ಪುಣ್ಯ ನನಗೇ ಗಳಿಸಲು ಬಿಡು. ಆಮೇಲೆ ನಮ್ಮ ಈ ಒಡ ಅಣ್ಣನ ಊಟ ಸುಧಾರಿಸಬಹುದು . . . ಈಗಲೇ ಇವಳನ್ನು ಅವನ ಕೊರಳಿಂದ ಇಳಿಸೇ ಬಿಡುವಾ!"—ಮಾಧೀ ತನ್ನ ಬಿಚ್ಚಿದ ಮಂಡೆಯ ಗಂಟು ಕಟ್ಟಿಕೊಳ್ಳುತ್ತ ಗರ್ಜಿಸಿದನು.

ಆಮೇಲೆ ಆತ ಹೌದವನ್ನೇರಿ ಗೋಡೆಯ ಮೇಲಿಂದ ಜಿಗಿದು ಬಲಂತೋಳ ಅಂಗಳದಲ್ಲಿ ಬಂದನು. ಬಲಂತೋಳ ಮಾವನೂ ಬಯ್ದಾಡುತ್ತ ಓಣಿಯ ದಾರಿಯಿಂದ ಅಲ್ಲಿ ಬಂದು ಮುಟ್ಟಿದನು. ಈ ಹೆಂಡಕುಡುಕರ ಗಲಾಟೆ ಕೇಳಿ ಗಿಯಾಲಾ ಒಳಗಿನಿಂದ ಹೊರಗೆ ಬಂದನು ಮತ್ತು ರಕ್ಕಸರಂತೆ ಬರುತ್ತಿರುವ ತನ್ನ ತಮ್ಮ ಮತ್ತು ತಂದೆಯನ್ನು ಕಂಡು ಕಂಗೆಟ್ಟನು.

. . . ಆದರೆ ಮುಳ್ಳು ಬಿದಿರಿನ ಟೊಂಗೆ ಮುರಿದುಹೋಗಿತ್ತು.

ಅವರಿಬ್ಬರೂ ಬರುವ ಮುಂಚೆಯೇ ಬಲಂತೋ ಹುಂಕಾರದೊಂದಿಗೆ ಎದ್ದು ನಿಂತಳು. ಅವಳ ಆಳಕ್ಕೆ ಹೂತ ಕಣ್ಣುಗಳು ಕೆಂಪುಕೆಂಪಾಗಿದ್ದವು. ತಲೆಯ ಮೇಲೆ ಸೆರಗು ಎಳೆದುಕೊಳ್ಳದೆ ಹಾಗೆಯೇ ಮೂಲೆಯಲ್ಲಿ ಬಿದ್ದಿರುವ ಕುಟ್ಟುವ ಕಲ್ಲನ್ನು ಎತ್ತಿಕೊಂಡಳು ಮತ್ತು ಚೀರಿ ಹೇಳಿದಳು:

"ಬನ್ನಿ, ಯಾರಿದ್ದಾನೋ ನೋಡುತ್ತೇನೆ—ನನ್ನಪ್ಪನ ಭಾವ, ನನ್ನ ಹತ್ತಿರ ಬರುವವ! . . . ಯಾರಾದರೂ ನನಗೆ ಕೈಹಚ್ಚಲಿ, ಅವನ ಕುಲಸಹಿತ ಕರುಳನ್ನೆಲ್ಲ ಹೊರಗೆ ತೆಗೆದುಬಿಡುತ್ತೇನೆ . . ."

ಅವಳು ಇಷ್ಟು ದೊಡ್ಡ ದನಿಯಲ್ಲಿ ಚೀರಿದಳು. ಗಿಯಾಲಾನಿಗೆ ಅವಳ ದನಿಯ ಗುರುತೇ ಹತ್ತಲಿಲ್ಲ. ಮಕ್ಕಳು ಹೆದರಿ ಹೌಹಾರಿ ಗೋಡೆಗೆ ಹೋಗಿ ಅಂಟಿಕೊಂಡವು. ಮತ್ತು ಜೋರಾಗಿ ಅಳತೊಡಗಿದವು. ಗಿಯಾಲಾನ ತಂದೆ ಮತ್ತು ಮಾಧೀ ಇಬ್ಬರೂ ತುಸು ತಬ್ಬಿಬ್ಬಾದರು. ಅವರಿಗೆ ನಂಬಿಕೆಯೇ ಹುಟ್ಟಲಿಲ್ಲ—ಹನ್ನೆರಡು ವರ್ಷಗಳವರೆಗೆ ಗೋಡೆಯಂತೆ ಅವರ ಚಪ್ಪಲಿಗಳ ಪೆಟ್ಟನ್ನು ತಿನ್ನುತ್ತ ಬಂದವಳು, ಕಠೋರ ಮತ್ತು ಕೆಟ್ಟ ಬೈಗಳನ್ನು ಕೇಳುತ್ತ ಬಂದವಳು ಈವರೆಗೆ ಬಾಯಿಯಿಂದ

ಯಾವುದೇ ಸ್ವರವನ್ನು ತೆಗೆಯದಿದ್ದವಳು—ಅವಳೇ ಹೆಂಗಸು ತಮ್ಮ ಇದಿರು ನಿಂತಿರುವವಳೋ, ಬೇರೆಯೋ ಎಂದು. ಅದೇ ಹೆಂಗಸು ಇಂದು ಕಲ್ಲುಕುಟ್ಟಾಣಿ ಎತ್ತಿ ಕೊಂಡು ಇಬ್ಬರು ಗಂಡಸರನ್ನು ಇದುರಿಸಿ ಸೆಟೆದು ನಿಂತಿದ್ದಾಳೆ. ಈ ಸಂಗತಿ ಅವರ ಸೆರೆಯ ಅಮಲೇರಿದ ಕಣ್ಣಿಗೂ ಅದ್ಭುತವೆನಿಸಿತು. ಆದರೆ ಮರುಕ್ಷಣಕ್ಕೆ ಆ ಸೆರೆಕುಡುಕ ಕಣ್ಣು ಆಳವಾಗಿ ವಿಚಾರಮಾಡದೆ ಇನ್ನೂ ಹೆಚ್ಚು ಕೆರಳಿದವು. ಮತ್ತು ಆ ಇಬ್ಬರೂ ತಂದೆ-ಮಕ್ಕಳು ಆ ಜಂಗಲಿ ಹೆಣ್ಣನ್ನು ಹರಿದು ತಿನ್ನಲಿಕ್ಕೆ ತೋಳಗಳಂತೆ ಏರಿಹೋದರು.

"ಬಲಂತೋಃ" ಗಿಯಾಲಾ ಕೂಗಿದ ಮತ್ತು ಅವಳಕಡೆಗೆ ನುಗ್ಗಿದ.

ಆದರೆ ಬಲಂತೋ!—ಈಗೆಲ್ಲಿ ಬಲಂತೋ? ಬಲಂತೋ ಈಗ ಇದ್ದೇ ಇದ್ದಿಲ್ಲ . . . ಮುಳ್ಳುಬಿದಿರಿನ ಟೊಂಗೆ ಎಂದೋ ಮುರಿದುಹೋಗಿತ್ತು.

ಗಿಯಾಲಾ ಇನ್ನೂ ಅವಳ ಹತ್ತಿರ ತಲ್ಪಿದ್ದಿಲ್ಲ. ಅಷ್ಟರಲ್ಲಿ ಬಲಂತೋ ತನ್ನ ಕಡೆಗೆ ನುಗ್ಗುತ್ತಿದ್ದ ಮಾಧಿಯ ಮೇಲೆ ಮುರಿದುಬಿದ್ದಳು.

ಅವಳು ಮಾಧಿಯ ಬಲ ಹೆಗಲಮೇಲೆ ಜೋರಿನಿಂದ ಕಲ್ಲಕುಟ್ಟಣಿ ಹೊಡೆದಳು. ಕೂಡಲೇ ಅವನ ಬಲತೋಳು ಮುರಿದ ಟೊಂಗೆಯಂತೆ ತೂಗಾಡಹತ್ತಿತು. ಮಾವ ಮುಂದೆ ಹಾಯ್ದ. ಆಗ ಮಾಧಿಯನ್ನು ಬಿಟ್ಟು ಬಲಂತೋ ಅವನ ಮೇಲೆ ಏರಿ ಹೋದಳು. ಕುಟ್ಟಾಣಿಯ ಒಂದು ತೀಕ್ಷ್ಣವಾದ ಪೆಟ್ಟು ಅವನಿಗೂ ತಾಗಿತು. ಆಗ ಆತ ಬೈಗಳನ್ನು ಉಗುಳುತ್ತ ಹಿಂಜರಿದು ಕೋಲನ್ನೋ ಬಿದಿರಕಂಬಿಯನ್ನೋ ಹುಡುಕಿ ತರುವ ನೆವದಿಂದ ಅಂಗಳದಕಡೆಗೆ ಹೋದನು. ಗಿಯಾಲಾ ಓಡಿಬಂದು ಬಲಂತೋಳ ಹತ್ತಿರ ತಲುಪಿದಾಗ ಅವಳು ಗದಾಯುದ್ಧದ ಆಟಗಾರನಂತೆ ಹಿಂದೆ ಸರಿದು ಹುಂಕಾರ ಹಾಕುತ್ತ ಹಿಂದಿನ ಗೋಡೆಗೆ ಆನಿಸಿಕೊಂಡು ನಿಂತಿದ್ದಳು. ಅಲ್ಲಿಂದಲೇ ಅವಳು ಒದರಿದಳು.

"ಬರಲಿ, ಯಾವ ಸಂಬಂಧಿಕ ಬರುವನೋ ಬರಲಿ. ನನ್ನ ಹತ್ತಿರಕ್ಕೆ ಒಮ್ಮೆ ಬರಲಿ—ನೋಡು—ನೀವು ಮಂದಿ ಹದಿನಾಲ್ಕುವರ್ಷ ನನ್ನ ಎದೆ ಸುಡಿಸಿದಿರಿ—ಹೆಂಗಸೆಂದು ಅಲ್ಲವೇ?—ತುಸು ಹತ್ತಿರ ಬಾರಲ್ಲ, ನಿನ್ನ ರಕ್ತಾನೂ ಕುಡಿದುಬಿಡುತ್ತೇನೆ—ಮತ್ತೆ ಆ ನಿಮ್ಮ 'ಹೂವಿನ ಮಗಳ'ನ್ನೂ ಕರೆದು ತಾ. ಅವಳು ದಿನಾಲು ರಾಜಾ ತಂದೆ-ತಾಯಿಗಳಿಂದ ಆನೆಗಳನ್ನು ತಂದು ತಂದು ಕಟ್ಟುತ್ತಾಳೆ—ಹೊಲಸಿಗೆ ಹಸಿದವರೇ ದೊಡ್ಡ ಗಂಡಸುತನದವರೇ, ಈಗ ಸ್ವಲ್ಪ ಈ ಕಂಗಾಲರ ಮಗಳ ಹತ್ತಿರ ಬಂದು ನೋಡಿ . . . ಹದಿನಾಲ್ಕುವರ್ಷ ನಾನು ನಿಮ್ಮ ಮಾತು ಕೇಳಿದೆ, ಆದರೆ ನಾನೊಬ್ಬ ಬಡವಿ ಎಂದು ನನ್ನ ಜೀವ ಕೊಚ್ಚುತ್ತಲೇ ಉಳಿದಿರಿ—ಬನ್ನಿ. ಈಗ ಹತ್ತಿರ ಬನ್ನಿ—ಸ್ವಲ್ಪ ಹೆಂಗಸಿನ ಕೈಯಾದರೂ ಒಮ್ಮೆ ನೋಡಿ. ವೀರರೇ, ನಿಮ್ಮ ನೆತ್ತರು ಕುಡಿದು ಬಿಟ್ಟೇನು!"

ಒಂದು ಕ್ಷಣಕಾಲ ಅವಳ ಮೋರೆ ಇಷ್ಟು ಕೆಂಪಾಯಿತು, ಇದೀಗ ಅವಳು

ನಿಜವಾಗಿಯೂ ನೆತ್ತರ ಕುಡಿದೇ ಬಂದಳೋ ಏನೋ ಎಂಬಂತೆ ಅನಿಸಿತು. ಅವಳ ಹತ್ತಿರಕ್ಕೆ ಸರಿಯಲು ಎಲ್ಲರೂ ಹೆದರಿ ಬೆಚ್ಚಿಬಿದ್ದು ಹಿಂಜರಿದರು.

ಗದ್ದಲ ಕೇಳಿ ಆಚೆಈಚೆಯ ಎಲ್ಲ ಜನ ಅಲ್ಲಿ ಒಟ್ಟಾದರು. ಬಲಂತೋ ಹೀಗೆ ಬರಿತಲೆಯಿಂದ ಕೈಯಲ್ಲಿ ಕಲ್ಲುಕುಟ್ಟಾಣಿ ಎತ್ತಿಕೊಂಡು ನಿಂತು ಯುದ್ವಾತದ್ವಾ ಮಾತಾಡುವದನ್ನು ನೋಡಿ ಕೇಳಿ ಬಹಳಷ್ಟು ಜನ ಲಜ್ಜೆಯಿಂದ ದೃಷ್ಟಿ ತಗ್ಗಿಸಿದರು. ಕೆಲವರು ಗಿಯಾಲಾನ ತಂದೆ ಮತ್ತು ಮಾಧಿಯರನ್ನು ಕಂಡರೆ ಆಗದವರು ನೋಡಿ ಮುಗುಳುನಗುತ್ತ ಗಟ್ಟಿದನಿಯಿಂದ ಹಾಸ್ಯಮಾಡುತ್ತ ನಿಂತರು. ಇಂದರ ನಂಬರದಾರ ತನ್ನ ಅರವತ್ತುವರ್ಷದ ಪ್ರಾಯದಲ್ಲಿ ಇಷ್ಟು ನಿರ್ಲಜ್ಜ ಹೆಂಗಸನ್ನು ಕಂಡಿದ್ದಿಲ್ಲ. ಅವ ನಾಚಿಕೆ ಮತ್ತು ಸಿಟ್ಟಿನಿಂದ ಕರಗಿ ನೀರುನೀರಾದನು. ಈ ರೀತಿ ಬಯ್ಯು ಬಡಬಡಿಸುವ ಹೆಣ್ಣು ಅವನಿಂದ ನೋಡಲಾಗಲಿಲ್ಲ. ಆತ ಮುಂದೆ ಸರಿದು ತನ್ನ ಹಳಬತನ ಮತ್ತು ಚೌಧರಿಯೆಂಬ ಊರ ಹಿರಿತನಗಳ ದರ್ಪವನ್ನು ಬೀರುತ್ತ ಗಜರಿಸಿ ಅಂದನು, "ಸುಮ್ಮನೆ ಉಳಿಯುವಿಯೋ ಇಲ್ಲವೋ! . . . ಜಂಗಲೀ ಹುಡುಗಿ. ಕಂಜರ ಕುಲದ ಕನ್ನೆ ಪಿಶಾಚಿಯಂತೆ ಯಾವ ಮಾತಿಗೆ ಹೀಗೆ ಅಮಲೇರಿದೆ ನಿನಗೆ?"

ಆತ ಸ್ವಲ್ಪ ಮುಂದೆ ಬಂದ. ಅಷ್ಟರಲ್ಲಿ ಬಲಂತೋ ಗರ್ಜಿಸಿ ಕಿರುಚಿದಳು, "ಬಾ ಬಾ, ನೋಡಿಕೋ. ನಿನ್ನ ಮುಂಡಾಸ ಕಳಚಿಬಿದ್ದೀತು. ನಿನ್ನ ನಂಬರದಾರಿ ನಿನ್ನೊಟ್ಟಿಗೇ ಇರಲಿ. ಈ ಮಂದಿ ನನ್ನ ಮೇಲೆ ಜುಲುಮೆ ಮಾಡುತ್ತಿದ್ದಾಗ ಪಂಚಾಯತಿ ಮಾಡುವ ದೊಡ್ಡಮನುಷ್ಯ ನೀನು ಎಲ್ಲಿ ಹೋಗಿದ್ದೆ? ಇದೇ ಊರಲ್ಲಿಯೇ ಇದ್ದೆಯೋ ಹೊರಗಲ್ಲಾದರೂ . . .?"

ನಂಬರದಾರ ದೊಡ್ಡಮನುಷ್ಯ ನಾಲಿಗೆ ಕಚ್ಚಿಕೊಂಡ.

ಮತ್ತು ಒಮ್ಮೆಂದೊಮ್ಮೆ ಥಾಳ ಹೊರಳಿ ಬಿತ್ತು. ಇಂದರ ನಂಬರದಾರ ಗಿಯಾಲಾನ ಮೇಲೆ ಬಿರುಮಳೆಗರೆದುಬಿಟ್ಟ. ಆತ ಹತ್ತಿರನೇ ಎಲ್ಲ ಕಳೆದುಕೊಂಡವ ನಂತೆ ನಿಂತಿದ್ದ. "ಸಾಲಾ, ನೀನೂ ಒಬ್ಬ ಮನುಷ್ಯನೋ? ಈ ಕೊಡಗಿತ್ತಿ ಯಂಥವಳಿಗೆ ನೀನು ತಲೆಯ ಮೇಲಿರಿಸಿಕೊಂಡು ಇಟ್ಟುಬಿಟ್ಟೆ! ಇಂಥ ಕುರಿಗಳ ಬೆನ್ನಿಗೆ ನೀನು ಇಡೀ ಊರಿನ ಮರ್ಯಾದೆಗೇಡು ಮಾಡುತ್ತೀ? ನಾಯಿಯಂಥವ, ನಿನಗೆ ನಾಚಿಕೇನೇ ಇಲ್ಲವೇ?"

ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಜನರು ಬಲಂತೋಳನ್ನು ಬಿಟ್ಟು ಗಿಯಾಲಾನ ತಲೆಯ ಮೇಲೆ ಹತ್ತಿ ಸವಾರಿಮಾಡಹತ್ತಿದರು. ಇಲಿಯನ್ನು ಬೆನ್ನಟ್ಟುವ ಹದ್ದುಗಳಂತೆ ಜನರು ಗಿಯಾಲಾನನ್ನು ಹಿಡಿದುಬಿಟ್ಟರು.

"ಮುಂಡೇ ಮಗನೇ, ನೀನು ಮನುಷ್ಯನೋ?"

"ಇವನಲ್ಲಿ ಗಂಡಸುತನವಿದ್ದಿದ್ದರೆ ಈ ಹೆಣ್ಣು ಇಷ್ಟೆಲ್ಲ ತಲೆಗೇರಿ ಕೂಡ್ರುತ್ತಿದ್ದಿಲ್ಲ. ಓಯ್."

"ಇವ ಹೆಣ್ಣುಮಕ್ಕಳನಂತರ ಹುಟ್ಟಿದವ. ಹೆಣ್ಣಿಗಿಂತಲೂ ಕಡೆ!"

"ನನ್ನ ಹೆಂಡತಿ ಹೀಗೇನಾದರೂ ಮಾಡಿದ್ದರೆ ಅವಳನ್ನು ಸೀಳಿ ಮನೆ ಒಳಗೆ ಒಗೆಯುತ್ತಿದ್ದಿಲ್ಲ, ಆ ಹುಚ್ಚುಮುಂಡೇಸ್ನ . . ."

"ಓಯ್, ಏನಿದು ಹೆಣ್ಣಿನ ಧಿಮಾಕು!—ಹೀಗೆ ಮಾತಾಡುತ್ತಾಳೆ! ಮಂಡೆ ಹಿಡಿದು ಕುತ್ತಿಗೆಗೆ ನಾಲ್ಕು ಬಿಗಿಯಿರಿ—ತಕಲಿಯ ಹಾಂಗೆ ನೇರವಾಗಿಬಿಡುತ್ತಾಳೆ ನೋಡಿ."

ಗಿಯಾಲಾ ಹೀಗೆ ಬಯ್ಗಳನ್ನೂ ಬಿರುನುಡಿಗಳನ್ನೂ ಕೇಳುತ್ತ ನಿಂತ. ಆದರೆ ಇದೆಲ್ಲ ಅವನಿಗೆ ಒಂದು ಶುದ್ಧ ಕನಸಾಗಿ ಕಂಡಿತು. 'ಹೆಂಡತಿ' ಎಂಬ ಶಬ್ದ ಕೇಳಿದಾಗೆಲ್ಲ ಅವನ ಅವಸ್ಥೆ ನೂರಾರು ಮಂದಿ ಅವನ ಎರಡೂ ತೋಳು ಹಿಡಿದು ಹಗ್ಗದ ಜಗ್ಗಾಟ ಮಾಡುತ್ತಿದ್ದಂತೆ ಆಗುತ್ತಿತ್ತು. (ಬಲಂತೋ ಅದೇ ಹೆಂಗಸಾಗಿದ್ದಳು. ಅವನಿಗಾಗಿ ಎಲ್ಲವನ್ನೂ ಬಿಟ್ಟುಕೊಟ್ಟವಳು. ತನ್ನ ದೇಹವನ್ನು ನೊರಗಿಸಿಕೊಂಡವಳು. ಒಮ್ಮೊಮ್ಮೆ ಅವನಿಗೆ ಅನಿಸುತ್ತಿತ್ತು, ಬಲಂತೋಳಲ್ಲಿಯೇ ಅವನ ಪ್ರಾಣವಿತ್ತು—ಕಥೆಗಳಲ್ಲಿ ಅರಸನ ಪ್ರಾಣ ಯಾವದೋ ಅಶ್ವತ್ಥಮರದ ಮೇಲೆ ತೂಗುವ ಗಿಳಿಯೊಳಗೆ ಇರುವಂತೆ) ಈ ಜನ ತನ್ನ ಹೆಂಡತಿಯೊಂದಿಗೆ ಏನು ಹೇಳುತ್ತಿದ್ದರು? ಗಿಯಾಲಾನ ಅವಸ್ಥೆ ಮೂರ್ಛೆಬಂದವನಂತೆ ಆಯಿತು. ಆತ ಒಮ್ಮೆಲೆ ಹುಚ್ಚುಹಿಡಿದಂತೆ ಆದ.

ಕೊನೆಗೂ ಕೆಲವರು ಬುದ್ಧಿವಂತರು ದೀರ್ಘ ಆಲೋಚನೆಮಾಡಿ ಮಾಧಿ ಮತ್ತು ಅವನ ತಂದೆಯನ್ನು ಬಲಾತ್ಕಾರದಿಂದ ಹಿಡಿದು ಅಲ್ಲಿಂದ ಸೆಳೆದೊಯ್ದರು. ಪ್ರತಿಯೊಬ್ಬರೂ ಬಲಂತೋ ಮತ್ತು ಈ 'ಹೆಣ್ಣಿಗ' ಗಿಯಾಲನಿಗೆ ಮನಸೋಕ್ತ ಬಯ್ದದ್ದೇ. ಕ್ರಮೇಣ ಎಲ್ಲ ಜನ ಅಲ್ಲಿಂದ ಹೊರಟುಹೋದರು. ಅಂಗಳದ ಗುಲ್ಲು-ಗದ್ದಲ ಇಡಿ ಊರತುಂಬ ಹಬ್ಬಿತು. ಆದರೆ ಬಲಂತೋ ಹಾಗೆಯೇ ಕಲ್ಲುಕುಟ್ಟಾಣಿ ಹಿಡಿದುಕೊಂಡು ಈಗಲೂ ಗೋಡೆಗೆ ಅಂಟಿಕೊಂಡು ನಿಂತಿದ್ದಳು.

ಗಿಯಾಲಾ ಕಳ್ಳ ಬಾವುಗನಂತೆ ಕೋಣೆಯೊಳಗೆ ಹೋಗಿ ಹೊಕ್ಕನು (ಅವನಿಗೆ ಗೊತ್ತೇ ಇದ್ದಿಲ್ಲ; ಒಳಗೆ ಹೊಕ್ಕಿದೊಡನೆ ಅವನು ಯಾವಾಗ ಕಿರಿದಾಗಿ ನಗಹತ್ತಿದ, ಮತ್ತು ಅವನ ಆ ವಿಚಿತ್ರ ನಗೆ ನೋಡಿ ಆ ಸಂಜೆಯ ಮಾಸಲು ಮಬ್ಬು ಬೆಳಕಿನಲ್ಲಿ ಕಳವಳಗೊಂಡ ಮಕ್ಕಳು ಇನ್ನಿಷ್ಟು ಗಾಬರಿಗೆಟ್ಟು ಒಮ್ಮೆಲೆ ಸ್ತಬ್ಧರಾದರು!)

ಮತ್ತು ಅದೇ ಕಾರಣಕ್ಕೆ ಅವನಿಗೆ ಹೊರಗೆ ಯಾವದೋ ವಸ್ತು ಬಿದ್ದ ಸದ್ದು ಕೇಳಿಸಿತು—ಬಿರುಗಾಳಿಯಲ್ಲಿ ಬೀಟೆ ಮರದ ಒಣ ಟೊಂಗೆಯೊಂದು ಮುರಿದು ಬಿತ್ತೋ ಎಂಬಂತೆ ಆತ ಹೊರಗಡೆಗೆ ಓಡಿದ. ಬಲಂತೋ ಮೊಗಚಿ ಬಿದ್ದಿದ್ದಳು. ಆತ ಅವಳನ್ನು ತೋಳುಗಳಲ್ಲಿ ಹಿಡಿದೆತ್ತಿ ಒಳಗಡೆ ಹೊತ್ತು ಒಯ್ದನು.

ಈ ಘಟನೆ ನಡೆದ ಎಳನೆಯದಿನ ಬಲಂತೋ ಸತ್ತಳೆಂದು ಊರಿನ ಜನ ಕೇಳಿತು.

# ಶೂಲದ ಮೇಲೆ ತೂಗಿದ ಕ್ಷಣ

ಕರುಣಾ ನಸುಕಿಗೆ ನಿದ್ದೆ ತಿಳಿದು ಎದ್ದಾಗ ಈ ಹೊತ್ತಿನ ದಿನ ಲೀನೂ ಜತೆಗೆ ಹೇಗೆ ಕಳೆಯಲಿ—ಎಂದು ಅವಳಿಗೆ ಗೊತ್ತೇ ಆಗಲೊಲ್ಲದು. ರವಿವಾರವಿತ್ತು. ಹಾಸಿಗೆಯಿಂದ ಏಳಲಿಕ್ಕೆ ಕರುಣಾಳ ಮನಸ್ಸು ಒಪ್ಪುತ್ತಿದ್ದಿಲ್ಲ. ಒಂದು ವಿಚಿತ್ರ ಅರಮರವು ಮತ್ತು ಶಿಥಿಲತೆ ಅವಳ ಅಂಗೋಪಾಂಗಗಳ ಮೇಲೆ ಪಾಚಿಯಂತೆ ಕವಿದು ಕೂತಿತ್ತು.

ಎಷ್ಟೋ ರಾತ್ರಿಗಳಿಂದ ಅವಳಿಗೆ ಚೆನ್ನಾಗಿ ನಿದ್ದೆಯೇ ಬಂದಿದ್ದಿಲ್ಲಾ. ದಿನಾಲು ನಸುಕಿಗೆ ಹಾಸಿಗೆಯಿಂದ ಎದ್ದಾಗ ಅವಳಿಗೆ ಇಡಿ ರಾತ್ರಿ ಮೈಲುಗಟ್ಟಲೆ ನಡೆಯುತ್ತ ಇದ್ದಂತೆ ಅನಿಸುತ್ತಿತ್ತು. ನಸುಕಿಗೆ ಎದ್ದು ಮಂದಿಯ ಮೈ ಹೂವಿನಂತೆ ಹಗುರಾಗುತ್ತದೆ, ಹೊಸತಾಗುತ್ತದೆ. ಆದರೆ ಅವಳು ಒಜ್ಜೆ ಹೇರಿದಂತೆ, ದಣಿದಂತೆ ಏಳುತ್ತಿದ್ದಳು.

ಈ ಹೊತ್ತು ರಾತ್ರಿ ಅಂತೂ ಅವಳಿಗೆ ಏನೇನೂ ನಿದ್ದೆ ಹತ್ತಲಿಲ್ಲ. ನಸುಕಿಗೆ ಅವಳು ಕೋಳಿಯ ಕೂಗು ಕೇಳಿದ್ದಳು ; ಮೆಲ್ಲಗೆ ಎದ್ದು ಲೀನೂಳ ಮಂಚದ ಮೇಲೆ ಹೋಗಿ ಅಡ್ಡಾದಳು ಮತ್ತು ನಿದ್ದೆಹೋದ ಲೀನೂಳನ್ನು ನೋಡುತ್ತ ಉಳಿದಳು ; ಅವಳ ಚಿಕ್ಕ ದುಂಡನ್ನ ಗಲ್ಲಕ್ಕೆ ತನ್ನ ಗಲ್ಲ ತಿಕ್ಕಿದಳು. ಆಮೇಲೆ ಅವಳಿಗೆ ಯಾವಾಗ ಕಣ್ಣು ತಾಗಿತೋ ಗೊತ್ತಾಗಲಿಲ್ಲ.

ನಸುಕಿಗೆ ಕರುಣಾಳ ನಿದ್ದೆ ತಿಳಿದೊಡನೆ ಆಕೆ ವಿಚಾರಮಾಡಹತ್ತಿದಳು. ಈ ಹೊತ್ತಿನ ದಿನ ಅವಳು ಹೇಗೆ ಕಳೆಯಬೇಕು ? ನಿದ್ದೆ ಮಾಡಬೇಕೇ ? ಬಿದ್ದಿರಬೇಕೇ ? ಅಥವಾ ಎದ್ದು ಹೋಗಬೇಕೇ ? ಬಹಳ ಹೊತ್ತು ಅವಳು ಹಾಗೆಯೇ ಬಿದ್ದುಳಿದಳು. ಲೀನೂಳ ಸಮಾನವಾದ ಉಸಿರನ್ನು ಕೇಳುತ್ತ ಉಳಿದಳು. ಅವಳ ಕೆಲಸದವಳು ಚಹದ ಬಿಸಿಬಿಸಿ ಲೋಟ ತಂದು ಹತ್ತಿರದ ಕಿರ ಮೇಜಿನ ಮೇಲೆ ಇಟ್ಟಾಗ ಅವಳು ಎದ್ದು ಕುಳಿತಳು.

"ಬಾಯವರೇ, ಇದೇನು ಆತು ? ಏಳಾಕಿಲ್ಲ ?"

"ಏನಿಲ್ಲ, ಕಟೋರಿಯಾ ; ಇಂದು ರವಿವಾರ."

"ಇಂದು ರವಿವಾರ, ನಾಳೆ ಸೋಮವಾರ, ಸೋಮವಾರ ಬೆಳಿಗ್ಗೆ . . ."

"ಸರಿ, ಸರಿ, ಸಾಕು. ಏನೂ ವಿಚಾರಮಾಡಬೇಡ. ಆ ವಿಚಾರವೇನೂ ಬೇಡ." ಅವಳ ಅಂತರಾಳದಲ್ಲಿ ಯಾರೋ ಚೀರಿದಂತಾಯಿತು.

ಚಹದ ಲೋಟಾ ಮುಗಿಸಿ ಅವಳು ತಿರುಗಿ ಮೇಜಿನ ಮೇಲೆ ಇಟ್ಟಳು.

ಅವಳಿಗೆ ಅನಿಸಿತು—ಅವಳ ತಲೆಯಲ್ಲಿ ಯಾವದೋ ಬಿರುಗಾಳಿ ಎದ್ದಗದ್ದಲ.

ಭಟ್ಟಿಯ ಬೂದಿ ಇದೆ, ದೂರದಿಂದ ಬರುವ ಹುಂಕಾರವಿದೆ. ಅದರ ಜೋರಿಗೆ ಏನೂ ಕಾಣದು, ಏನೂ ಕೇಳದು.

ಇಂದು ರವಿವಾರ, ಮತ್ತೆ ನಾಳೆ ಸೋಮವಾರ. ಮತ್ತು ಸೋಮವಾರ ಮುಂಜಾನೆ . . .

ಕರುಣಾ ಗಡಿಯಾರದತ್ತ ನೋಡಿದಳು. ಎಂಟೂವರೆ ಆಗಿತ್ತು. ನಾಳೆ ಹತ್ತು ಬಡಿದ ನಂತರ ಯಾವ ವೇಳೆಗೂ—ಯಾವವೇಳೆಗೂ. ಹಾಂ ನಿಜ ಸಂಗತಿಯೆಂದರೆ ಇಪ್ಪತ್ತೈದೂವರೆ ತಾಸುಗಳು ಉಳಿದಿರುವವಲ್ಲವೇ ?

ಕರುಣಾ ಲೀನಾಳ ಮೋರೆಯ ಕಡೆಗೆ ನೋಡಿದಳು. ಲೀನಾಳ ಕಪ್ಪು ಉದ್ದ ರೇಶಿಮೆಯಂದದ ಎವೆಗಳು ಅವಳ ದುಂಡನ್ನ ಗಲ್ಲಗಳ ಅಂಚಿಗೆ ಹಗುರಾದ ನೆರಳು ಚಾಚಿದ್ದುವು. ಅವಳ ಕೂದಲ ಒಂದೆರಡು ಕುರುಳು ಜಲ್ಪು ತಲೆಯಿಂದ ತೊನೆದಾಡುತ್ತಿದ್ದುವು. ಕರುಣಾಳಿಗೆ ಮಿಸೆಸ್ ದೀವಾನಳು ಅಂದದ್ದು ನೆನಪಾಯಿತು. "ಅಯ್ಯೋ ನಿನ್ನ ಮಗಳು ಬರೇ ಆರೇಳುವರ್ಷ ಹೆಚ್ಚು ದೊಡ್ಡವಳಾಗಿದ್ದರೆ, ಅವಳನ್ನು ನಮ್ಮ ಲಲಿತನ ಹೆಂಡತಿಯಾಗಿ ಮಾಡಿಕೊಳ್ಳುತ್ತಿದ್ದೆ. ಲೀನೂಮಗೂ, ನೀನು ಆರೇಳುವರ್ಷ ಮುಂಚೆ ಯಾಕೆ ಹುಟ್ಟಲಿಲ್ಲ ?"

ಲೀನೂ ನಾಚಿಕೊಂಡು ಅನ್ನುತಿದ್ದಳು, "ನಂಗೆ ಗೊತ್ತಿಲ್ಲ ಆಂಟೀ. ಅದು ನನ್ನ ಮಮ್ಮಿಗೇ ಗೊತ್ತು. ಹೇಳು ಮಮ್ಮೀಽಽ."

ಗೊತ್ತಿಲ್ಲ. ಅದೇನು ನಗೆ ಮುಗುಳೋ ಕಂಬನಿಯೋ ನಿಟ್ಟುಸಿರೋ—ಯಾವದೋ ಕರುಣಾಳ ಗಂಟಲಲ್ಲಿ ಬಂದು ಸಿಕ್ಕಿ ನಿಂತಿತು. ಕರುಣಾ ಒಂದು ಒಣ ಗುಟುಕು ನುಂಗಿದಳು—ಗಂಟಲಲ್ಲಿ ಸಿಕ್ಕಿಕೊಂಡ ಯಾವದೋ ವಸ್ತುವನ್ನು ನುಂಗಲು ಯತ್ನಿಸಿದಳು.

ಕರುಣಾ ಯಾವ ಪರಿವೆಯೂ ಇಲ್ಲದಂತೆ ದಿನಪತ್ರಿಕೆ ತೆರೆದು ತಿರುವಿ ಹಾಕಹತ್ತಿದಳು. ಸಪ್ರೂ ಹೌಸಿನಲ್ಲಿ ಮಕ್ಕಳಿಗಾಗಿ ಎರಡು ಬಹಳ ಒಳ್ಳೆಯ ಫಿಲ್ಮು ತಾಗಿದ್ದವು. "ಹಾಂ, ಇದೇಸರಿ. ಲೀನೂಳ ಅಲ್ಲಿ ಒಯ್ಯೋಣ. ಮತ್ತೆ ಗೊತ್ತಿಲ್ಲ . . ."

ಕರುಣಾ ಲೀನೂಳನ್ನು ಎಬ್ಬಿಸಿದಳು. ತಯಾರು ಮಾಡಿದಳು. ಲೀನೂ ಕೇಳಿದಳು. "ಅಮ್ಮೀ, ಯಾವ ಫ್ರಾಕು ಉಡಲಿ ?"

ಕರುಣಾ ಕಪಾಟನ್ನು ತೆರೆದಳು. ಲೀನೂಳ ಫ್ರಾಕ್, ಸ್ಕರ್ಟ್, ಬ್ಲವುಜ್‌ಗಳೆಲ್ಲ ಹ್ಯಾಂಗರುಗಳ ಮೇಲೆ ತೂಗುತಿದ್ದವು. ಕರುಣಾಳ ಸ್ವಂತದ ಬಟ್ಟೆಗಳು ಕೆಲವೇ ಇದ್ದವು. ಉಳಿದೆಲ್ಲ ಬಟ್ಟೆ ಲೀನೂಳವೇ. ಕರುಣಾ ಅಂದಳು, "ನಿಂಗೆ ಯಾವದು ಮೆಚ್ಚುವದೋ ಅದನ್ನು ಹಾಕಿಕೋ."

ಲೀನೂಳ ಚರ್ಯೆಯ ಮೇಲೆ ಒಂದು ನವಿರಾದ ನೆರಳು ಸುಳಿದುಹೋಯಿತು. ಅವಳು ತಾಯಿಯ ಕಡೆಗೆ ನೋಡಿದಳು. ಕರುಣಾ ಬೇರೆ ಕಡೆಗೆ ನೋಡ ಹತ್ತಿದಳು.

ಎರಡು ಹೆಜ್ಜೆ ಹಿಂದೆ ಸರಿದು ಅವಳು ಮೇಜಿನಿಂದ ಬರಿದೆ ಒಂದು ಪುಸ್ತಕ ಎತ್ತಿ ಕೊಂಡು ಸರಿಯಾಗಿ ಇಡಹತ್ತಿದಳು. ಬೆನ್ನ ಹಿಂದಿನ ಖಟ-ಪಟ ಸದ್ದು ಅವಳಿಗೆ ಅಂದಾಜು ಕೊಟ್ಟಿತು. ಲೀನೂ ಹ್ಯಾಂಗರಿನಿಂದ ಎಸೋ ಬಟ್ಟೆ ಇಳಿಸುತ್ತಿದ್ದಾಳೆ. ಕರುಣಾ ನೋಡಿದಳು. ಅವಳು ಕನ್ನಡಿ ಚೂರು ಹಚ್ಚಿದ ಕಪ್ಪು ಸ್ಕರ್ಟ ಮತ್ತು ಅಚ್ಚ ಹಳದಿ ಬಣ್ಣದ ಹ್ಯಾಂಡಲೂಮ ಸಿಲ್ಕಿನ ಬ್ಲವುಜು ಇಳಿಸಿಕೊಂಡಿದ್ದಳು.

ಬಟ್ಟೆ ಕೈಯಲ್ಲಿ ತೆಗೆದುಕೊಂಡು ಲೀನೂ ಸುಮ್ಮನೆ ಬೇರೆ ಕೋಣೆಗೆ ಹೊರಟು ಹೋದಳು. ಕೆಲವು ದಿನಗಳಿಂದ ಅವಳು ಕರುಣಾಳ ಇದುರು ಬಟ್ಟೆ ಬದಲಿಸಿಕೊಳ್ಳು ತ್ತಿದ್ದಿಲ್ಲ. ಕರುಣಾಳಿಗೆ ಆಲೋಚನೆ, ಲೀನೂಳಿಗೂ ತಾನು ದೊಡ್ಡವಳಾಗುತ್ತಿದ್ದೇ ನೆಂದು ಅನುಭವ ಆಗಲು ಹತ್ತಿದೆಯೇ ? ಹುಚ್ಚಿ, ಇವಳಿಗೆ ತಾಯಿಯ ಮುಂದೆಯೂ ನಾಚಿಕೆ ಬರಹತ್ತಿತು. ಮತ್ತು ಕರುಣಾಳಿಗೆ ಆ ಗಳಿಗೆಯ ಬಿಕ್ಕಟ್ಟೂ ಕೊಂಚ ಕಡಿಮೆ ಆಯಿತು.

ಕರುಣಾ ಇನ್ನೂ ಮೇಜಿನ ಹತ್ತಿರ ಹಾಗೆಯೇ ಸುಮ್ಮನೇ ನಿಂತಿದ್ದಳು. ಅಷ್ಟರಲ್ಲಿ ಲೀನೂ ಬಟ್ಟೆ ಬದಲಿಸಿಕೊಂಡು ಬಂದಳು. ಕರುಣಾಳಿಗೆ ಲೀನೂ ಎಂದಿ ಗಿಂತ ಹೆಚ್ಚು ಬೆಳೆದವಳಂತೆ ತುಸು ಹೆಚ್ಚು ಉದ್ದವಾಗಿಯೇ ತೋರಿದಳು.

ಕಟೋರಿಯಾ ಮೇಜಿನ ಮೇಲೆ ಚಹ ಇಟ್ಟು ಹೋಗಿದ್ದಳು. ಕರುಣಾ ಅಂದಳು, " ಲೀನೂ ಲಗೂ ಎರಡು ಕಪ್ ಚಹಾ ಮಾಡು. ನಾನು ಈಗಲೇ ಬಂದೆ " ಅವಳು ತನ್ನ ಮೊಗದ ಮೇಲೆ ಬಂದ ಛಾಯೆಯನ್ನು ಲೀನೂಳಿಂದ ಅಡಗಿಸಲು ಬಯಸುವಂತಿತ್ತು.

ಮೇಜಿನ ಮುಂದೆ ಕೂತ ಕರುಣಾ ತನ್ನ ಲೋಟಾದಲ್ಲಿ ಚಮಚೆ ತಿರುಗಿಸು ತ್ತಿದ್ದಳು—ಅವಳಿಗೆ ಗೊತ್ತು, ಲೋಟಾದಲ್ಲಿ ಹಾಕಿದ ಅರ್ಧ ಚಮಚೆ ಸಕ್ಕರೆ ಆಗಲೇ ಕರಗಿಹೋಗಿತ್ತು. ಆದರೂ ಲೀನೂ ಚಪಾತಿ ಮತ್ತು ಬೆಣ್ಣೆ ತಿನ್ನುತ್ತಿದ್ದಳು. ಒಮ್ಮೆಂದೊಮ್ಮೆ ಕರುಣಾಳಿಗೆ ಅನಿಸಿತು, ಲೀನಾಳೂ ತನ್ನ ಮೊಗದ ಮೇಲೆ ಯಾವದೇ ಛಾಯೆ ಬರಬಾರದೆಂದು ತನ್ನ ಮಟ್ಟಿಗೆ ಪೂರ್ತಿ ಪ್ರಯತ್ನ ಮಾಡುತ್ತಿದ್ದಳು.

ಕೆಲವೇ ದಿನಗಳಲ್ಲಿ ಲೀನೂ ದೊಡ್ಡವಳಾಗಿಬಿಟ್ಟಳಲ್ಲ—ನನಗೆ ಸರಿಸಮವೆಂಬಷ್ಟು ದೊಡ್ಡವಳಾದಳು—ಎಂದು ಎನಿಸಿತು ಕರುಣಾಳಿಗೆ. ಇಬ್ಬರೂ ಸಮ ವಯಸ್ಸಿನ ಹುಡುಗಿಯರೂ ಅಹುದು, ಹೆಂಗಸರೂ ಅಹುದು ! ಒಂದು ಮಾತು ಇಬ್ಬರೂ ಬಲ್ಲರು. ಆದರೆ ಇಬ್ಬರೂ ಅದನ್ನು ಆಡುತ್ತಿದ್ದಿಲ್ಲ. ಮತ್ತು ಇಬ್ಬರೂ ಒಬ್ಬರಿಗೊಬ್ಬರು ಸಾಂತ್ವನೆ ನೀಡಲಿಕ್ಕ ಮುಗ್ಧರಂತೆ ನಟಿಸುತ್ತಿದ್ದರು.

" ಲೀನೂ, ಇನ್ನೂ ಸ್ವಲ್ಪ ಬೆಣ್ಣೆ ಹಾಕಿಕೋ "

" ಕೊಟ್ಟುಬಿಡು ಅಮ್ಮ." ಕೇವಲ ಅಮ್ಮಯನ್ನು ರಮಿಸಲಿಕ್ಕೇ ಅವಳು ಬೆಣ್ಣೆ ತಿನ್ನುವಂತಿತ್ತು.

"ಲೀನೂ. ನಿನ್ನ ಹಾಲಿನ ಪೇಲೆಯಲ್ಲಿ ಓವಲ್ಟೀನು ಹಾಕಲಾ?" "ಹಾಕಿ ಬಿಡು ಅಮ್ಮೀ."

ನಾಳೆ, ಯಾರಿಗೆ ಗೊತ್ತು—ಕರುಣಾ ಪೂರ್ತಿ ಜೋರಿನಿಂದ ತನ್ನನ್ನು ತಡೆದುಕೊಂಡಳು—ಇನ್ನು ಮುಂದೆ ವಿಚಾರ ಮಾಡದಂತೆ.

ಸಜ್ಜಾಗಿ ಇಬ್ಬರು ಸಪ್ರೂ ಹೌಸಿಗೆ ತಲುಪಿದರು. ಕರುಣಾ ಹಾಲಿನ ಕತ್ತಲೆಗಾಗಿ ಫಿಲ್ಮಿಗೆ ಆಭಾರಿಯಾಗಿದ್ದಳು. ಆ ಫಿಲ್ಮು ಮತ್ತು ಕತ್ತಲೆ ಆ ಇಪ್ಪತ್ತೈದೂವರೆ ತಾಸುಗಳಲ್ಲಿ ಕೆಲ ಪಾಲನ್ನು ತುಂಬುತ್ತಿದ್ದವು.

ಫಿಲ್ಮ ನೋಡಿ ಆದಮೇಲೆ ಅವರು ಕಿಂಗ್ಸವೇಗೆ ಹೋದರು. ಕರುಣಾ ಲೀನೂಳಿಗೆ ಜಯಪುರದ ಮುತ್ತಿನ ದೊಡ್ಡ ಬಳೆಗಳನ್ನು ಕೊಂಡುಕೊಟ್ಟಳು. ಕತೆಗಳ ಒಂದು ಪುಸ್ತಕವನ್ನು ಕೊಂಡುಕೊಟ್ಟಳು.

"ಏನು ತಿನ್ನುವಿ, ಲೀನೂ."

"ಏನಿಲ್ಲ ಅಮ್ಮೀ."

ಆದರೆ ಹೀಗೆಂದು ತನ್ನ ತಾಯಿಯ ಮುಖವನ್ನು ನೋಡಿದಾಗ ಅವಳ ಚರ್ಯೆಯಲ್ಲಿ ಏನಿತ್ತೋ, ಲೀನಾ ಚಟ್ಟನೆ ಅಂದಳು, "ಅಮ್ಮೀ, ಕ್ವಾಲಿಟಿಗೆ ಹೋಗೋಣವೇ? ಡಬ್ಬಲ್ ಸಂಡೆ ಏಸ್‌ಕ್ರೀಂ ತಿನ್ನೋಣ."

ಲೀನೂ ಡಬ್ಬಲ್ ಸಂಡೆ ತರಿಸಿಕೊಂಡಳು, ಕರುಣಾ ಒಂದುಲೋಟ ಕಾಫಿ.

ಮೇಜಿನ ಮೇಲೆ ಸುತ್ತಲೂ ಒಂದು ನಿರ್ಮಮವಾದ ಮೌನ ಕವಿದಿತ್ತು. ಇಬ್ಬರೂ ನಿರುದ್ದೇಶವಾಗಿ ಅತ್ತಿತ್ತ ಬೇರೆ ಮಂದಿಯತ್ತ ನೋಡುತ್ತ ಉಳಿದರು.

ಸಂಜೆ ಆಗುತ್ತಬಂತು. ಕನಾಟ್ ಪ್ಲೇಸಿಗೆ ಜನರು ಬರುವುದು ಹೋಗುವುದು ಹೆಚ್ಚುತ್ತ ಸಾಗಿತ್ತು. ತುಸು ದೂರ ನಡೆದಮೇಲೆ ಕರುಣಾ ಲೀನೂಳಿಗೆ ಕೇಳಿದಳು, "ಇನ್ನು ಮನೆಗೆ ಹೋಗೋಣವೇ?—ಅಥವಾ ಇನ್ನೆಲ್ಲಿಯಾದರೂ ಹೋಗಬೇಕೋ?"

ಲೀನೂ ತುಸು ಆಲೋಚನೆ ಮಾಡಿ ಅಂದಳು. "ಅಮ್ಮೀ, ನಾನು ರಜನಿಯನ್ನು ಭೆಟ್ಟಿ ಆಗಬೇಕು."

ಕರುಣಾ ಬೆಚ್ಚಿಬಿದ್ದಳು, "ಭೆಟ್ಟಿಯಾಗಬೇಕು"—ಅಂದರೆ ಏನು, ಲೀನೂಳಿಗೂ ಹೆದರಿಕೆಯೇ—ಎಲ್ಲಾದರೂ . . . ಎಲ್ಲಾದರೂ . . .

ಕರುಣಾ ತನ್ನನ್ನು ತಾನೇ ಸಾವರಿಸಿಕೊಂಡು ಅಂದಳು, "ಹಾಂ ಹಾಂ ಅಗತ್ಯ, ಈಗಲೇ ಹೋಗೋಣ."

ರಜನೀ ಲೀನೂಳನ್ನು ತನ್ನ ಕೋಣೆಗೆ ಕರೆದುಕೊಂಡು ಹೋದಾಗ ರಜನಿಯ ತಾಯಿಯು ಭಾರಿ ಖೇದ ತುಂಬಿದ ಭಾವದಲ್ಲಿ ಕರುಣಾಳ ಹತ್ತಿರ ಕೂತು ಕೇಳಿದಳು—"ನಾ ಕೇಳಿದ್ದೆ. . ."

ಕರುಣಾಳಿಗೆ ಇಂಥ ಭೇದೋಪಾಯದ ಭಾವದಿಂದ, ಈ ಬಗೆಯ ಸಹಾನುಭೂತಿ

ಯಿಂದ ಸಿಟ್ಟು ಬಂತು. ಯಾರೊಬ್ಬರ ಇದುರಿಗೆ ತನ್ನ ದುಃಖವನ್ನು ಹರವಿ ಇಡುವುದೆಂದರೆ—ಯಾವುದೇ ತಿರುಕ ತನ್ನ ಮೈಯ ಕುಷ್ಠರೋಗದ ಅಂಗವನ್ನು ರಸ್ತೆಯಲ್ಲಿ ಬರಹೋಗುವವರ ಮುಂದೆ ಕಾಣಿಸುವಂತೆ—ಎಂದು ಕರುಣಾಳಿಗೆ ಅನಿಸುತ್ತಿತ್ತು.

ಕರುಣಾಳಿಗೆ ಅನಿಸಿತು. ತಾನು ಅಲ್ಲಿಂದ ಹೊರಟೆದ್ದು ಹೋಗಬೇಕು. ಆದರೆ ಅದು ಸಾಧ್ಯವಿದ್ದಿಲ್ಲ. ಆದ್ದರಿಂದ ಅವಳು ಇದಿರುಬಿದ್ದು ರಜನಿಯ ತಾಯಿಯ ಮಾತನ್ನು ನಡುವೆಯೇ ಕಡಿದು ಅಂದಳು, "ಹೂಂ, ನಾಳೆ ತೀರ್ಪು ಆಗುವದು."

"ತಾರೀಖು ನಾಳೆಯೇ ಇಂಟೋ?" ರಜನಿಯ ತಾಯಿ ಹೀಗೆ ಮಾತು ಶುರುವಾಗುವ ಮೊದಲೇ ಮುಗಿಸಿಬಿಡಲು ಇಚ್ಛಿಸುತ್ತಿದ್ದಿಲ್ಲ.

"ಹೂಂ. ನಾಳೆನೇ . . ." ಕರುಣಾ ಇದನ್ನು ಈ ರೀತಿ ಅಂದಳು, ರಜನಿಯ ತಾಯಿಗೆ ಮುಂದೆ ಏನೂ ಹೇಳಲಿಕ್ಕೆ ಧೈರ್ಯ ಸಾಲಲಿಲ್ಲ.

ಕತ್ತಲೆ ಕವಿಯುತ್ತಿತ್ತು. ಚಳಿ ಹೆಚ್ಚುತ್ತ ನಡೆದಿತ್ತು. ಕರುಣಾ ಲೀನೂಳಿಗೆ ಕೂಗಿ ಕರೆದಳು, "ಮಗೂ, ಇನ್ನು ತಿರುಗಿ ಹೋಗೋಣವೇ ?

"ಹೂಂ ಅಮ್ಮೀ, ನಾನೂ ದಣಿದು ಹೋಗಿದ್ದೇನೆ." ಲೀನೂಳಿಗೆ ಹೇಗೋ ಒಮ್ಮೆಲೆ ತನ್ನ ದಣಿವು ಅನುಭವವಾಯಿತು.

ಮನೆಗೆ ಮುಟ್ಟುವಷ್ಟರಲ್ಲಿ ರಾತ್ರಿ ಆಯಿತು.

ಕಟೋರಿಯಾ ಕೇಳಿದಳು, "ರೊಟ್ಟಿ ಮಾಡುವುದೇ ಬೀಬೀ ?"

"ನೀನು ಒಲೆಯಮೇಲೆ ಕಾವಲಿ ಇಡು ಕಟೋರಿಯಾ . . . ನಾ ಬರ್‍ತೇನೆ."

ಕರುಣಾ ತನ್ನ ಕೈಯಿಂದ ಚಪಾತಿಗಳನ್ನು ಮಾಡಿದಳು—ಮಿದು, ದುಂಡನೇ ಉಬ್ಬಿದ ಚಪಾತಿಗಳು, ಅವುಗಳಿಗೆ ಬೆಣ್ಣೆ ಲೇಪಿಸಿದಳು. ಚಪಾತಿ ಮಾಡುವಾಗ ಅವಳ ಒಳಗೆ ಏನು ಮಿದ್ದಿದಂತೆ ತಿರುಪಿದಂತೆ ಆಗುತ್ತಿತ್ತೊ—ಚಿಕ್ಕಂದಿನಲ್ಲಿ ಅವಳ ತಂದೆ ಹಲ್ಲುಜ್ಜಿಕೊಳ್ಳಲು ಜಾಲಿಯಗಿಡದ ಟಿಸಿಲನ್ನು ತುಂಡುಮಾಡುವಾಗ ಅದನ್ನು ತಿರುಪಿ ತಿರುಪಿ ಹರಿದು ತೆಗೆಯುತ್ತಿದ್ದಂತೆ.

ಊಟವಾದಮೇಲೆ ಲೀನೂ ತೆಪ್ಪಗೆ ತನ್ನ ರಜಾಯಿಯೊಳಗೆ ಅಡಗಿಬಿಟ್ಟಳು.

ಈ ಮೌನ ಬಹಳ ಭಾರಿ ಬಂಡೆ. ಬಹಳ ದೊಡ್ಡ ಶಿಲೆ. ಅದರ ಎಲ್ಲ ಭಾರ ಕರುಣಾಳ ಎದೆಯ ಮೇಲೆ ಬಿದ್ದಿತ್ತು.

"ಲೀನೂ ಮಗೂ, ನೀನು ಕೈಮೇಲೆ ಕ್ರೀಮು ಹಚ್ಚಿಕೊಂಡಿಯಾ" ಕರುಣಾ ಆ ಶಿಲೆಯನ್ನು ಒಡೆಯಲು ಯತ್ನಿಸಿದಳು.

"ಓ ಅಮ್ಮೀ, ಅದನ್ನು ನಾನು ಮರೆತೇ ಹೋದೆ." ಲೀನೂ ಚಟ್ಟನೆ ರಜಾಯಿ ಯೊಳಗಿಂದ ಹೊರ ಬರುತ್ತ ಅಂದಳು, ಎಲ್ಲಕ್ಕೂ ಅಗತ್ಯದ ಕೆಲಸ ಅದೇ ಆಗಿತ್ತು. ಅದನ್ನೇ ಅವಳು ಮಾಡಲಿಕ್ಕೆ ಮರೆತಳೊ—ಎಂಬಂತೆ.

"ತಡೆ, ನಾ ತಂದುಕೊಡ್ತೇನೆ" ಕರುಣಾ ಕಪಾಟಿನಿಂದ ಕ್ರೀಮು ತೆಗೆದು ಲೀನೂಗೆ ತಂದುಕೊಟ್ಟಳು. ಅದೊಂದು ಕೆಲಸ ನೆನಪಾದುದಕ್ಕೆ ಆಕೆ ಆಭಾರಿ ಆಗಿದ್ದಳು. ಏಕೆಂದರೆ ಅದರಿಂದ ಆ ಕ್ಷಣಗಳ ಬಿಗುವು ತುಸು ಕಡಿಮೆ ಆಗಿತ್ತು.

ಕ್ರೀಮ್ ಉಜ್ಜಿಕೊಂಡು ಲೀನು ಅಡ್ಡಾದಳು. ಮತ್ತು ಕಣ್ಣು ಮುಚ್ಚಿಕೊಂಡಳು.

ಕರುಣಾ ಕೂಡ ದೀಪ ಸಂದಿಸಿ ಮಲಗಿದಳು. ಎಷ್ಟು ಕಾಲ ಹೀಗೆ ಕಳೆಯಿತೋ ಗೊತ್ತಿಲ್ಲ. ಪಕ್ಕದ ಕೋಣೆಯಲ್ಲಿ ಟೆಲಿಫೋನ ಗಂಟೆ ಗಜರಿಸಿತು.

"ಹಲ್ಲೊ!" ಕರುಣಾ ರಿಸೀವ್ಹರ ಎತ್ತಿದಳು.

"ಹಲ್ಲೋಃ ಕರುಣಾ, ಏನು ಮಾಡುತಲ್ತಾ ಇದ್ದೀ?"

"ಅದೇ ತೋಶೀ! ಏನೂ ಇಲ್ಲ. ಬರೇ ಹೀಗೆ ಅಡ್ಡಾಗಿದ್ದೆ."

"ನಾನು ಸಂಜೆಗೂ ನಿನಗೆ ರಿಂಗ ಮಾಡಿದ್ದೆ, ನೀನು ಮನೆಯಲ್ಲಿ ಇದ್ದಿಲ್ಲ."

"ಹೌದು. ನಾನೂ ಲೀನೂ ತುಸು ಹೊರಗೆ ಹೋಗಿದ್ದೆವು."

"ಲೀನೂ ಎಲ್ಲಿದ್ದಾಳೆ?"

"ಮಲಗಿದ್ದಾಳೆ."

"ಸರಿ ಸಾಕು, ನೀನು ಹೀಗೇ ವಿಚಾರಿಸಿದೆ . . . ನೀನು . . . ನೀನು ಏನು ಮಾಡುತ್ತಿದ್ದೀ ಎಂದು."

"ಓ, ತೋಶೀ!" ಕರುಣೆಯ ಜೀವಕ್ಕೆ ಅನಿಸಿತು. ತೋಶೀ ತನ್ನೊಂದಿಗೆ ಈ ನಟನೆ ಮಾಡಬಾರದು. ತೋಶೀ ಅವಳ ಮೇಲೆ ಭಾರೀ ಸ್ನೇಹ ಮಾಡುವಾಕೆ, ಜೀವದ ಗೆಳತಿ.

"ಕರುಣಾ, ಸ್ವಲ್ಪ ಹೊತ್ತಿಗಾಗಿ ನಾ ಬರಲೇ?" ತೋಶಿ ಅಂಗಲಾಚುವಂತೆ ಅಂದಳು.

"ಬಂದುಬಿಡು." ಕರುಣಾ ತುಸು ತಡೆದು ಅಂದಳು, ಪ್ರತಿಯೊಂದು ಕಷ್ಟದಲ್ಲಿಯೂ ಕೇವಲ ಏಕಾಕಿಯಾಗಿ ಇರುವುದೇ ಅವಳಿಗೆ ಮೆಚ್ಚಿಗೆ, ಆದರೆ ತೋಶಿಯ ಮಾತೇ ಬೇರೆ.

ತುಸು ಹೊತ್ತಿನ ಮೇಲೆ ತೋಶೀ ಬಂದಳು.

"ಯಾರ ಸಂಗಡ ಬಂದಿ?" ಕರುಣಾ ಕೇಳಿದಳು.

"ಡ್ರೈವರ್ ಬಂದಿದ್ದಾನೆ. ಗಾಡಿ ಕೆಳಗೆ ನಿಂತಿದೆ." ಇಬ್ಬರೂ ಸುಮ್ಮನೆ ಕುಳಿತರು.

"ಕಾಫೀ ಕುಡಿತೀಯಾ?" ಕರುಣಾ ಕೇಳಿದಳು.

"ಏನೂ ಬೇಡ ಈ ಹೊತ್ತಿಗೆ." ತೋಶಿಯ ಗಂಟಲಲ್ಲಿ ಏನೋ ಸಿಲುಕಿಕೊಂಡಿತ್ತು.

" ಓ ಒಂದು ಕಪ್ಪು ಬಿಸಿ ಬಿಸಿ ಕಾಫಿಗಾಗಿ ನನ್ನ ಜೀವ ಲವಲವಸ್ತಾ ಇದೆ." ಕರುಣಾ ಏನಾದರೂ ಮಾಡುತ್ತಿರಬೇಕೆಂದು ಅಂದಳು.

" ಸರಿ, ಹಾಗಾದರೆ ಮಾಡು."

ಕರುಣಾ ಎಲೆಕ್ಟ್ರಿಕ್ ಕಿಟ್ಲಿಯ ಪ್ಲಗ್ಗು ಅದೇ ಕೋಣೆಯಲ್ಲಿ ಹಚ್ಚಿಟ್ಟಳು ಮತ್ತು ಬಂದು ಕೂತಳು.

ತೋಶೀ ಒಂದು ಕ್ಷಣ ಕರುಣಾಳ ಕಡೆಗೆ ನೋಡಿದಳು. ಮತ್ತೆ ಬೇರೆಡೆಗೆ ನೋಡಹತ್ತಿದಳು. ಇಂಥ ಹೊತ್ತಿಗೆ ಯಾರೂ ಯಾರೊಂದಿಗೆ ಏನು ಹೇಳಬೇಕು? ಅವಳು ಒಂದು ಆಳವಾದ ಉಸಿರೆಳೆದಳು. ಮತ್ತು ಮೆಲ್ಲಮೆಲ್ಲನೆ ಅದನ್ನು ಹೊರಗೆ ಬಿಡಹತ್ತಿದಳು. ಕರುಣಾ ತನ್ನ ಆ ನಿಟ್ಟುಸಿರಿನ ಸದ್ದು ಕೇಳಬಾರದೆಂದು.

ಆ ಕಠಿಣ ಮತ್ತು ಭಾರವಾದ ಮೌನದಲ್ಲಿ ಇಬ್ಬರಿಗೂ ಕಿಟ್ಲಿಯಲ್ಲಿ ಮರಳುವ ನೀರಿನ ಸದ್ದು ಕೇಳಬರಹತ್ತಿತು. ಕರುಣಾಳಿಗೆ ಗೊತ್ತು—ಇನ್ನೂ ನೀರು ಪೂರ್ತಿ ಕುದಿಯುತ್ತಿಲ್ಲ. ಆದರೂ ಅವಳು ಎದ್ದು ಹೋಗಿ ಕಿಟ್ಲಿಯ ಮುಚ್ಚಳ ತೆರೆದು ಇಟ್ಟು ಅದರೊಳಗೆ ಇಣಕಿ ನೋಡಿದಳು. ಅತ್ತಿತ್ತ ನೀರಿನ ಪುಟ್ಟ ಪುಟ್ಟ ಗುಳ್ಳೆಗಳು ಮುತ್ತಿನ ಮಣಿಗಳಂತೆ ಪೋಣಿಸಿಕೊಳ್ಳುತ್ತಿದ್ದವು. ಕರುಣಾ ತಿರುಗಿ ಮುಚ್ಚಳ ಹಾಕಿದಳು.

" ಚಳಿಯಲ್ಲಿ ಬಿಸಿ ಕಾಫಿಯ ಕಪ್ಪು ಎಷ್ಟು ಖುಶಿ!" ಕರುಣಾ ಅಂದಳು.

ಕಾಫಿ ಕುಡಿಯಲಿಕ್ಕ ಏನೇನೂ ಉತ್ಸಾಹವಿಲ್ಲದಿದ್ದರೂ ತೋಶೀ ಹೇಳಿದಳು: " ಈಗ ನನ್ನ ಮನಸ್ಸಿಗೂ ಲವಲವಿಕೆ ಆಗಿದೆ."

ಕರುಣಾ ಅಡುಗೆಯ ಒಳದಲ್ಲಿ ಲೋಟಾ ತರಲಿಕ್ಕೆ ಹೋದಳು. ತೋಶಿಯೂ ಅವಳ ಹಿಂದೆ ಹಿಂದೆಯೇ ಬಂದಳು.

ಕಾಫಿ ಸಿದ್ಧವಾಯಿತು. ಇಬ್ಬರೂ ಮೌನದಲ್ಲಿ ತಮ್ಮ ತಮ್ಮ ಲೋಟಾ ಎತ್ತಿಕೊಂಡು ಕುಡಿಯಲಾರಂಭಿಸಿದರು.

" ಕರುಣಾ ಏನಾದರೂ ಮಾತಾಡು." ತೋಶೀ ಆ ಮೌನಕ್ಕೆ ಹೆದರಿದಂತೆ ಕಂಡಳು.

ಒಮ್ಮೆಲೆ ಕರುಣಾಳ ಕಣ್ಣು ತುಂಬಿ ಬಂದವು. ಆ ಸಮಯ ಅವಳ ಕಠೋರ ಸಂಯಮ ಹೇಗೆ ಹುಸಿಯಾಗಿ ಹಾರಿಬಿಟ್ಟಿತೋ!

ಕರುಣಾಳ ಕೈ ನಡುಗುತ್ತಿತ್ತು. ಅವಳು ಲೋಟಾ ಮೇಜಿನಮೇಲೆ ಇಟ್ಟಳು. ತೋಶೀ ಕೈಚಾಚಿ ಕರುಣಾಳ ಬೆರಳುಗಳನ್ನು ಮುಟ್ಟಿದಳು ಮತ್ತು ಮೆಲ್ಲನೆ ಅವುಗಳನ್ನು ತಡವತೊಡಗಿದಳು.

ತೋಶೀ ಎದ್ದು ಹೊರಗೆ ಬಂದಳು. ಕಾರು ಸ್ಟಾರ್ಟ್ ಆಗುವ ಸದ್ದು ಕೇಳಿಸಿತು. ತಿರುಗಿ ಬಂದು ತೋಶೀ ಅಂದಳು, " ನಾನು ಡ್ರೈವರನ ಜತೆ ಹೇಳಿ ಕಳುಹಿಸಿದೆ—ಈ ರಾತ್ರಿ ಇಲ್ಲಿಯೇ ಇರುವೆನೆಂದು."

ಈ ಮಾತಿನಿಂದ ಕರುಣಾಳಿಗೆ ಸಾಂತ್ವನೆಯೂ ಆಗಲಿಲ್ಲ, ದಿಗ್ಭ್ರಮೆಯೂ ಆಗಲಿಲ್ಲ. ಅವಳು ಸುಮ್ಮನೆ ಕುಳಿತುಬಿಟ್ಟಳು, ಅಷ್ಟೇ. ತೊಡೆಯಮೇಲೆ ಇಟ್ಟು ಕೊಂಡ ಎರಡೂ ಕೈಗಳನ್ನು ಅವಳು ಸದ್ದಿಲ್ಲದೆ ದಿಟ್ಟಿಸುತ್ತ ಉಳಿದಳು.

ತ್ರೋಶೀ ಅವಳ ಲೋಟ ಎತ್ತಿ ಅವಳ ಕೈಗೆ ಹಿಡಿಸಿದಳು. ತನ್ನ ಲೋಟ ಎತ್ತಿ ಅವಳು ಚಿಕ್ಕ ಚಿಕ್ಕ ಗುಟುಕು ಕುಡಿಯಹತ್ತಿದಳು.

"ನಾನು ಇದೇ ಗಳಿಗೆಗಾಗಿ, ಇದೇ ಕ್ಷಣಕ್ಕಾಗಿ ಇಷ್ಟೆಲ್ಲ ವರ್ಷ ಭಯ ಪಡುತ್ತ ಬಂದಿದ್ದೆ. ಇದೇ ಗಳಿಗೆಗೆ ಹೆದರಿ ನಾನು ಹದಿಮೂರು ವರ್ಷ ಆ ಮನೆ ಯಲ್ಲಿ ಕಳೆದೆ. ಅಲ್ಲಿ ನಾನು ದಿನಾಲು ಸಾಯುತ್ತಿದ್ದೆ. ದಿನಾಲು ಸಾಯುತ್ತಲೇ ಇದ್ದೆ." ಕರುಣಾ ತ್ರೋಶಿಯೊಂದಿಗೆ ಕಡಿಮೆ, ತನ್ನೊಂದಿಗೇ ಹೆಚ್ಚು ಮಾತಾಡು ತ್ತಿದ್ದಳು.

ತ್ರೋಶೀ ಮೌನವಾಗಿದ್ದಳು.

"ಎಂದಾದರೂ ಆ ಮನೆಯ ಹೊಸ್ತಿಲಿನಿಂದ ಹೊರಬರುವ ವಿಚಾರ ಬಂತೋ ಆಗ ಲೀನೂಳ ಮುಖಚರ್ಯೆ ನನ್ನ ಇದುರು ನಿಲ್ಲುತ್ತಿತ್ತು. ಅದೇ ಗಳಿಗೆಯ ಹೆದರಿಕೆ ಯಿಂದ ನನ್ನ ಕಾಲು ಕಟ್ಟಿದ್ದವು."

"ನೋಡು ಕರುಣಾ, ಒಂದು ಸಲ ಸಾಹಸ ಮಾಡಿ ನೀನು ಈ ಹೆಜ್ಜೆ ಇಟ್ಟಿ ರುವಿ. ಈಗ ಮನಸ್ಸು ಸಣ್ಣದಾಗಿ ಮಾಡಬೇಡ."

"ಇಲ್ಲ ತ್ರೋಶೀ, ಮನಸ್ಸನ್ನು ನಾನು ದೃಢ ಮಾಡಿಬಿಟ್ಟಿದ್ದೇನೆ." ಆದರೆ ಅವಳ ಒಳ ಒಳಗೇ ಏನೋ ಕೊರೆಯುತ್ತಿತ್ತು.

ಆಕೆ ಎದ್ದು ಕಿಟ್ಲಿಯಲ್ಲಿ ಮತ್ತೆ ನೀರು ಹಾಕಿಟ್ಟಳು. ಮತ್ತೆ ಪ್ಲಗ್ ಹಚ್ಚಿಟ್ಟಳು. ಎದ್ದು ಕುಳಿತು ಅವಳು ತನ್ನ ತಾನೇ ಸಾವರಿಸಿಕೊಳ್ಳಲು ಯತ್ನಿಸಿದಳು. ಚದರಿ ಚೆಲ್ಲುತ್ತಿರುವ ವಿಚಾರಗಳನ್ನು ಒಟ್ಟುಗೂಡಿಸಲು ಯತ್ನಿಸಿದಳು.

"ವಕೀಲರಿಗೆ ಭೆಟ್ಟಿ ಆಗಿದ್ದೆಯಾ?"

"ಇಲ್ಲ, ನಿನ್ನೆ ಆಗಿದ್ದೆ"

"ಏನಾದರೂ ಅನ್ನುತ್ತಿದ್ದರೇ?"

"ಅದೇ ಮಾತು—ಮಗುವನ್ನು ತಾಯಿ ಅಥವಾ ತಂದೆ ಯಾರಿಗೆ ಒಪ್ಪಿಸ ಬೇಕೆಂಬುದು—ಜಡ್ಜಿಯ ಮರ್ಜಿಯ ಮೇಲೆ—ಆತ ಸರಿ ಕಂಡಂತೆ ಇದೆ."

"ನರಕಕ್ಕೆ ಹೋಗಲಿ ಈ ಕಾನೂನು! ತಾಯಿಗೆ ಮಗುವಿನ ಮೇಲೆ ಹಕ್ಕು ಇಲ್ಲವೇ? ತಾಯಿ ಹೆರಬೇಕು. ತಾಯಿ ಪಾಲಿಸಬೇಕು. ತಾಯಿ ಕಷ್ಟ ಸಹಿಸ ಬೇಕು. . ." ತ್ರೋಶೀ ಸಿಡಿಮಿಡಿಯಾಗಿದ್ದಳು.

ಮತ್ತು ಕರುಣಾಳಿಗೆ ತಾನು ಸಹಿಸಿದ ಆ ಎಲ್ಲ ಕಷ್ಟಗಳ ನೆನಪು ಬಂದಿತು. ಲೀನೂಳನ್ನು ತಾನು ಹೇಗೆ ಸಾಕಿದೆ. ತಾನೊಬ್ಬಳೇ ಲೀನೂಳಿಗೆ ಹೇಗೆ ತಾಯಿ

ಮತ್ತು ತಂದೆ ಇಬ್ಬರ ಪ್ರೀತಿಯನ್ನೂ ನೀಡುತ್ತಿದ್ದೆ. ಆನಂದನ ಮನಸ್ಸಿನಲ್ಲಿ ತನ್ನ ಮಗಳಿಗಾಗಿ ಒಂದು ರವೆಯಷ್ಟೂ ಪ್ರೀತಿ ಇದ್ದಿಲ್ಲ. ಹುಲಿ ಚಿರ್ತೆಗಳೂ ತಮ್ಮ ಮರಿಗಳ ಮೇಲೆ ಮೋಹ ತೋರುತ್ತವೆ. ಅವುಗಳ ಕಾವಲು ಮಾಡುತ್ತವೆ. ಆದರೆ ಆನಂದ ಹೀಗಿದ್ದ. . .

" ಈ ಆನಂದನಿಗೂ ಪೀಡಿಸಲು ಈ ಉಪಾಯ ಸಿಕ್ಕಿತು. ಎರಡೂವರೆ ವರ್ಷದಲ್ಲಿ ಹೇಗೋ ಕಷ್ಟದಿಂದ ನೀನು ಈ ಮನೆಯನ್ನು ರಚಿಸಿದಿ. ಈಗ ಲೀನೂ ದೊಡ್ಡವ ಳಾಗಿದ್ದಾಳೆ. ಇಷ್ಟು ವರ್ಷಗಳ ನಂತರ ನಿನಗೆ ಸ್ವಲ್ಪವೇನೋ ಆರಾಮು ದೊರೆತಿದೆ. ಮತ್ತೆ ಈಗಲೇ ಆತ ಅರ್ಜಿ ಮಾಡಿಕೊಂಡಿದ್ದಾನೆ; ಮಗಳನ್ನು ತನಗೆ ಒಪ್ಪಿಸಿಕೊಡ ಬೇಕೆಂದು. ಯಾರೂ ಕೇಳಬಹುದು, ನೀನು ಅವಳನ್ನು ಪ್ರೀತಿಸಲಿಕ್ಕಿಲ್ಲ, ಸಲಹಲಿಕ್ಕಿಲ್ಲ. ಅವಳ ಮೇಲೆ ವೆಚ್ಚ ಮಾಡಲಿಕ್ಕಿಲ್ಲ—ಈ ಅರ್ಜಿ ನೀನು ಬರೇ ದುಃಖ ಕೊಡಲಿಕ್ಕೇ ಮಾಡಿಕೊಂಡಿರುವಿ—ಇನ್ನೇನು . . .?" ಕರುಣಾಳ ಮುಖಭಾವ ಕಂಡು ತೋಶಿಗೆ ಆನಂದನ ಮೇಲೆ ಇನ್ನಿಷ್ಟು ಸಿಟ್ಟುಬಂದಿತು. ಆಕೆ ಇನ್ನಿಷ್ಟು ಸಿಡಿಮಿಡಿ ಆಗುತ್ತಿದ್ದಳು.

ಕೆಟ್ಲಿಯಲ್ಲಿ ನೀರು ಕುದಿಯುವ ಸದ್ದು ಬಂತು. ಕರುಣಾ ಎದ್ದು ಕಾಫಿಯ ಇನ್ನೆರಡು ಲೋಟ ತಯಾರಿಸಿದಳು. ತನ್ನ ಲೋಟ ಮೇಜಿನ ಮೇಲೆ ಇಟ್ಟು ಒಳಗೆ ಹೋದಳು. ತೋಶಿ ಎದ್ದು ಮೆಲ್ಲಗೆ ಆಚೆಯ ಕೋಣೆಯಲ್ಲಿ ಇಣಿಕಿ ನೋಡಿದಳು. ಕರುಣಾ ಲೀನೂಳ ಮೇಲೆ ರಜಾಯಿ ಹೊದಿಸುತ್ತಿದ್ದಳು. ತೋಶೀ ಲಗುಬಗೆಯಿಂದ ತಿರುಗಿ ಬಂದು ಸೋಫಾದಲ್ಲಿ ಕೂತಳು. ಕರುಣಾ ಆ ಕೋಣೆಗೆ ತಿರುಗಿ ಬಂದಾಗ ಅವಳ ಮುಖದಲ್ಲಿ ಹರಿಯುದ ಕಣ್ಣೀರಿನ ಬಿಗಿತ ಇಷ್ಟು ಬಿಮ್ಮಗಿತ್ತು, ಅವಳ ಗಲ್ಲದ ನಾಡಿಗಳು ಸಿಡಿಯುತ್ತಿದ್ದವು. ಸೋಫಾದ ಮೇಲೆ ಕೂತೊಡನೆ ಕರುಣಾ ಎರಡೂ ಕೈಗಳಿಂದ ತನ್ನ ಮುಖ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳಹತ್ತಿದಳು. ತೋಶಿಯೂ ಬಂದು ಅವಳ ಸೋಫಾದ ಮೇಲೆ ಕುಳಿತಳು. ಮೌನವಾಗಿ ಕರುಣಾಳ ನಡುಗುವ ಹೆಗಲುಗಳ ಸುತ್ತು ತನ್ನ ತೋಳು ಸುತ್ತಿದಳು.

" ಇದೇ ವಿಚಾರ . . . ನನಗೆ . . . ಜಡ್ಜಿ ಲೀನೂನ ಆನಂದನಿಗೇ ಕೊಟ್ಟರೆ . . . ಮತ್ತೆ . . . ಆತ ಲೀನೂನ ಒಯ್ದುಬಿಟ್ಟರೆ . . . ಈಗ ರಾತ್ರಿ . . . ರಾತ್ರಿಯ ಒೂತ್ತು ಅವಳ ಮೇಲೆ ರಜಾಯಿ ಯಾರು ಹೊದ್ದುವದು ?"

ಕರುಣಾ ಎಲ್ಲಾದರೂ ಕದ್ದು ಮುಚ್ಚಿ ಅಳಲು ಬಯಸಿದ್ದಳು. ಅವಳ ಗಂಟಲಲ್ಲಿ ಏನೋ ಹೊತ್ತಿ ಉರಿಯುತ್ತಿತ್ತು.

ಕರುಣಾ ತನ್ನ ತಾನೇ ಸಾವರಿಸಿಕೊಂಡಳು. " ಇರಲಿ ತೋಶಿ ನೀನು ಇದೇ ಸೋಫಾದಲ್ಲಿ ಮಲಗುವಿಯಲ್ಲವೇ ?" ಕರುಣಾಳಿಗೆ ಗೊತ್ತಿತ್ತು. ತೋಶೀ ರಾತ್ರಿಗೆ ಅವಳ ಜತೆ ಉಳಿದಾಗೆಲ್ಲ ಇದೇ ಸೋಫಾದಲ್ಲಿ ಅವಳು ಮಲಗುತ್ತಿದ್ದಳು. ಆದರೂ ಕೇಳಿದಳು, ತೋಶೀ ತಲೆದೂಗಿ " ಹೌದು " ಅಂದಳು.

ಕರುಣಾ ಒಳಗಿನಿಂದ ಒಂದು ಬಿಳಿಯ ಚಾದರು ತಂದಳು, ಒಂದು ರಜಾಯಿಯನ್ನು ತಂದಳು. ಅವಳು ತನ್ನ ಸ್ಯೆಟ್‌ಸೂಟನ್ನು ತೋಶಿಗೆ ಕೊಟ್ಟಳು ಮತ್ತು ಬರಿದಾದ ಲೋಟಾಗಳನ್ನು ಟ್ರೇದಲ್ಲಿ ಇಟ್ಟು ಅಡುಗೆಯ ಒಳಕ್ಕೆ ಒಯ್ದಳು.

ದೀಪ ಆರಿಸಿ ಅವಳು ತನ್ನ ಮಂಚದಲ್ಲಿ ಮಲಗಿದಳು.

ಕರುಣಾಳ ಮನಸ್ಸಿಗೇ ತೋಚದು—ತಾನು ಏನು ಬಯಸುತ್ತೇನೆಂದು—ಈ ರಾತ್ರಿ ಇಷ್ಟು ಉದ್ದವಾಗಬೇಕು. ಅದು ಮುಗಿಯಲೇ ಬಾರದು. ಅಥವಾ ಬೇಗನೆ ಮುಗಿದು ಕೂಡಲೇ ನಸುಕು ಹರಿಯಬೇಕು. ಮತ್ತು ಜತೆಗೆ ಈ ಉಸಿರುಗಟ್ಟು ಮುಗಿದು ಹೋಗಬೇಕು, ಅವಳು ಏನನ್ನೂ ಬಯಸುತ್ತಿದ್ದಿಲ್ಲ. ಅವಳು ಯಾತರದೂ ಪ್ರತೀಕ್ಷೆಮಾಡುತ್ತಿದ್ದಿಲ್ಲ. ಅವಳು ಏನನ್ನೂ ಆಲೋಚಿಸುತ್ತಿದ್ದಿಲ್ಲ.

ರಾತ್ರಿ ಸಾಕಷ್ಟು ಕಳೆಯಿತು, ಕರುಣಾ ಎದ್ದಳು. ಮತ್ತು ಸುಮ್ಮನೆ ಲೀನೂಳ ಜತೆಗೆ ಅಡ್ಡಾದಳು, ಅವಳು ಮೆಲ್ಲನೆ ಲೀನೂಳ ಕೆನ್ನೆಗೆ ತನ್ನ ತುಟಿ ಇಟ್ಟಳು.

## ವಂಚನೆ

ನಸೀಬನು ಅಸ್ಸಾಮಿನಿಂದ ರಜೆಯ ಮೇಲೆ ಬಂದಾಗ ತನ್ನ ಊರಿಗೆ ಬಂದು ಜಮ್ಮೂವಾಲೀ ತಾಯಿಯನ್ನು ತಪ್ಪದೆ ಭೆಟ್ಟಿ ಆಗುತ್ತಿದ್ದ. ಆಕೆ ಒಂದೇ ಉಸಿರಿಗೆ ಆಶೀರ್ವಾದಗಳ ರಾಶಿಯನ್ನೇ ಒಟ್ಟುತ್ತಿದ್ದಳು. "ನನ್ನ ಅರಮನೆಯ ಅರಗಿಣಿ ಯಾವಾಗ ಬಂತು? ಇನ್ನೆಷ್ಟು ನೌಕರಿ ಬಾಕಿ ಇದೆ? ಪರದೇಶದಲ್ಲಿ ಉಳಿಯುವು ದೆಂದರೆ ಜೇಲಶಿಕ್ಷೆ ಭೋಗಿಸಿದಂತೆಯೇ. ಆದರೆ ಅದರಲ್ಲೇನು ಕೆಟ್ಟದ್ದು? ಹೊಟ್ಟೆಗಾಗಿ ಪ್ರಪಂಚ ಏನೆಲ್ಲ ಮಾಡುತ್ತದೆ."

ನಸೀಬ 'ಹಾಂ ಹೂಂ' ಅನ್ನುತ್ತ ಜಮ್ಮೂವಾಲೀ ತಾಯಿಯ ಎಲ್ಲ ಸವಾಲು ಗಳಿಗೆ ಹಾಗೆಯೇ ಜವಾಬು ಕೊಡುತ್ತಿದ್ದ. ಸತ್ಯಸಂಗತಿಯೆಂದರೆ ಆತ ಅವಳೊಂದಿಗೆ ಇಂಥ ಬಗೆಯ ಮಾತು ಆಡಲು ಬಯಸುತ್ತಿದ್ದಿಲ್ಲ. ಆತ ಬರೇ ಕರ್ತವ್ಯ ಪೂರೈಸಲಿಕ್ಕೆ ಹೋಗುತ್ತಿದ್ದ. ಎಂಬತ್ತು ವರ್ಷದ ಆ ಮುದುಕಿ ಇಂಥವರೊಬ್ಬರ ಮಗ ನೌಕರಿ ಸಿಕ್ಕ ಮೇಲೆ ಹಿರಿಯರನ್ನು ಮರೆತನೆಂದು ಕೊರಗಬಾರದೆಂಬುದಷ್ಟೇ ಅವನ ಉದ್ದೇಶವಾಗಿತ್ತು.

ಅಜ್ಜಿಯ ಸವಾಲುಗಳಿಗೆ ಜವಾಬುಕೊಡುವಾಗ ಅವನ ಬುದ್ಧಿ ಅಸ್ಸಾಮಿನಲ್ಲಿ ಹೊಳೆಗಳಿಗೆ ಸೇತುವೆ ಕಟ್ಟಲಿಕ್ಕೆ ತೋಡುವ ಹೊಂಡಗಳ ಸುತ್ತಲೂ ಸುಳಿದಾಡು ತ್ತಿತ್ತು. ಕಂಟ್ರಾಕ್ಟರ್ ಸಂತಾರಾಮನ ಹತ್ತಿರ ಎಂಥ ಜಾದೂ ಇತ್ತೋ—ಒಂದು ಸೇತುವೆ ಕಟ್ಟಿದಾಕ್ಷಣವೇ ಇನ್ನೊಂದು ಸೇತುವೆಯ ಕಂಟ್ರಾಕ್ಟು ಅವನಿಗೆ ಸಿಗುತ್ತಿತ್ತು. ಈ ಕೆಲಸದಲ್ಲಿ ಆದಷ್ಟು ಕಟ್ಟುಮಸ್ತು ಆಳುಗಳ ಅಗತ್ಯವಿತ್ತು. ಸಂತಾರಾಮ ಊರನ್ನು ಒಮ್ಮೆ ಸುತ್ತುಹಾಕಿ ಎಲ್ಲ ಪುಂಡ ಪ್ರಾಯದವರನ್ನು ಕಲೆಹಾಕಿ ನೂರುಗಟ್ಟಲೆ ಹರದಾರಿ ಆಚೆಗೆ ದೂರ ಒಯ್ದುಬಿಡುತ್ತಿದ್ದ. ನಸೀಬನಂತೂ ಅವನ ಮೊದಲಿನ ಕಂಟ್ರಾಕ್ಟಿನಿಂದಲೂ ಅವನ ಜತೆಗೆ ಇದ್ದ.

ಒಮ್ಮೆ ಆತ ತನ್ನ ತಂಗಿಯ ಮದುವೆಯಲ್ಲಿ ಊರಿಗೆ ಬಂದ. ಜಮ್ಮುವಾಲೀ ಅಜ್ಜಿಗೆ ಅರ್ಧಾಂಗವಾತವಾಗಿದೆಯೆಂದು ಅವನಿಗೆ ಆಗ ತಿಳಿಯಿತು. ಅವಳ ಮೈಯ ಒಂದು ಬದಿಯೇ ನಿರ್ಜೀವವಾಗಿದೆಯೆಂದು ಅವನಿಗೆ ಹೇಳಿದರು. ಅವಳು ಆ ಬದಿಯ ಯಾವುದೇ ಅಂಗವನ್ನು ಇನ್ನೊಂದು ಬದಿಯ ಅಂಗಗಳ ನೆರವಿಲ್ಲದೇ ಅಲುಗಾಡಿಸಲಾರಳು ಎಂದು ಹೇಳಿದರು. ಒಂದು ಕಿರಿ ಬೆರಳಿನ ಯೋಗ್ಯತೆ ಯಾದರೂ ಏನು? ಆದರೆ ಅದರ ಚಲನ ವಲನವೂ ಅಜ್ಜಿಯ ಅಂಕೆಯಲ್ಲಿ ಇದ್ದಿಲ್ಲ. ಹಗಲೂ ಇರುಳೂ ಅವಳು ಹೊರಸಿನ ಮೇಲೆ ಬಿದ್ದಿರುತ್ತಿದ್ದಳು. ಆ ಹೊರಸನ್ನು

ಅವಳ ಹುಡುಗರು ಹುಲ್ಲು ತುಂಬಿಡುವ ಕೋಣೆಯಲ್ಲಿ ಹಾಕಿಟ್ಟಿದ್ದರು. ಆ ಹುಡುಗರು ಮೊದಲಿನಿಂದಲೂ ಅವಳ ಅಂಕೆಯ ಹೊರಗೇ ಇದ್ದರು. ಈಗಂತೂ ಸೊಸೆಯಂದಿರೂ ಅವಳ ಮಾತು ಕೇಳುತ್ತಿದ್ದಿಲ್ಲ. ಆ ಹುಲ್ಲು ತುಂಬಿಟ್ಟ ಕೋಣೆಯಲ್ಲಿ ಗೊರಸಿನ ಮೇಲೆ ಬಿದ್ದುಳಿದ ಅಜ್ಜಿಗೆ ಯಾವಾಗಲೂ ಒಂದೇ ನಿರೀಕ್ಷೆ—ನಾಲ್ಕೂ ಸೊಸೆಯಂದಿರಲ್ಲಿ ಯಾರಾದರೂ ಒಬ್ಬಳು ಅತ್ತೆಕಡೆಯಿಂದ ಹಾಯ್ದರೆ ತನ್ನ ಎದೆಯಲ್ಲಿ ಒಟ್ಟಿನಿಂತ ಕ್ರೋಧವನ್ನು ಅವಳ ಮೇಲೆ ಒಮ್ಮೆ ಕಾರಿಕೊಳ್ಳಬೇಕು. ಅವಳಿಗೆ ಅನಿಸುತ್ತಿತ್ತು, ತಾನು ಕಾಯಿಲೆ ಬಿದ್ದಂದಿನಿಂದ ಮನೆಯಲ್ಲಿ ಯಾವ ಕೆಲಸವೂ ಸರಿಯಾಗಿ ಆಗುತ್ತಿದ್ದಿಲ್ಲ. ಅವಳಿಗೆ ಅನಿಸುತ್ತಿತ್ತು—ಎಮ್ಮೆಗಳನ್ನೂ ಆಕಳ ದಾವಣಿಯಲ್ಲಿ ಕಟ್ಟಿದ್ದಾರೆ. ಆಕಳನ್ನು ಆಡಿನ ಗೂಟಕ್ಕೆ ಕಟ್ಟಿದ್ದಾರೆ. ಹಲವು ಬಾರಿ ನಿದ್ದೆಯಲ್ಲಿಯೂ ಅವಳು ಹೀಗೆ ಅನ್ನುವದು ಕೇಳಿದ್ದುಂಟು, "ಈ ಜಿಗಿದಾಡುವ ಪ್ರಾಣಿಗಳನ್ನು ಕೋಳಿಗಳ ಗೂಡಿನಲ್ಲಿ ಯಾಕೆ ಕಟ್ಟಿಟ್ಟಿದ್ದೀರಿ?" ಇನ್ನೂ ತನ್ನ ಕಿರಿಯ ಸೊಸೆ ಹಿರಿಸೊಸೆಯ ಹೊರಸಿನಲ್ಲಿ ಮತ್ತು ಹಿರಿಯಳು ಕಿರಿಯಳ ಹಾಸಿಗೆಯಲ್ಲಿ ಹೋಗಿ ಮಲಗುತ್ತಾಳೆ—ಎಂದು ಆಕೆ ಭಾವಿಸುತ್ತಿದ್ದರೂ ಅದೇನು ದೊಡ್ಡ ಮಾತಲ್ಲ. ಆದರೆ ಪರವರಳು, ಅಸಹಾಯಳು, ಎಲ್ಲವನ್ನೂ ಒಳಒಳಗೇ ನುಂಗುತ್ತ ಇದ್ದಳು.

ಅಜ್ಜಿಯ ಹುಡುಗರಿಗೆ ಅವಳ ಕಾಯಿಲೆಯ ಬಗೆಗೆ ಭಾರಿ ದುಃಖ. ಅಜ್ಜಿಗೆ ಕಾಡು ಪಾರಿವಾಳದ ಮಾಂಸ ತಿನ್ನಿಸಬೇಕೆಂದು ಯಾರೋ ಸಲಹೆಯಿತ್ತರು. ಅವರು ಸುತ್ತಲಿನ ಎಲ್ಲ ಹಾಳು ಬಿದ್ದ ಬಾವಿಗಳಲ್ಲಿಯ ಪಾರಿವಾಳಗಳನ್ನು ಕೊಂದು ತಂದರು. ಯಾರೋ ಅಂದರು ಅಜ್ಜಿಗೆ ಮದ್ದು ಚುಚ್ಚಿಸಬೇಕೆಂದು. ಅವರು ತಮ್ಮ ಯೋಗ್ಯತಾನುಸಾರ ಅದಷ್ಟು ಹೆಚ್ಚು ಚುಚ್ಚಿಸಿಬಿಟ್ಟರು. ತಿಂದುಣ್ಣುವ ರೈತರ ಮನೆಯಲ್ಲಿ ಸಣ್ಣ-ಪುಟ್ಟ ವೆಚ್ಚಗಳಿಂದ ಅಂಥದೇನು ವ್ಯತ್ಯಾಸವಾಗುತ್ತದೆ? ಯಾರೊಬ್ಬರು ದುಡಿದರೂ ಮನೆಯ ತೊಂದರೆ ದೂರವಾಗುವುದೆಂಬದು ಎಲ್ಲರಿಗೂ ಗೊತ್ತಾಗಬೇಕು—ಆದರೆ ತನ್ನ ಕಾಯಿಲೆಗೆ ಪರಿಹಾರವಿಲ್ಲವೆಂದು ಈಗ ಅಜ್ಜಿಗೂ ಗೊತ್ತಾಗಿಬಿಟ್ಟಿದೆ. ನಿರಾಶೆ ಹೆಚ್ಚುವುದರ ಸಂಗಡವೇ ಅವಳ ತಲೆಯಲ್ಲಿ ಮೊದಲಿಗಿಂತ ಹೆಚ್ಚಾಗಿ ಅಡ್ಡ-ತಿಡ್ಡ ವಿಚಾರಗಳು ಸುಳಿಯಹತ್ತಿವೆ. ತನ್ನ ಸೊಸೆಗಳ ಬಗೆಗೆ ಮತ್ತು ನಿಜವೆಂದರೆ ಊರಿನ ಎಲ್ಲ ಸೊಸೆಯಂದಿರ ಬಗೆಗೆ ಅವಳ ಮನಸ್ಸಿನಲ್ಲಿ ಒಳಒಳಗೇ ಹತ್ತಿಕ್ಕಿದ ಮಾತುಗಳು ಈಗ ಒಂದಲ್ಲ ಒಂದು ರೂಪದಲ್ಲಿ ಹೊರಬೀಳಹತ್ತಿದುವು. ಊರಿನ ಯಾವ ಮನುಷ್ಯನೂ ಅವಳ ಸಮಾಚಾರ ತಿಳಿಯಲು ಬರುತ್ತಿದ್ದಿಲ್ಲ. ಹುಡುಗ ಹುಡುಗೆಯರೂ ರೊಟ್ಟಿ ನೀರು ಅವಳ ತಲೆದಿಂಬಿನ ಹತ್ತಿರ ಇಟ್ಟು ಬದಿಗೆ ಸರಿಯುತ್ತಿದ್ದರು. ಕೇವಲ ನಸೀಬನಂಥ ಒಬ್ಬ ವ್ಯಕ್ತಿ ತಿಂಗಳಗಟ್ಟಲೆ ಹೊರಗೆ ಕಳೆದು ಎಂದಾದರೊಮ್ಮೆ ರಜೆಯಲ್ಲಿ ಊರಿಗೆ ಬರುವಂಥವನು ಅವಳ ಹತ್ತಿರ ಕೂತುಕೊಳ್ಳುತ್ತಿದ್ದ.

ಜಮ್ಮೂವಾಲೀ ಅಜ್ಜಿಯ ಬಗ್ಗೆ ಕೇಳಿ ನಸೀಬನಿಗೆ ಬಹಳ ದುಃಖವಾಯಿತು. ಸದಾ ಅಲೆದಾಡುವ ಸುತ್ತಾಡುವ ವ್ಯಕ್ತಿ, ಊರಿನ ಪ್ರತಿಯೊಂದು ಪ್ರಾಣಿಯ ಸಮಾಚಾರ ತಿಳಿದಾಗಲೇ ಹಾಯಾಗಿ ನಿದ್ದೆ ಮಾಡುವ ವ್ಯಕ್ತಿ ದಿನವಿಡೀ ಹೊರಸಿನ ಮೇಲೆ ಬಿದ್ದಿರುವದಾದರೂ ಹೇಗೆ? ಇಲ್ಲವಾದರೆ ಯಾರಾದರೂ ಸಾಯಬೇಕು ಮತ್ತು ಅಲ್ಲಿ ಅಜ್ಜಿ ಎಲ್ಲರಿಗೂ ಮುಂಚೆ ಮುಂದೆ ಬರಬೇಕು—ಹೀಗೆ ಜಗದ ಸ್ಥಾನವಾದರೂ ಎಲ್ಲಿ ಇತ್ತು? ಅವಳ ಸಲಹೆ ಕೇಳದೇ ಯಾವ ಮದುವೆ-ಲಗ್ನ ನಡೆದದ್ದುಂಟು? ಅವಳ ಅಭಿಪ್ರಾಯದ ವಿರುದ್ಧ ಊರಿನಲ್ಲಿ ಯಾವ ಗೋಡೆ ಎದ್ದು ನಿಂತದ್ದುಂಟು? ಕೊಂಡಿ ಹರಿದದ್ದು ಅವಳು ಕಣ್ಣಾರೆ ಕಾಣದ ಯಾವ ಬಾವಿ ಇತ್ತು? ನೆಲ ಯೋಜಣೆಯ ದಿನಗಳಲ್ಲಿ ಅವಳಿಗೆ ಒಂದೊಂದು ಅಂಗುಲ ಭೂಮಿಯ ಬೆಲೆ ಗೊತ್ತಿತ್ತು; ಒಂದೊಂದು ಬಾವಿ, ಒಂದೊಂದು ಮರಕ್ಕೆ ಕಟ್ಟಿದ ಬೆಲೆ ಅವಳ ಚಿತ್ತದಲ್ಲಿ ಕೊರೆದಿತ್ತು. ಅವಳದೇ ಸಾಹಸದಿಂದ ಅವಳ ಹುಡುಗರಿಗೆ ಉತ್ತಮೋತ್ತಮ ಜಮೀನು ದೊರೆತಿದ್ದುವು. ಅವಳಿಗೆ ಇದೂ ಪತ್ತೆಯಾಗುತ್ತಿತ್ತು. ಶಾಲೆಯ ಮೇಷ್ಟ್ರು ಯಾವ ಹುಡುಗೆಯ ಕಡೆಗೆ ನೋಡುತ್ತ ರಸ್ತೆಯಲ್ಲಿ ಹೋಗುತ್ತಿದ್ದಾನೆ, ಅಥವಾ ಊರ ಶಾನಭೋಗ ಯಾರ ಮನೆಗೆ ಬರ ಹೋಗುವುದು ಹೆಚ್ಚು. ಅವಳು ಕಾಯಿಲೆ ಬೀಳುವ ಮುಂಚೆ ಒಬ್ಬ ಹದಿನೈದು ವರ್ಷ ಪ್ರಾಯದ ಜಾಟ ಹುಡುಗನು ಹದಿಮೂರು ವರ್ಷದ ಒಬ್ಬ ಅಂಬಿಗ ಹುಡುಗಿಯು ತುಂಬಿದ ಕೊಡ ಎತ್ತಿಕೊಡುತ್ತ ಅಂದಿದ್ದ, 'ಈ ಭಾರದಿಂದ ಹುಡುಗಿಯ ಸೊಂಟ ಮುರಿದು ಹೋದೀತು.' ಆಗ ಬೇರೆ ಯಾರಿಗೂ ಗೊತ್ತಾಗಿರಲಿ ಬಿಡಲಿ, ಜಮ್ಮೂವಾಲೀ ಅಜ್ಜಿಗೆ ಆ ಅಂಬಿಗ ಹುಡುಗಿ ಏನು ಉತ್ತರ ಕೊಟ್ಟಿದ್ದಳೆಂಬುದು ಗೊತ್ತಾಗಿಬಿಟ್ಟಿತ್ತು: 'ಕೊಡವೇನು ಬಂತು? ಜಾಟರ ಹುಡುಗ ನನ್ನೇ ಸೊಂಟದ ಮೇಲೆ ಎತ್ತಿ ಹಿಡಿದೇನು!' ಎಂದು ಆಹ್ವಾನವಿತ್ತಿದ್ದಳು ಆ ಹುಡುಗೆ! ಮತ್ತು ಈಗ ಆರು ತಿಂಗಳಿಂದ ಅಜ್ಜಿ ಬೇನೆ ಬಿದ್ದಾಗ ಆ ಅಂಬಿಗ ಹುಡುಗೆ ಜಾಟ ಹುಡುಗನನ್ನು ಸೊಂಟಕ್ಕೆ ಎತ್ತಿಕೊಂಡಳೋ ಇಲ್ಲವೋ ಎಂಬುದು ಗೊತ್ತಾಗಿರಬಹುದೇ?

ನಸೀಬನ ಮನಸ್ಸು ತುಂಬಿ ಬಂದಿತು—ಕುಟಿಯ ತನಕ. ಅಜ್ಜಿಯನ್ನು ಭೆಟ್ಟಿಯಾದಾಗ ಆಕೆ ಕಳೆದ ಆರು ತಿಂಗಳು ತನ್ನ ಎದೆಯಲ್ಲಿ ಬಚ್ಚಿಟ್ಟ ಮಾತುಗಳನ್ನೆಲ್ಲ ಅವನ ಹತ್ತಿರ ಆಡಿದಳು. ಆ ವರ್ಷ ಹವಾಮಾನದ ಹಂಗಾಮು ಎಷ್ಟು ಹಾಳಾಗಿತ್ತು, ಮಳೆಯ ಮೇಲೆ ಮಳೆಗರಯಿತು. ಬೆಳೆಯುವ ಪೈರನ್ನು ಕ್ರಿಮಿ ತಿಂದುವು; ಮಿಡತೆಯಂತೂ ಬೇವಿನ ಸೊಪ್ಪನ್ನೂ ಬಿಡಲಿಲ್ಲ. ಎಲ್ಲ ಗಿಡ ಮರ ಬರಲಾಗಿ ಮೋಟಾಗಿ ಬಿದ್ದವು. ಮೇಲೆ ಮತ್ತೆ ಜ್ಯೋತಿಷಿಗಳೂ ನೆಮ್ಮದಿ ಕೊಡುತ್ತಿದ್ದಿಲ್ಲ. ಎಂಟೂ ಗ್ರಹಗಳು ಹಿಂದೆಂದಿಗೂ ಹೀಗೆ ಕೂಡಿದ್ದಿಲ್ಲ. ಮಕ್ಕಳಿಗೂ ಗೊತ್ತಾಗಿತ್ತು, ಗಾಳಿ ನೀರು ಮತ್ತು ಬೇರೆ ಒಂದೆಡೆ ಕೂಡುವುವೆಂದು ಹೇಳುತ್ತಿದ್ದರು. ಆ ಗ್ರಹಗಳು ಮಣ್ಣು ಒಂದ

ನ್ನೊಂದು ಕೂಡಿ ಕಲಬೆರಕೆ ಆಗಲಿದ್ದವು. ಇನ್ನೂ ದಿನ ನಿತ್ಯದ ವ್ಯವಹಾರ ಕಾರಭಾರ ಎಂದಿನಂತೆಯೇ ನಡೆಯುತ್ತಿದ್ದವು—ಆ ಮಾತೇ ಬೇರೆ. ಜಾಟರು ಅದೇ ಉತ್ಸಾಹದಿಂದ ಮಿಡತೆಗಳ ಬಾಯಿಯಿಂದ ಪೈರು ಉಳಿಸಲು ತೊಡಗಿದ್ದರು. ಎಳೆಯ ಗಂಡು ಹೆಣ್ಣು ಮೊದಲಿನಂತೆಯೇ ಬಾವಿ, ಕೆರೆ, ಭಟ್ಟಿಗಳ ಹತ್ತಿರ ಭೆಟ್ಟಿಯಾಗುತ್ತಿದ್ದರು. ಕಣ್ಣಿಗೆ ಕಣ್ಣು ಕೂಡಿದ ಮೇಲೆ ನೀರಿನ ಒಕೆಟ್ಟು ಹಿಡಿದು, ಇಲ್ಲವೇ ಭಟ್ಟಿಯಿಂದ ಹುರಗಾಳು ಪಡೆದು ಜಗೆಯುತ್ತಾ ತಲೆತಗ್ಗಿಸಿ ತಿರುಗಿ ಹೋಗುತ್ತಿದ್ದರು.

ಅಜ್ಜಿಯ ಕಿವಿಯ ತನಕ ಕೆಲವು ಮಾತು ಮುಟ್ಟುತ್ತಿದ್ದುವು. ಕೆಲವು ಮುಟ್ಟುತ್ತಿದ್ದಿಲ್ಲ. ಒಂದು ಬಿಸಿಬಿಸಿ ವದಂತಿ ಇಡಿ ಪಂಜಾಬದಲ್ಲಿ ಹಬ್ಬಿತ್ತು. ಅದು ಅಜ್ಜಿಯ ತನಕ ಮುಟ್ಟಿತ್ತು. ಜನ ಹೇಳುತ್ತಿದ್ದರು—ಭಾಖಡಾದ ಸರೋವರದಲ್ಲಿ ನೀರು ವಿಪರೀತ ತುಂಬಿದೆ. ಭಾಖಡಾ ಅಣೆಕಟ್ಟು ಇನ್ನು ಆ ನೀರನ್ನು ತಡೆಯಲಾರದು. ಎಳೆ ಮಕ್ಕಳಿಗೂ ನೆನಪಿತ್ತು—ಆ ಅಣೆಕಟ್ಟು ಒಡೆದರೆ ಏನು ಹಾನಿ ಆಗುವದೆಂದು. ಇಡಿಯ ಪಂಜಾಬದ ರಾಣಿಯಾದ ಭೂಮಿಯೇ ಸಮುದ್ರದ ನೆರೆ ಹಾವಳಿಯಲ್ಲಿ ಕೊಚ್ಚಿ ಹೋಗಿ ಮುಳುಗಲಿತ್ತು. ಕಾರೆ, ಬಗರಿಯ ಮರಗಳೇನು, ಆಲ, ಅಶ್ವತ್ಥಗಳೂ ಬೇರು ಗೂಡಿ ಕಿತ್ತುಬೀಳಲಿದ್ದವು. ಬಂಜರು ಮತ್ತು ಬೆಳೆ ಬರುವ ಭೂಮಿಗಳಲ್ಲಿ ಇನ್ನು ಯಾವ ಭೇದವೂ ಉಳಿಯುತ್ತಿದ್ದಿಲ್ಲ. ನೀರು ಮತ್ತು ಗಾಳಿ ಇನ್ನು ನದಿಗಳ ಸಿಟ್ಟನ್ನೇ ಬದಲಿಸಿಬಿಡುವವು. ರೊಚ್ಚು ರಭಸದಿಂದ ಸುಗ್ಗುವ ನೀರು ಹಳ್ಳಿಗಳು ಹೊಂಡ ಕಂದರಗಳನ್ನು ಏನು ಬಲ್ಲವು? ಹೊಳೆ-ಕಾಲುವೆಗಳು ಇನ್ನು ಹೆದ್ದಾರಿಗಳಂತೆ ನೇರವಾಗಿ ನಡೆಯುವವು. ಪ್ರತಿಯೊಬ್ಬನೂ ಒಳಒಳಗೇ ಹೆದರಿದ್ದನು. ಆದರೆ ಹೊರಗೆ ಎಲ್ಲರೂ ನಗುತ್ತಿದ್ದರು—ಈ ಪ್ರಳಯದಿಂದ ಹೌಹಾರಿದ್ದರೂ ಕೇವಲ ಎಳೆಮಕ್ಕಳು ನಿರ್ಭಯರಾಗಿದ್ದರು. ಯಾರೋ ಪ್ರವಾಸಿಗ ಅಕ್ರೋಡ ಮರವೇರಿ ಆಡುವಾಡುತ್ತಿದ್ದ ಮಕ್ಕಳಿಗೆ ಕೇಳಿದನು—ಇಂಥ ಜೋರಿನ ಬಿರುಗಾಳಿಯಲ್ಲಿ ಅವರು ಇಷ್ಟು ಗುಲ್ಲು ಗಲಾಟೆಯಿಂದ ಹೇಗೆ ಆಡುತ್ತಾರೆ? ಅದಕ್ಕೆ ಒಬ್ಬ ನಿಶ್ಚಿಂತ ಹುಡುಗ ಉತ್ತರವಿತ್ತ: "ಆಟವಾಡದೇ ಮತ್ತೇನು ಮಾಡುವದು? ಅಪ್ಪ ಅಂತಾನೆ, ಕೆಲವೇ ದಿನಗಳಲ್ಲಿ ಜಗತ್ತೇ ಮುಳುಗಿಹೋಗುವದಂತೆ!" ಇಂಥ ಅವಸ್ಥೆಯಲ್ಲಿಯೂ ನೆಸೀಬ ಚಂಚಲನಾಗಲಿಲ್ಲ. ಜಮ್ಮುವಾಲೀ ಅಜ್ಜಿಯೂ ಖುಶಿಯಾಗಿದ್ದಳು. ಏಕೆಂದರೆ ಇತರ ಜನರಂತೆ ನಸೀಬ ಹೆದರಿ ತನ್ನ ತಂಗಿಯ ಮದುವೆಯ ದಿನವನ್ನು ಮುಂದೆ ಹಾಕಲಿಲ್ಲ. ಅವಳಿಗೆ ಇನ್ನು ಹೆಚ್ಚಿನ ಖುಶಿ, ತನ್ನ ಮಕ್ಕಳಿಗೆ ದುಂಬಾಲಬಿದ್ದು ಆ ಹುಡುಗೆಯ ಮದುವೆಯಲ್ಲಿ ಹೋಗಿ ತಾನು ಕೂಡ್ರುವಳಿದ್ದಳು. ಮಂದಿ ಅವಳ ಮಾತಿಗೆ ಕಿವಿಗೊಡದಿದ್ದರೆ ಏನಾಯಿತು? ಏನಾದರೂ ಮಾತನಾಡಲಿಕ್ಕೆ ಒಂದು ಅವಕಾಶವಾದರೂ ಸಿಗುತ್ತದಲ್ಲ!

"ಮಗಾ, ನೀನು ಒಂದು ನಿಮಿತ್ತದಿಂದ ಬಂದಿದ್ದಿ. ನನಗೆ ನಿನ್ನ ತಂಗಿಯ

ಮದುವೆ ಜರೂರು ತೋರಿಸು. ನಾನು ಇಲ್ಲಿ ಕೋಣೆಯಲ್ಲಿ ಬಿದ್ದಿರುತ್ತೇನೆ. ಹಗಲಲ್ಲೇ ನನ್ನನ್ನು ಮಣೆಯ ಮೇಲೆ ಕೂಡ್ರಿಸಿ ಮದುವೆಯ ಚಪ್ಪರದಲ್ಲಿ ಮಲಗಟ್ಟಿನ ಕೆಳಗೇ ಒಯ್ದು ಇಡು. ಯಾರಿಗೆ ಗೊತ್ತು, ನಾನು ಎಷ್ಟುದಿವಸ ಇನ್ನು ಬದುಕಿ ಉಳಿಯುತ್ತೇನೋ. ಸಾಯುವ ಮುಂಚೆ ಊರಿನ ಮೋರೆಯನ್ನಾದರೂ ಒಮ್ಮೆ ನೋಡುವೆ.''

ಇಷ್ಟುಹೇಳಿ ಜುಮ್ಮಾವಾಲೀ ಅಜ್ಜಿ ಸುಮ್ಮನಾದಳು. ಇದಕ್ಕೂ ಹೆಚ್ಚು ಅವಳು ಹೇಳುವದಾದರೂ ಏನು? ಮತ್ತೆ ಅವಳಿಗೆ ತೋಚಿತು, ತನ್ನ ಕಾಯಿಲೆಯ ಬಗೆಗೂ ಕೇಳಿಬಿಡೋಣ. ಇನ್ನೂ ಯಾರೂ ಅರ್ಧಾಂಗವಾತಕ್ಕೆ ಏನಾದರೂ ಉಪಚಾರ ಹುಡುಕಿ ತೆಗೆಯಲಿಲ್ಲವೇ? ಕಲಕತ್ತೆಯಲ್ಲೂ ಇದಕ್ಕೆ ಮದ್ದು ಸಿಗುವದಿಲ್ಲವೇ? ಆ ಮದ್ದು ತಿಂದು ತಾನು ಊರಿನ ದುಃಖ ಸುಖಗಳಲ್ಲಿ ಭಾಗವಹಿಸಲು ಆಗದೇ? ಏನಾದರೂ ಮಾಡಿ ತನ್ನ ಕಾಯಕಲ್ಪ ಸಾಧ್ಯವಿಲ್ಲವೇ? ಮತ್ತು ಮೊದಲಿನಂತೆಯೇ ಆರೋಗ್ಯವಂತಳಾಗಿ ಅಸ್ತವ್ಯಸ್ತವಾದ ತನ್ನ ಕುಟುಂಬವನ್ನು ಚಲ್ಲಾಪಿಲ್ಲಿಯಾದ ಊರನ್ನು ತಿರುಗಿ ತನ್ನ ಮುಷ್ಟಿಯಲ್ಲಿ ಒಟ್ಟುಗೂಡಿಸಲಾರಳೇ? ಅವಳ ಕಾಯಿಲೆಗೆ ಮದ್ದು ಒಂದಲ್ಲ ಒಂದುಕಡೆಗೆ ಇರಲಿಕ್ಕೇ ಬೇಕು. ಕಂಟ್ರಾಕ್ಟದಾರ ಸಂತರಾಮನಿಂದ ಅವಶ್ಯವಾಗಿಯೂ ಏನಾದರೊಂದು ವಸ್ತು ಸಿಗಬಹುದು. ಅದರಿಂದ ಆಕೆ ಮೊದಲು ಇದ್ದಂತೆ ಆಗಿ ಎದ್ದು ಕುಳಿತುಕೊಳ್ಳಬಹುದು. ಸಂತರಾಮ ಊರಿನ ಅರ್ಧಮಂದಿಯ ಉದ್ಧಾರಮಾಡಿದ್ದ. ಆತ ಒಬ್ಬ ಮುದುಕಿಯ ದೂರು ಕೇಳಲಾರನೇ? ಅಜ್ಜಿಯ ಇಚ್ಛೆಯೇನಂದರೆ ಮಿಸ್ತ್ರೀ ಸಂತಾರಾಮ ಮತ್ತು ನಸೀಬ ದೇವರನ್ನೇ ಕತ್ತಿಗೆ ಕೈ ಹಾಕಿ ಹಿಡಿದು ಅವಳ ಬಳಿಗೆ ತರಬಹುದು. ಮತ್ತು ಅವನನ್ನು ಅಜ್ಜಿಯ ಕಾಲಿಗೆ ಕೆಡುಹಿ ಅವನು ಕೊಟ್ಟ ಕಾಯಿಲೆಯನ್ನು ತಿರುಗಿ ತೆಗೆದುಕೊಳ್ಳಲ್ಲಿಕ್ಕೆ ಹಚ್ಚಬೇಕು. ಅಜ್ಜಿಯ ದೃಷ್ಟಿಯಲ್ಲಿ ಸಂತರಾಮ ಒಬ್ಬ ಹಾವಾಡಿಗ. ತನ್ನ ಕೌಶಲ್ಯದಿಂದ ಹಾವು ಕಚ್ಚಿದ್ದಕ್ಕೆ ಉಪಚಾರಮಾಡಲು ಆ ಕಚ್ಚಿದ ಹಾವನ್ನೇ ಕಟ್ಟಿ ತರುತ್ತಿದ್ದ. ಮತ್ತು ಆ ಹಾವು ಹಾವಾಡಿಗನ ಅಪ್ಪಣೆ ಮನ್ನಿಸಿ ತನ್ನ ವಿಷವನ್ನು ತಾನೇ ಹೀರಿಕೊಳ್ಳಬೇಕಾಗುತ್ತಿತ್ತು.

ಮೊದಲು ದಿಬ್ಬಣದೊಂದಿಗೆ ಕೂಡ್ರುವ ಮತ್ತು ಈಗ ನಸೀಬ ಒಪ್ಪಿದ ಮಾತಿನಿಂದ ಜುಮ್ಮಾವಾಲೀ ಅಜ್ಜಿಯ ಮೋರೆಯ ಮೇಲೆ ಒಂದು ವಿಚಿತ್ರಕಾಂತಿಯು ಬಂದಂತೆ ಇತ್ತು. ಅಜ್ಜಿ ಅರ್ಧ ಅಂಗದಿಂದಲೇ ಎದ್ದು ನಡೆದಾಡಲಿಕ್ಕೆ ತಾಗುವಳೋ— ಎಂದು ನಸೀಬನಿಗೆ ಅನಿಸಿತು. ಇಂದಿನ ಪ್ರಪಂಚದಲ್ಲಿ ಯಾವ ರೋಗಕ್ಕೂ ಉಪಾಯವಿಲ್ಲದಿಲ್ಲ—ಎಂದು ನಸೀಬ ಅಜ್ಜಿಗೆ ಸಾಂತ್ವನೆ ಹೇಳಿದ. ಡಾಕ್ಟರರ ಹತ್ತಿರ ಪ್ರತಿಯೊಂದು ರೋಗಕ್ಕೂ ಮದ್ದು ಇದ್ದೇ ಇದೆ. ಆದ್ದರಿಂದ ಅಜ್ಜಿ ನಿರಾಶಳಾಗಬಾರದು. ಆದರೆ ಇದನ್ನು ಕೇಳಿದೊಡನೆ ಅಜ್ಜಿಯ ಮೋರೆಯ ಕಳೆ ತುಸು ಕುಗ್ಗಿತು.

ಏಕೆಂದರೆ ಆಕೆ ಪೂರ್ತಿ ಆರೋಗ್ಯವಂತಳಾಗಲೂ ಇಚ್ಛಿಸುತ್ತಿದ್ದಿಲ್ಲ. ಆರು ತಿಂಗಳಲ್ಲಿ ಅವಳ ಕಲ್ಪನೆಯಲ್ಲಿ ಪ್ರಪಂಚ ಇಷ್ಟು ಬದಲಿಸಿ ಹೋಗಿತ್ತು, ಅಜ್ಜಿಗೆ ತಿರುಗಿ ಅದರ ಮೇಲೆ ಅಂಕೆ ಸ್ಥಾಪಿಸುವದು ಸಾಧ್ಯವಿದ್ದಿಲ್ಲ. ಅವಳ ಹುಡುಗರು, ಸೊಸೆಯಂದಿರು, ಆಪ್ತರು—ಎಲ್ಲರೂ ಏನೇನೋ ಆಗಿಬಿಟ್ಟಿದ್ದರು. ಅವರೆಲ್ಲ ಮೊದಲಿನಂತೆ ತನಗೆ ಮರ್ಯಾದೆ ತೋರಿಸಬೇಕೆಂದು ಅವಳು ಒತ್ತಾಯಮಾಡುವದಾದರೂ ಹೇಗೆ? ಊರಿನ ಕರಣಿಕ ಹೇಳುತ್ತಿದ್ದ, ಆತ ನಾಲ್ಕುದಿನ ಕೆಲಸಕ್ಕೆ ಹೋಗದಿದ್ದರೆ, ಅಷ್ಟರೊಳಗೆ ತಹಸೀಲಿನ ಪ್ರಪಂಚವೇ ಬದಲಾಯಿಸಿಹೋಗುತ್ತಿತ್ತು. ಅವನ ಪಕ್ಕಾ ಗಿರಾಕಿಗಳೂ ಹೊಸ ಕರಣಿಕನಿಂದ ತಮ್ಮ ಕೆಲಸ ಮಾಡಿಸಿಕೊಳ್ಳಲು ಶುರುಮಾಡಿಬಿಡುತ್ತಿದ್ದರು. ಅಂಥಲ್ಲಿ ಅಜ್ಜಿ ಆರುತಿಂಗಳಿಂದಲೇ ಕಾಯಿಲೆ ಬಿದ್ದಿದ್ದಳು. ಈಗ ಅವಳ ಪ್ರಪಂಚದ ಮೇಲೆ ಯಾರು ಅಂಕೆ ಸ್ಥಾಪಿಸಿಕೊಂಡಿದ್ದಾರೋ—ಯಾರಿಗೆ ಗೊತ್ತು? ತಾನು ಆರೋಗ್ಯಪಡೆದಮೇಲೆಯೂ ಯಜಮಾನಿಕೆ ಪಡೆಯಲಿಕ್ಕೆ ಸಾಧ್ಯವಾಗದೇ ಹೋಗುವ ಈ ಪ್ರಪಂಚದ ಬಗೆಗೆ ಅಜ್ಜಿಗೆ ಭಯ. ಈಗ ಅವಳನ್ನು ಯಾರು ಬಲ್ಲರು? ಅವಳು ಖಿನ್ನಳಾದಳು. ಯಾವ ಮದುವೆ ಮೆರವಣಿಗೆ, ದಿಬ್ಬಣದೊಂದಿಗೆ ಅವಳೇನು ಕೊಡುಕೊಳ್ಳುವುದಿದೆ? ಯಾರ ಖುಶಿಯಲ್ಲಿ ಅವಳಿಗೆ ಏನು ಆಕರ್ಷಣೆ ಉಳಿದಿದೆ? ಅವಳ ಸ್ಥಿತಿ ಸತ್ತವರ ಅಗಲಿದವರಿಗಿಂತ ಕೀಳುಮಟ್ಟದ್ದಾಗಿದೆ.

ನಸೀಬ ಸುಮ್ಮನೆ ಜುಮ್ಮಾವಾಲಿ ಅಜ್ಜಿಯ ಮೋರೆಯತ್ತ ನೋಡುತ್ತ ಉಳಿದ. ಅವಳ ತಲೆಯ ಮೇಲೆ ಅವಳ ಮನಸ್ಸಿನ ಚಿಂತೆಗಳು ಅಚ್ಚಿನ ಅಕ್ಷರಗಳಂತೆ ಸ್ಪಷ್ಟ ಮೂಡಿಬಂದಿದ್ದುವು. ಅವಳ ಕಣ್ಣು ದೂರ ಎಲ್ಲೋ ಶೂನ್ಯದಲ್ಲಿ ನೆಟ್ಟಿದ್ದುವು. ಅವಳು ತನ್ನ ಒಳಗಣ್ಣಿನಿಂದ ಜನ ಅಷ್ಟಗ್ರಹಯೋಗಕ್ಕೆ ಹೆದರಿ ಓಡುವದನ್ನು ಅವಳು ನೋಡುತ್ತಿದ್ದಳು. ಬಹಳ ಜನ ಮನೆಗಳಿಂದ ಹೊರಬಿದ್ದು ತಮ್ಮ ಡೇರೆಗಳನ್ನು ಎತ್ತರದ ದಿನ್ನೆಗಳ ಮೇಲೆ ನಿಲ್ಲಿಸಿದ್ದು ಅವಳು ನೋಡುತ್ತಿದ್ದಳು. ಅವಳಿಗೆ ಅನಿಸಿತು, ತನ್ನ ಇಡಿ ಮನೆಯವರೆಲ್ಲರೂ ತನ್ನನ್ನು ಹುಲ್ಲು ತುಂಬಿದ ಕೋಣೆಯಲ್ಲಿ ಬಿಟ್ಟು ಮಾತಾರಾಣಿಯ ಗುಡ್ಡದಮೇಲೆ ಹೋಗಿ ನೆಲೆಸಿದ್ದಾರೆ. ಅವಳಿಗೆ ಕಂಡು ಬರುತ್ತಿತ್ತು, ಮನೆಯವರಲ್ಲಿ ಒಬ್ಬರಿಗೂ ತನ್ನೊಂದಿಗೆ ಯಾವದೇ ಸಂಬಂಧವಿದ್ದಿದ್ದಿಲ್ಲ.

ಪರಮಾತ್ಮನು ಮಹಾ ಅನಂತನು. ಆತ ಭಾಖಡಾದ ಜಲಾಶಯದಲ್ಲಿ ಮಣ ಗಟ್ಟಲೆ ನೀರು ಬಾಯಿಯ ತನಕವೂ ತುಂಬಿದ್ದ. ಅಜ್ಜಿಗೆ ಸ್ಪಷ್ಟವಾಗಿಯೇ ತೋರಿ ಬರುತ್ತಿತ್ತು. ಆ ಜಲಾಶಯದ ನೀರು ಪ್ರಪಂಚದಲ್ಲಿ ವಿಷವನ್ನೇ ಬಿರಿಯಿಸುತ್ತಿದೆ— ಒಳಬಳಗೇ ನೀರು ಉಕ್ಕಿ ಅರಳುತ್ತಿದ್ದಂತೆ. ಅವಳಿಗೆ ಗೊತ್ತು ಈ ಬಗೆಯ ಸುದ್ದಿ ಎಂದೂ ಸುಳ್ಳಾಗುವದಿಲ್ಲ. ಅವಳು ತನ್ನ ಹರಯದ ದಿನಗಳಲ್ಲಿ ಕ್ವೆಟ್ಟಾದ ಭೂಕಂಪದ ಹಲವಾರು ಸುದ್ದಿ ಕೇಳಿದ್ದಳು. ಆಗ ಅದೆಲ್ಲ ಕೇಳಿ ಅವಳಿಗೆ ಬಹಳ ದುಃಖವಾಗಿತ್ತು. ಆದರೆ ಭಾಖಡಾದ ಅಣೆಕಟ್ಟು ಒಡೆಯುವದು ಅವಳಿಗೆ ಒಂದು ದೈವ ಸಂಕೇತ

ದೈವೀ ಅನುಗ್ರಹವಾಗಿಯೆ ಅನಿಸಿತು. ಒಂದೇ ಹಾವಳಿಗೆ ಅದು ಪಂಜಾಬವನ್ನು ಮುಕ್ತಮಾಡುವದು. ಅಜ್ಜಿಯ ಜೀವಕ್ಕೆ ಒಂದು ಲವಲವಿಕೆ—ಇಷ್ಟೆಲ್ಲ ಹೆಚ್ಚಿನ ನೀರನ್ನು ಸೆರೆಹಿಡಿದು ಕಟ್ಟಿಟ್ಟ ಆ ಎಂಜಿನಿಯರನಿಗೆ ಹೇಗಾದರೂ ಮಾಡಿ ಒಮ್ಮೆ ಭೆಟ್ಟಿಯಾಗಬೇಕು. ಒಂದು ಶುಭದಿನದಲ್ಲಿ ಅವಳಿ ಅರ್ಧಾಂಗವಾತದ ರೋಗಿಯಾಗಿ ಬಾಳಿನ ಬೇಸರ ಬಂದುಬಿಟ್ಟಾಗ ಅಷ್ಟು ದೊಡ್ಡ ಅಣೆಕಟ್ಟು ನೊಣಗಳ ಸಾಲಿನಂತೆ ಒಡೆದು ಹೋಗುವದೆಂಬುದರ ಪೂರ್ತಿ ಜ್ಞಾನ ಎಂಜಿನಿಯರನಿಗೆ ಇತ್ತೆಂಬ ಭರವಸೆ ಅಜ್ಜಿಗೆ ಇತ್ತು.

ಅಜ್ಜಿಯು ಶೂನ್ಯದಿಂದ ತನ್ನ ದೃಷ್ಟಿ ಹಿಂದೆಗೆದು ನಸೀಬನ ಕಡೆಗೆ ನೋಡಿ ಅಂದಳು, "ಹೂಂ. ನಿಜ, ನಿನಗೆ ಈ ಭಾಖಡಾ ಕಟ್ಟು ಒಡೆಯುವದರ ವಿಷಯ ಎಲ್ಲವೂ ತಿಳಿದಿರಬೇಕು. ಒಳ್ಳೇದು, ಇನ್ನು ಎಷ್ಟುದಿನ ಉಳಿಯಿತು? ಆ ಪ್ರಚಂಡ ದೈತ್ಯಸಂತ ಅಣೆಕಟ್ಟು ಇನ್ನೂ ಕೆಲವುದಿನ ತಾಳುವುದೋ ಇಲ್ಲವೋ?" ಅವಳು ತನ್ನ ಮನಸ್ಸಿನ ಕಳವಳವನ್ನು ತಡೆಗಟ್ಟಿ ಈ ಕೊನೆಯ ವಾಕ್ಯವನ್ನು ಬಾಯಿಂದ ಹೊರದೆಗೆದಳು. ಏಕೆಂದರೆ ಭಾಖಡಾ ಅಣೆಕಟ್ಟು ಒಡೆಯುವ ವಾರ್ತೆಯಿಂದ ತನಗೆ ಬಹಳ ಖುಷಿಯಾಗಿದೆ ಎಂಬುದು ನಸೀಬನಿಗೆ ತಿಳಿಯಬಾರದು. ಅಜ್ಜಿಯ ಮನಸ್ಸಿನಲ್ಲಿದ್ದ ಈ ವಿಷಯದ ಬಗ್ಗೆ ನಸೀಬ ಹೆಚ್ಚು ಗಮನಕೊಡಲಿಲ್ಲ. ಈ ಬಗೆಯ ಅಪಾಯ ಭವಿಷ್ಯದಲ್ಲೂ ಸಹ ಎಂದೂ ಬರಲಾರದೆಂಬುದನ್ನು ಅವನು ಅರಿತಿದ್ದನು. "ನಿನಗೇನಾಗಿದೆ ಅಜ್ಜೀ? ನೀನು ವ್ಯರ್ಥವಾಗಿ ಹೆದರಿ ಹೋಗುತ್ತಿರುವಿ. ಎಲ್ಲೂ ಕಟ್ಟು ಗಿಟ್ಟು ಏನೂ ಹರಿಯುವದಿಲ್ಲ. ಅದನ್ನೇನು ನಮ್ಮೂರ ಲಲ್ಲೂ ಉಪ್ಪಾರ ಕಟ್ಟಿದ್ದೇ? ಮಹಾಮಹಾ ಕಸಬುಗಾರರ ಕೈಯಿಂದ ಆಗಿದೆ ಆ ಕೆಲಸ. ಮೂರ್ಖರು ಇಂಥ ಸುಳ್ಳು ಸಮಾಚಾರಗಳನ್ನು ಹಬ್ಬಿಸಿಬಿಡುತ್ತಾರೆ. ನೀನು ಆರಾಮಾಗಿ ಮಲಗಿರು—ಕೇವಲ ನಿಶ್ಚಿಂತೆಯಿಂದ." ಆತ ಅಜ್ಜಿಗೆ ಭರವಸೆ ಕೊಟ್ಟ.

ನಸೀಬ ನೋಡಿದ, ಈ ಮಾತು ಕೇಳಿ ಅಜ್ಜಿಯ ಮೋರೆ ಹತ್ತಿಯಂತೆ ಬಿಳುಪಾಗಿ ಬಿಟ್ಟಿತು. ಅವಳ ದೇಹದ ಒಂದು ಮಗ್ಗಲಿನ ನಾಡಿಯು ಜೋರು ಜೋರು ಮಿಡಿಯ ಹತ್ತಿತು. "ಆಂ?" ಅಜ್ಜಿ ಡವಡವಿಸುವ ಎದೆಯಿಂದ ಅಂದಳು—ಅವಳಿಗೆ ಯಾರೋ ಬಲು ದೊಡ್ಡ ವಂಚನೆ ಮಾಡಿದಂತೆ. ಅವಳು ಶಿಥಿಲಳಾಗಿ ಹೊರಸಿನಲ್ಲಿ ಬಿದ್ದುಬಿಟ್ಟಳು.—ಅವಳ ದೇಹದ ಜೀವಂತ ಭಾಗವೂ ಒಮ್ಮೆಲೆ ನಿರ್ಜೀವವಾದಂತೆ.

## ಮರಣ ಋತು

ಸುಮಾರು ಅರ್ಧ ರಾತ್ರಿಗೆ ರಜನಾಳಿಗೆ ಕನಸು—ಅವಳ ಕಾಲಿಗೆ ಹಾವು ಕಚ್ಚಿತ್ತು.

ಅವಳು ಹೌಹಾರಿ ಎಚ್ಚತ್ತು ಎದ್ದಳು.

ಎದ್ದು ಕುಳಿತಳು.

ದೀಪ ಉರಿಸಿದಳು. ಕಾಲು ಮುಟ್ಟಿ ತಡವಿ ನೋಡಿದಳು. ಆದರೆ ಅದು ಬರೇ ಕನಸಾಗಿತ್ತು.

ಬಹುಶಃ ಅವಳಿಗೆ ನಿನ್ನೆಯ ಸಂಗತಿ ನೆನಪಿನಲ್ಲಿ ಉಳಿದಿರಬೇಕು. ಸಿನೇಮಾಕ್ಕೆ ಹೊರಡುವಾಗ ಹೂವು ಕಿತ್ತು ಆ ಹೆಳಲಲ್ಲಿ ಮುಡಿದುಕೊಳ್ಳಲು ಕೈಚಾಚಿದಾಗ ಅವಳ ತಾಯಿ ಅವಳಿಗೆ ಅಂದಿದ್ದಳು, "ಕತ್ತಲೆಯಲ್ಲಿ ನಸುಕಿನಲ್ಲಿ ಗಿಡಗಳಿಗೆ ಕೈಹಚ್ಚಬೇಡ. ಶ್ರಾವಣದ ತಿಂಗಳು. ಗಿಡಗಳಿಂದ ನೂರುಬಗೆಯ ಹಾವು-ಹುಳ ಹೊರಬರುತ್ತವೆ."

"ಶ್ರಾವಣ ಮಾಸದಲ್ಲಿ ಮುಗಿಲು ಮಳೆಗರೆಯುತ್ತವೆ. ಹೂವು ಅರಳುತ್ತವೆ. ಎಲ್ಲ ವನಸಿರಿ ನಲಿದು ನಿಲ್ಲುತ್ತವೆ. ಉಯ್ಯಾಲೆ ತೂಗುತ್ತವೆ. ಚರಿಗೆ ಬೇಯುತ್ತವೆ. ತದಿಗೆಯ ನಿಮಿತ್ತ ಅಣ್ಣ-ತಮ್ಮಂದಿರು ಅಕ್ಕ-ತಂಗಿಯರನ್ನು ಅವರ ಮಾವನ ಮನೆಗಳಿಂದ ಕರೆದುತರುತ್ತಾರೆ—ಮತ್ತು ಇದೇ ತಿಂಗಳಲ್ಲಿ ಬಹಳಷ್ಟು ಹಾವು ಹೊರಬರುತ್ತವೆ!" ರಜನಾ ವಿಚಾರ ಮಾಡುತ್ತಿದ್ದಳು.

ಎಲ್ಲೋ ದೂರ ನಾಯಿಗಳು ಬೊಗಳುತ್ತಿದ್ದವು.

ರೆಕ್ಕೆ ಫಡಫಡಿಸುತ್ತು ಒಂದು ಕಪ್ಪಗಿನ ಹಕ್ಕಿ ರಾತ್ರಿಯ ಕತ್ತಲೆಯಲ್ಲಿ ಅವರ ಮನೆಯ ಮೇಲಿಂದ ಹಾರಿ ಹೋಗುತ್ತಿತ್ತು.

"ನನಗೆ ಈ ಕೆಟ್ಟ ಕನಸು ಯಾಕೆ ಬಿತ್ತು? ಹಾವು ಕಚ್ಚಿದರೆ ಮಂದಿ ಸಾಯುವದೂ ಉಂಟು. ಆದರೆ ನಾನು ಸಾಯಲು ಬಯಸುವದಿಲ್ಲ. ನನ್ನ ಮರಣ ಋತು ಇನ್ನೂ ಬಂದಿಲ್ಲ."

ಸಾವಿಗೂ ಒಂದು ಋತು ಎಂಬುದುಂಟೇ? ರಜನಾ ತನ್ನನ್ನೇ ಕೇಳಿಕೊಂಡಳು.

ನಲ್ಲಿಯಿಂದ ಹನಿ ಹನಿ ನೀರು ತೊಟಕುತ್ತಿತ್ತು.

ಅವಳ ಲಕ್ಷ್ಯ ತಿರುಗಿ ಕನಸಿನತ್ತ ಹೋಯಿತು.

"ಹಾಂ ಋತು ಬರೇ ಹೊರಗಿನವು. ಮಾತ್ರವಲ್ಲ, ಮನದೊಳಗಿನವೂ ಇರುತ್ತವೆ. ಅವುಗಳಲ್ಲಿ ಒಂದು ಹೀಗೂ ಇರಬಹುದು—ಅದರಲ್ಲಿ ನಿಂತಾಗ ಅಕ್ಕ-ಪಕ್ಕ ಏನೂ ಕಾಣುವುದಿಲ್ಲ; ಆ ಋತು ಬಂಡೆಯಾಗುವದು. ಆ ಋತುವಿನಲ್ಲಿ ಬಿರುಸಾಗಿ ಗಾಳಿ

ಬೀಸುವದು. ದೆವ್ವ ಭೂತಗಳು ಕುಣಿದಾಡುವವು. ಅದೇ ಮರಣ ಋತು.'' ರಜನಾ ತನ್ನ ಉಸಿರಿನ ಮೇಲೆ ಕಗ್ಗತ್ತಲೆಯ ಒತ್ತಡವನ್ನು ಅನುಭವಿಸುತ್ತ ಚಿಂತಿಸಿದಳು.

"ಆದರೂ ನಾನು ಇನ್ನೂ ಸಾಯಲು ಬಯಸುವದಿಲ್ಲ. ಈಚೆಗೆ ನನ್ನ ಜತೆ ಅರವಿಂದನಿದ್ದಾನೆ. ಆಚೆಗೆ ನಮ್ಮಿಬ್ಬರ ಭವಿಷ್ಯವಿದೆ. ಹಾದಿಯಲ್ಲಿ ಹೂವು ಅರಳಿವೆ. ಅರವಿಂದ ಒಂದು ಹೂವನ್ನು ನನ್ನ ಹೆಳಲಲ್ಲಿ ಸಿಕ್ಕಿಸಿದ್ದ.''

ಕತ್ತಲೆಯಲ್ಲಿ ಒಂದು ಮಿಂಚು ಹುಳ ತನ್ನ ದೀಪ ಹೊತ್ತು ಹಾರಿತು. ಅದು ಇದೀಗ ಇಲ್ಲಿಯೇ ಸುಳಿಯುತ್ತಿತ್ತು. ಆದರೆ ಈಗ ಎಲ್ಲಿ ಹೋಯಿತೋ . . .

ರಜನಾಳಿಗೆ ಮತ್ತೆ ಕನಸಿನಲ್ಲಿ ಕಂಡ ಹಾವಿನ ನೆನಪು ಆಯಿತು. "ಇಡೀ ಪ್ರಪಂಚದಲ್ಲಿ ಅದು ನನಗೆ ಕಚ್ಚಬೇಕೇ ? ಆದರೆ ಅದರದೇನು ತಪ್ಪು ? ಕಚ್ಚುವುದು ಅದರ ಸ್ವಭಾವ . . . ಅರವಿಂದನ ಸ್ವಭಾವ ಇಷ್ಟು ಒಳ್ಳೆಯದು,—ಜುಳುಜುಳು ಹರಿಯುವ ತಣ್ಣೀರಿನ ಹಳ್ಳ, ಹಳ್ಳದಲ್ಲಿ ನೆರೆಯೂ ಬರುವದುಂಟು. ಅದರಲ್ಲಿ ಮಂದಿ ಮುಳುಗಿ ಸಾಯುವದೂ ಉಂಟು . . . ಇಲ್ಲ. ನಾನು ಮುಳುಗಿ ಸಾಯಲು ಬಯಸುವದಿಲ್ಲ.''

ಕತ್ತಲೆಯಲ್ಲಿ ಕೂತ ಕಪ್ಪುಬೆಕ್ಕಿನ ಕಣ್ಣು ಹೊಳೆಯುತ್ತಿದ್ದುವು.

"ನಾನು ಇಂದು ಇದೇನು ಅಲ್ಲದ-ಸಲ್ಲದ ಮಾತು ಚಿಂತಿಸುತ್ತಿದ್ದೇನೆ ?'' ರಜನಾ ವಿಚಾರಮಾಡಿದಳು. ಮತ್ತು ಮಗ್ಗಲು ಹೊರಳಿ ನಿದ್ದೆ ಹೋಗಲು ಯತ್ನಿಸಿದಳು. ಆದರೆ . . . ಈ ಹೊತ್ತಿಗೆ ಅರವಿಂದನ ನೆನಪು ಇಷ್ಟೇಕೆ ಒತ್ತಿ ಒತ್ತಿ ಬರುತ್ತಿತ್ತೋ. ಅರವಿಂದ ಅವಳ ವಾಗ್ದತ್ತ ವರ. ಆತ ಹತ್ತು ಮೈಲು ದೂರ ಬೇರೊಂದು ಶಹರದಲ್ಲಿ ಇಷ್ಟು ಹೊತ್ತಿಗೆ ನಿದ್ದೆಯಲ್ಲಿ ಮಲಗಿರಬೇಕು.

"ಯಾರಿಗೆ ಗೊತ್ತು. ಅವನೂ ನನ್ನ ಬಗ್ಗೇ ಕನಸು ಕಾಣುತ್ತ ಇರುವನೋ ಏನೋ'' ಎಂದು ಯೋಚಿಸಿ ಅವಳು ಹಿಗ್ಗಿ ಅರಳಿದಳು.

ಆಕಾಶದಲ್ಲಿ ಸರಿಯುತ್ತ ಸರಿಯುತ್ತ ಚಂದ್ರ ಈಗ ಅವಳ ಮನೆಯ ಮೇಲಕ್ಕೇ ನೆಟ್ಟಗೆ ಬಂದುಬಿಟ್ಟಿದ್ದ.

"ಆದರೆ ಇಷ್ಟು ಲಗುಬಗೆಯಿಂದ ಈ ಚಂದ್ರ ಹೊರಟಿದ್ದಾದರೂ ಎಲ್ಲಿಗೆ ? ಅರವಿಂದನ ಶಹರದ ಕಡೆಗೋ ?''—ಎಂದು ಯೋಚಿಸಿ ರಜನಾ ಮತ್ತೆ ನಕ್ಕುಬಿದ್ದಳು.

ಇದೇ ಮಾತಿಗಾಗಿ ಅರವಿಂದ ಅವಳನ್ನು ತಮಾಷೆಮಾಡಿದ್ದ. ಅವನ ಇದುರಿಗೆ ಹೋದೊಡನೆ ರಜನಾ ಹೀಗೇ ನಕ್ಕು ಬೀಳುತ್ತಿದ್ದಳು. ಅವಳು ಹೆಚ್ಚು ಗಂಭೀರ ಚರ್ಯೆ ಮಾಡಿಕೊಳ್ಳುತ್ತಿದ್ದಳು. ಆದರೆ ಅವಳ ನಗೆ ಹೊರಸೂಸಿ ಬರುತ್ತಿತ್ತು.

ಅವಳಿಗೆ ನಿದ್ದೆಯೇ ಬರಲಿಲ್ಲ. ಅವಳು ಎದ್ದು ಕುಳಿತಳು. ಗಾಳಿಯೊಂದಿಗೆ 'ರಾತ್ರಿರಾಣಿ' (ನಿಶಿಗಂಧ) ಯ ಕಂಪು ಬಂತು. ರಜನಾ ಉದ್ದುದ್ದ ಉಸಿರೆಳೆದು ಆ ಸುಗಂಧವನ್ನು ತನ್ನೊಳಗೆ ಶೇಖರಿಸಿಕೊಳ್ಳುವಂತೆ ಅನಿಸಿತು.

"ಆದರೆ ಅನ್ನುತ್ತಾರೆ, ರಾತ್ರಿರಾಣಿಯ ಗಿಡದ ಪರಿಮಳದಡಿಗೆ ಹಾವು ಬರುತ್ತವಂತೆ . . . ಹಾವು."

ರಚನಾ ಎದ್ದು ಲೈಟು ಹಾಕಿದಳು. ಹೂಜಿಯೊಳಗಿಂದ ಗ್ಲಾಸಿನಲ್ಲಿ ನೀರು ಬಗ್ಗಿಸಿ ಕುಡಿದಳು. ಮತ್ತೆ ಪಾಠಕ್ಕೆ ಕುಳಿತಳು.

ಪಾಠದಲ್ಲಿ ಅವಳಿಗೆ ಮನಸ್ಸು ಹಿಡಿಸಲಿಲ್ಲ. ಏಕೋ ಏನೋ ಅವಳಿಗೆ ಗಾಬರಿ ಅನಿಸಹತ್ತಿತ್ತು.

ಸ್ಟೇಶನ್ನಿನಲ್ಲಿ ರೈಲು ಚೀರಿತು.

ಈ ಚೀತ್ಕಾರ ಇಂದು ಅವಳಿಗೆ ಭಾರೀ ವಿಚಿತ್ರ ಮತ್ತು ಭಯಾನಕವೆನಿಸಿತು.

"ಅಮ್ಮಾ, ಚಹಕ್ಕೆ ನೀರು ಇಡಲೇ?" ಅವಳು ತಾಯಿಯನ್ನು ಕೇಳಿದಳು. ತಾಯಿಗೆ ಆಗಲೆ ಎಚ್ಚರಾಗಿತ್ತು.

"ನೀನು ಇಂದು ಇಷ್ಟು ಬೇಗ ಹೇಗೆ ಎಚ್ಚರಾದೆ? ನಿನ್ನ ಪಾಠ ಮಾಡು. ಚಹ ನಾನು ತಯಾರಿಸುತ್ತೇನೆ" ಎನ್ನುತ್ತ ಅವಳ ತಾಯಿ ಎದ್ದು ಕುಳಿತಳು.

ರಚನಾ ಸ್ನಾನಕ್ಕಾಗಿ ಬಚ್ಚಲಕೋಣೆಗೆ ನಡೆದಳು. ಸ್ನಾನ ಮುಗಿಸಿ ಸಿದ್ಧಳಾದಳು.

ಅವಳು ಚಹ ಕುಡಿದಳು. ವೃತ್ತಪತ್ರಿಕೆಯ ಮೇಲೂ ಕಣ್ಣು ಹಾಯಿಸಿದಳು.

ಅಜ್ಜಿಗೆ ರಾಮಾಯಣದ ಒಂದು ಅಧ್ಯಾಯವನ್ನು ಓದಿ ಹೇಳಿದಳು. ಆದರೂ ಕಾಲೇಜಿಗೆ ಹೊರಡುವ ವೇಳೆ ಆಗಿದ್ದಿಲ್ಲ.

ಈ ಹೊತ್ತು ದಿವಸ ಬಹಳ ನಿಧಾನವಾಗಿ ಸಾಗಿತ್ತು.

ಅವಳು ಕಾಲೇಜಿನ ಕಡೆಗೆ ನಡೆದಳು. ಬಸ್‌ಸ್ಟ್ಯಾಂಡಿನ ಬದಿಯಿಂದ ಹಾಯುವಾಗ ಅವಳಿಗೆ ಅರವಿಂದನ ವಿಚಾರ ಬಂದಿತು.

ಅರವಿಂದನ ನಗರಕ್ಕೆ ಹೊರಡುವ ಬಸ್ಸು ಹಾರ್ನ ಮಾಡಿತು—ರಚನಾಳನ್ನೇ ಕೂಗಿ ಕರೆಯುತ್ತಿತ್ತು!

ರಚನಾ ತ್ವರೆಯಿಂದ ಬಸ್ಸಿನಲ್ಲಿ ಏರಿಕೂತಳು.

"ಅರವಿಂದನಿಗೆ ಏನು ಹೇಳಲಿ?—ನಾನು ಯಾಕೆ ಬಂದೆನೆಂದು ಹೇಳಲಿ?"—ಎಂದು ಯೋಚಿಸಿ ಅವಳು ತನ್ನ ಮೇಲೆಯೇ ಸಿಟ್ಟಾದಳು.

"ಹೇಳಿಬಿಡ್ತೇನೆ—ಕೆಟ್ಟಕನಸು ಕಂಡೆ . . . ಅವ ನನ್ನ ಗೇಲಿಮಾಡುವ."

ಇನ್ನೂ ಅವನ ನಿದ್ದೆಯೇ ಹರಿದಿರಲಿಕ್ಕಿಲ್ಲ. ಹತ್ತುಗಂಟೆಗೆ ಅವನ ಆಫೀಸು. ಅವಳು ಇದೇ ವಿಚಾರ ತಂದ್ರಿಯಲ್ಲಿ ಇದ್ದಾಗಲೇ ಅರವಿಂದನ ನಗರ ಬಂದುಬಿಟ್ಟಿತು.

ಬಸ್‌ಸ್ಟ್ಯಾಂಡಿನಿಂದ ತುಸು ದೂರವೇ ಅರವಿಂದ ಇರುತ್ತಿದ್ದ.

ಇಲೆಕ್ಟ್ರಿಕ್ ತಂತಿಯನ್ನು ಮುಟ್ಟಿ ಒಂದು ಹಕ್ಕಿ ಸತ್ತುಹೋಗಿತ್ತು. ಅದು ಆ ತಂತಿಯಿಂದಲೇ ನೇತಾಡುತ್ತಿತ್ತು.

ಅರವಿಂದನ ಮನೆ ಬಂದಿತು.

ರಚನಾ ಅಳುಕಿನಿಂದಲೇ ಬಾಗಿಲು ತಟ್ಟಿದಳು.

"ಯಾರು?" ಅರವಿಂದ ಒಳಗಿನಿಂದಲೇ ಕೇಳಿದ.

ರಚನಾ ಏನೂ ಹೇಳುವ ಬದಲು ಮತ್ತೆ ಬಾಗಿಲು ಡಬಡಬ ಬಡಿದಳು.

ಕೆಲವುಕ್ಷಣ ಮೌನ ಕವಿಯಿತು.

ಅವಳು ಮತ್ತೆ ಬಾಗಿಲು ತಟ್ಟಿದಳು. ಈ ಸಲ ತುಂಬ ಜೋರಿನಿಂದಲೇ ಅರವಿಂದ ಬಾಗಿಲನ್ನು ತೆರೆದ.

ರಚನಾ ನಕ್ಕಳು.

ಅರವಿಂದ ಹೆದರಿದಂತೆ ಕಂಡ.

ರಚನಾ ಅವನನ್ನು ಬದಿಗೆ ಸರಿಸಿ ಒಳಗೆ ಹೋದಳು.

ಒಳಗೆ ಹೋದೊಡನೆ ಅವಳು ತಟ್ಟನೆ ಸಟೆದು ನಿಂತುಬಿಟ್ಟಳು.

"ರಚನಾ, . . . ಇವಳು ಸುಷಮಾ . . . ನಮ್ಮ ಆಫೀಸಿನ . . . ಸ್ಟೆನೋ . . . ರಾತ್ರಿ ಬಹಳವಾಗಿತ್ತು . . . ನಾನೇ ಅಂದೆ . . . ನಾನೇ ಅಂದೆ . . . ಆಫೀಸಿನ ಅರ್ಜೆಂಟ್ ಕೆಲಸವಿತ್ತು . . ." ಅರವಿಂದ ಹೆದರಿದಪಟ್ಟಿಗೆ ಏನೇನೋ ಹೇಳುತ್ತಿದ್ದ.

ರಚನಾ ಒಂದುಸಲ ಸುಷಮಾಳ ಕಡೆಗೆ ಕತ್ತೆತ್ತಿ ಅಂದಳು. "ನಾನು ರಚನಾ. ಅರವಿಂದನ ವಾಗ್ದತ್ತ ವಧು."

ಮತ್ತೆ ಅವಳು ಲಕ್ಷ್ಯಗೊಟ್ಟು ಅರವಿಂದನ ಕಡೆಗೆ ನೋಡಿದಳು.

ಅವಳ ಮನಸ್ಸು ಆಳಕ್ಕೆ ಮುಳುಗಹತ್ತಿತು.

"ಕ್ಷಮಿಸು. ನಾನು ಹೀಗೆ ತಿಳಿಸದೆ ಬರಬಾರದಿತ್ತು" ಎಂದು ಅವಳು ನಿಂತ ಮೆಟ್ಟಿಗೇ ಹಿಂದಿರುಗಿ ಬಂದಳು.

ಅರವಿಂದ ಅವಳನ್ನು ಕೂಗುತ್ತಿದ್ದ. ಆದರೆ ಅವಳಿಗೆ ಅನಿಸುತ್ತಿತ್ತು—"ನಾನು ರಚನಾ ಅಲ್ಲ. ಇವ ಅರವಿಂದನೂ ಅಲ್ಲ. ನಾನು ಇದೆಲ್ಲಿಗೆ ಬಂದೆ? ಈ ಜನ ಯಾರು? ಇದು ಯಾವ ಋತು? ಅಕ್ಕಪಕ್ಕ ಏನೂ ಕಾಣುವುದಿಲ್ಲ!"

ಅವಳಿಗೆ ಅನಿಸಿತು. ಅವಳ ಮನಸ್ಸಿನಲ್ಲಿ ಎಷ್ಟೆಷ್ಟೋ ಸುಳಿ-ತಿಗುರಿಗಳೆದ್ದಿವೆ. ಮತ್ತು ಅವುಗಳಲ್ಲಿ ಭೂತಗಳು ಕುಣಿಯುಹತ್ತಿವೆ.

ಅವಳು ತನ್ನ ಊರಿಗೆ ಹೋಗುವ ಬಸ್ಸಿನಲ್ಲಿ ಕುಳಿತಳು. ಅವಳು ತನ್ನ ಕಾಲಿನತ್ತ ನೋಡಿದಳು—ರಾತ್ರಿ ಹಾವು ಕಡಿದಲ್ಲಿ. ಅವಳಿಗೆ ಅನಿಸಿತು, ಹಾವು ಕಡಿದ ನಂಜು ಅವಳಿಗೆ ಈಗ ಏರುತ್ತಿದೆ?

# ಮಾಯೀ ಸಧರಾಂ*

ಪುಷ್ಯ ಮಾಸದ ಚಳಿಯ ರಾತ್ರಿ. ಮಾಯಿ ಸಧರಾಂ ಮೈಯನ್ನು ಗಡಗಡ ನಡುಗಿಸುತ್ತಿತ್ತು. ಅವಳ ಬಾಯಿಯಲ್ಲಿ ಇದ್ದಬಿದ್ದ ಎರಡು-ಮೂರು ಹಲ್ಲು ಚಳಿಯಲ್ಲಿ ಕಟಕಟ-ಗುಡಹತ್ತಿದ್ದವು. ಅವಳ ಕೈಕಾಲು ಕೊರಡಾಗಿ ಹೋಗಹತ್ತಿದ್ದವು. ಈ ವಿಪರೀತದ ಚಳಿಯ ಮೂಲಕ ಅವಳ ಮೂಗಿನಿಂದ ಕಣ್ಣಿನಿಂದ ನೀರು ಹರಿಯುತ್ತಿತ್ತು. ಅವಳು ಮತ್ತೆಮತ್ತೆ ಹಾದಿಯನ್ನು ನೋಡಲಿಕ್ಕೆ ಕಣ್ಣು ಒರಸಿಕೊಳ್ಳುತ್ತಿದ್ದಳು. ಆದರೆ ಕಣ್ಣಿನಿಂದ ಹರಿಯುತ್ತಿದ್ದ ನೀರನ್ನು ಆಕೆಗೆ ತಡೆಯಲು ಆಗುತ್ತಿದ್ದಿಲ್ಲ. ಚಳಿ ಹೆಚ್ಚಾದಂತೆ ಅವಳು ವೇಗದಿಂದ ನಡೆಯಲು ಯತ್ನಿಸುತ್ತಿದ್ದಳು. ಗೋಣಿಯ ತುಂಡನ್ನು ಸುತ್ತಿಕೊಂಡು, ಕೈಯಲ್ಲಿ ಕಬ್ಬಿಣದ ತಗಡಿನ ಚೂರು ಮತ್ತು ಸಣ್ಣದೊಂದು ಚೀಲ ಎತ್ತಿಕೊಂಡು ಅತ್ತಿತ್ತ ಎಲ್ಲ ಕಡೆಗೂ ಇಣುಕು ಹಾಕುತ್ತ ಅವಳು ಯಾರ್ಡಿನ ಒಳಗೆ ಹೊಕ್ಕಿಬಂದಳು

ಯಾರ್ಡಿನಲ್ಲಿ ಸ್ಮಶಾನದ ಶಾಂತತೆ ನೆಲೆಸಿತ್ತು. ಯಾವ ಕಡೆಯಿಂದಲೂ ಸದ್ದು ಬರುತ್ತಿದ್ದಿಲ್ಲ. ಸಾಂಯ್ ಸಾಂಯ್ ಎಂದು ಶಬ್ದಮಾಡುತ್ತಿದ್ದ ಯಾರ್ಡು ಇಂದು ಇನ್ನೂ ಹೆಚ್ಚು ಭಯಾನಕವೂ ಶೂನ್ಯವೂ ಅನಿಸುತ್ತಿತ್ತು. ಅವಳು ಅಲ್ಲಿ ನಿಂತ ಗಾಡಿಗಳ ಛಾಯೆಯಲ್ಲಿಯೇ ನಡೆಯುತ್ತ ಚಿಂತಿಸುತ್ತಿದ್ದಳು. "ಹೊತ್ತು ಮೂಡುವದರಲ್ಲಿ ಇದೆ. ಆದರೆ ಯಾರ್ಡಿನಲ್ಲಿ ಒಬ್ಬನೂ ಮನುಷ್ಯ ಕಾಣುವದಿಲ್ಲ. ಯಾವ ಇಂಜಿನ್ನಿನ ಸದ್ದೂ ಕೇಳಿಬರುವದಿಲ್ಲ. ಚಳಿಯು ಇಂದು ಎಲ್ಲ ಜನರನ್ನು ಮನೆಯಲ್ಲಿಯೇ ಕಟ್ಟಿ ಮುಚ್ಚಿ ಇಟ್ಟಿದೆ. ಅಂಜಿಕೆಯಿಂದಾಗಿ ಯಾರೂ ಹೊರಬರುತ್ತಿಲ್ಲ. ಡ್ಯೂಟಿಯನ್ನು ಮಾಡುವವರೂ ಇಂಥ ಚಳಿಯ ರಾತ್ರಿಯಲ್ಲಿ ಕೆಲಸಗಳ್ಳರಾಗಿಬಿಡುತ್ತಿದ್ದರು. ಸರಕಾರದ ಈ ಚೌಕೀದಾರರು ಬ್ರಾಂಡಿ ಏರಿಸಿ ಗಾದಿ ಹಾಸಿದ ಡಬ್ಬಿಗಳಲ್ಲಿ ಗೊರಕೆ ಹೊಡೆಯುತ್ತಾರೆ. ಈ ಚಳಿಯಲ್ಲಿ ಯಾರು ಯಾರನ್ನು ಕೇಳುತ್ತಾರೆ? ಇಂಥ ಘೋರ ಚಳಿಯಲ್ಲಿ ಯಾರಿಗೆ ಏನು ಬಿದ್ದಿದೆ, ಒಂದು ಕೈಯಾದರೂ ಹೊರಗೆ ಚಾಚಲಿಕ್ಕೆ? ಪ್ರತಿಯೊಬ್ಬರಿಗೂ ತಮ್ಮ ತಮ್ಮ ಪ್ರಾಣ ಅಡಗಿಸಿಕೊಳ್ಳುವದೊಂದೇ ಬಿದ್ದಿದೆ. ನಾನೊಬ್ಬಳೇ ಇಂಥ ದೈವಗೇಡಿ. ಹಗಲೂ ರಾತ್ರಿ ಸುಖವಿಲ್ಲ; ಹಿಂದಿನ ಜನ್ಮದ ಖೊಟ್ಟಿ ಕರ್ಮ ಇದಿರಾಗುತ್ತದೆ. ಆಯುಷ್ಯವಿಡೀ ಒಂದು ದಿನವೂ ಹಾಯಾಗಿ ಉಸಿರು ಎಳೆದಿದ್ದಿಲ್ಲ. ಸತ್ತು-ಬೇಸತ್ತು ಈ ದಿನ ಬಂದಿವೆ. ಒಂದೊಂದು ಇದ್ದಲಿಯ ಹಿಂದೆ ಓಡಿ ಓಡಿ ನನ್ನ ಪ್ರಾಯ ಸೋರಿಹೋಯಿತು." ಈ ಬಗೆಯ ಮಾತುಗಳನ್ನು

---

* ವಯಸ್ಸಾದ ಹೆಂಗಸನ್ನು 'ಮಾಯೀ' ಎಂದು ಸಂಬೋಧಿಸುತ್ತಾರೆ.

ಚಿಂತಿಸುತ್ತ ಮುದುಕಿ ಸಧರಾಂ ರೇಲ್ವೆ ಲೈನು ದಾಟಿ ಹೋಗುತ್ತಿದ್ದಳು. ಮತ್ತು ವಿದ್ಯುದ್ದೀಪಗಳ ತೀಕ್ಷ್ಣ ಬೆಳಕಿನಲ್ಲಿ ಹೊಳೆಯುವ ಕಂಬಿಗಳು ಅವಳಿಗೆ ಬಾಗುವಂತೆ ಹೊರಳುವಂತೆ ಬಾಯಿ ಕಳೆದ ಹಾವುಗಳಂತೆ ಕಾಣಹತ್ತಿದ್ದವು. ಇವೆ ಕೆರಳುವ ನಾಗಿಣಿಗಳು ಹಲವು ಬಾರಿ ಅವಳಿಗೆ ಮುಂದೆ ಹೋಗಲು ಕೊಡುತ್ತಿದ್ದಿಲ್ಲ. ಮತ್ತು ಅವಳು ಬೀಳುತ್ತ ಬೀಳುತ್ತ ಬಹಳ ಕಷ್ಟದಿಂದ ಉಳಿದುಕೊಳ್ಳುತ್ತಿದ್ದಳು.

ಯಾರ್ಡಿನೊಳಗಿಂದ ಇದ್ದಲಿ ಹೆಕ್ಕುತ್ತ ಹೆಕ್ಕುತ್ತ ಅವಳ ಬಹಳ ವರ್ಷಗಳು ಕಳೆದಿದ್ದವು. ಅವಳು ದಿಲ್ಲಿ ಸ್ಟೇಶನ್ನಿನ ಮೈಲಿಗಟ್ಟಲೆ ಉದ್ದ ಯಾರ್ಡಿನಲ್ಲಿ ಅವಳು ಕಾಣದ ಭಾಗವಿಲ್ಲ. ಯಾವ ಸ್ಥಳದಲ್ಲಿ ಲೈನುಗಳ ಕ್ರಾಸಿಂಗು, ಯಾವ ಸ್ಥಳದಲ್ಲಿ ದೊಡ್ಡ ತಗ್ಗಡಿ ಎಲ್ಲಿ ಸಣ್ಣ ತಗ್ಗಡಿ, ಎಲ್ಲಿ ಹೊಲಸು ನೀರಿನ ಹೊಂಡ—ಎಲ್ಲವೂ ಅವಳಿಗೆ ಗೊತ್ತು. ಇದ್ದಲು ಹೊತ್ತುಕೊಂಡು ಹೋಗುವಾಗ ಹಿಂದಿನಿಂದ ಚೌಕೀದಾರ ಅಟ್ಟಿ ಕೊಂಡು ಬಂದರೆ ಇದ್ದಲನ್ನು ಎಲ್ಲಿ ಅಡಗಿಸಬೇಕು, ಓಡಿ ತಾನು ಎಲ್ಲಿ ಅಡಗಬೇಕು, ಹಿಡಿದೇ ಬಿಟ್ಟರೆ ಚೌಕೀದಾರನೊಂದಿಗೆ ಏನು ಮಾತಾಡಬೇಕು, ಹವಲದಾರ ಸಿಕ್ಕರೆ ಅವನೊಂದಿಗೆ ಹೇಗೆ ನಡೆದುಕೊಳ್ಳಬೇಕು, ಕ್ಲೀನರನಿಗೆ ಹೇಗೆ ಛೀಮಾರಿ ಹಾಕ ಬೇಕು, ಫಿಟರನೊಂದಿಗೆ ಹೇಗೆ ನಗುನಗುತ್ತ ಹರಟಬೇಕು. ಸಧರಾಂ ಕೆಲಸಲ ತನ್ನ ಪ್ರಾಣದ ಜೂಜಾಡಿ ಇದ್ದಲಿ ಉಳಿಸಿಕೊಂಡಿದ್ದುಂಟು.

ಅವಳು ಇದ್ದಲು ಎತ್ತಿಕೊಂಡು ಓಡುತ್ತ ಶಂಟಿಂಗ್ ಮಾಡುವ ಎಂಜಿನ್ನಿನ ಮುಂದಿನಿಂದ ಹೋಗಿಬಿಡುತ್ತಿದ್ದಳು. ಮತ್ತು ಬೆನ್ನಟ್ಟಿ ಬರುವವನಿಗೆ ಹಿಡಿಯಲು ಕೊಡುತ್ತಿದ್ದಿಲ್ಲ. ಅವಳು ಆಗಾಗ್ಗೆ ಚಿಂತಿಸುತ್ತಿದ್ದಳು. "ಈ ಹಣ ತೆಗೆದುಕೊಳ್ಳುವ ಮಂದಿ ಎಷ್ಟು ಒಳ್ಳೆಯವರು. ಒಂದಾಣೆ ಎರಡಾಣೆ ಅವರ ತಲೆಗೆ ಬೀಸಿದರೆ ಸರಿ. ಬುಟ್ಟಿ ತುಂಬ ಇದ್ದಲು ತುಂಬಿ ಒಯ್ಯಬಹುದು. ಹಾಗೆಯೇ ಎಂಜಿನ್ನಿನ ಫಾಯರಮನ್‌ನಿಗೆ ಎರಡಾಣೆ ಕಾಣಿಸಿದರೆ ಆತ ತಾನೇ ತಾನಾಗಿ ಎಲ್ಲಿಂದಲೋ ಉರಿಸಿದ ಇದ್ದಲ ರಾಶಿಯನ್ನೇ ತಂದು ಹಾಕುತ್ತಿದ್ದ. ಆದರೆ ಈ ಪ್ರಾಮಾಣಿಕ ಮಂದಿಯೇ ಎಲ್ಲರಿಗಿಂತ ಕೆಟ್ಟವರು. ಇವರ ಹೊಟ್ಟೆ ಯಾವ ಮಾತಿನಿಂದಲೂ ತುಂಬುವದಿಲ್ಲ. ಇವರೆನ್ನುತ್ತಾರೆ—ನಿನ್ನ ಉಡಿಯಲ್ಲಿ ಇದ್ದದ್ದೆಲ್ಲ ಕೊಟ್ಟು ಹೋಗು. ಏನೂ ಇಲ್ಲದಿದ್ದರೆ, ಬಾ. ಬರಿದಾದ ಗಾಡಿಯಲ್ಲಿ ನಮ್ಮ ಮಾತು ಕೇಳಿ ಹೋಗು. ನಾಯಿಗಳು, ನೀಚರು, ತಾಯಿಗೂ ನಾಚರು—ಮಗಳಿಗೂ ನಾಚರು. ಈ ಅವತಾರಿಗಳಿಗೆ ಮಾಂಸ ಬೇಕು—ಅದು ಮುದಿ ಇರಲಿ, ಪ್ರಾಯದ್ದಿರಲಿ. ಮಾಂಸ ತಿನ್ನುವವನಿಗೇನು? ಅವನಿಗೆ ತನ್ನ ಚಪ್ಪರಿಕೆ ಪೂರೈಸುವದೊಂದೇ ಬೇಕು. ಆದರೆ ಯಾರ ಎಲುಬು ಕಟಕಟ ಮುರಿಯುವವೋ ಅವಳಿಗೆ ಗೊತ್ತು. ಆದರೆ ಈಗ ಯಾರೂ ಅವಳ ಕಡೆಗೆ ನೋಡುವುದಿಲ್ಲ. ಎಲ್ಲರೂ ಛೀಮಾರಿ ಮಾಡಲು ಸಿದ್ಧರು. ಗುದ್ದು ಹಾಕುತ್ತಾರೆ. ಕೆಟ್ಟ ಕೆಟ್ಟ ಮಾತಾಡುತ್ತಾರೆ..."

ಹೀಗೆ ಚಿಂತಿಸುತ್ತ ಮಾಯಿ ಸಧರಾಂ ಮತ್ತೆ ತನ್ನ ಕಣ್ಣಿಂದ ಉದುರುವ ನೀರನ್ನು

ಉಜ್ಜಿಕೊಂಡಳು. ತನ್ನ ಮೋರೆಯ ನಿರಿಗೆಗಳು ಚಳಿಯಿಂದ ಇನ್ನಿಷ್ಟು ಬಿರುಸಾಗಿ ಹೋದಂತೆ ಅವಳಿಗೆ ಅನಿಸಿತು. ಅವಳು ತಿರುಗಿ ವಿಚಾರಮಾಡತೊಡಗಿದಳು . . . ಒಂದು ಸಮಯ ಹೀಗೂ ಇತ್ತು. ಆಗ ಅವಳು ತನ್ನ ಹರಯವನ್ನು ಅಡಗಿಸಿ ಕೊಂಡು ತಿರುಗುತ್ತಿದ್ದಳು. ಮತ್ತು ಮುಪ್ಪುಕೊಡಲು ದೇವರನ್ನು ಬೇಡಿಕೊಳ್ಳು ತ್ತಿದ್ದಳು—"ಸುಡಲಿ ಈ ಪ್ರಾಯ. ಇದು ನನಗೆ ಎಲ್ಲೂ ನಿಲ್ಲಲು ಕೊಡುವದಿಲ್ಲ . . ." ಆದರೆ ಮುಪ್ಪು ಈಗ ಅದಕ್ಕೂ ಕೆಟ್ಟದ್ದು. "ಈಗ ಎಲ್ಲರೂ ನನ್ನನ್ನು ಹೆದರಿಸುತ್ತಾರೆ. ಛೀಮಾರಿ ಹಾಕುತ್ತಾರೆ . . . ಜನ ಹೇಳುತ್ತಾರೆ, ಮುಪ್ಪಿಗೆ ಶಾಪ—ಹಣ ಮತ್ತು ಹರಯ ಎರಡೂ ನಾಚಿಕೆಗೆಟ್ಟವು . . . ಈಗ ನನ್ನ ಉಡಿಯಲ್ಲಿ ಹಣವೂ ಇಲ್ಲ, ಪ್ರಾಯವೂ ಇಲ್ಲ. ಈಗ ಯಾತರ ಬಲದಿಂದ ಮಾತಾಡಲಿ? ಹಣವೆಲ್ಲ ಬೂದನನ ಕಾಯಿಲೆಗೇ ಹೋಯಿತು. ಯಾವ ಸಂಕಟಗಳು ಬಿಟ್ಟುಹೋದವೆಂದಿದ್ದೆನೋ ಅವು ಮತ್ತೆ ಕೊರಳಿಗೆ ಬಿದ್ದವು . . . ಗಂಡ ಹೋದನಂತರ ಎಷ್ಟೊಂದು ದುಃಖದಿಂದ ಕೂಲಿ ಕೆಲಸಮಾಡಿ ಬೂದನನನ್ನು ಬೆಳೆಸಿ ದೊಡ್ಡವನಾಗಿ ಮಾಡಿದ್ದೆ . . . ನನ್ನ ಮೈ ಮಾರಿ ಅವನಿಗೆ ಚಾಕರಿ ಕೊಡಿಸಿದೆ. . . . ಅವನ ಮದುವೆ ಮಾಡಿದೆ . . . ಈಗ ಸಂಕಟಗಳು ಮುಗಿಯುವವೆಂದು ವಿಚಾರ ಮಾಡಿದ್ದೆ. ಆದರೆ ಹಿಂದಿನ ಜನ್ಮದ ಖೊಟ್ಟಿ ಕರ್ಮ ನನ್ನಂಥ ದೈವಗೇಡಿಗೆ ಸುಖದ ಒಂದು ಉಸಿರು ಎಳೆಯಲಾದರೂ ಎಲ್ಲಿ ಬಿಡಬೇಕು? . . . ಮದುವೆ ಎಂಬುದು ಯಮನಾಗಿಯೇ ಬಂತು . . . ಹುಡುಗ ಒಣಗಿ ಮೂಳೆಗಳ ರಾಶಿಯಾಗಿಬಿಟ್ಟ."

ಆಗ ಸಧರಾಂಳಿಗೆ ತನ್ನ ಮದುವೆಯ ನೆನಪು ಒಂದಿತು. ಅವಳು ಚಿಂತಿಸ ತೊಡಗಿದಳು. "ಮದುವೆ ಮದುವೆಯೇ . . . ನಾನು ಮೊದಲನೆಯ ದಿನ ಬೂದನನ ತಂದೆಯೊಂದಿಗೆ ಬಂದಾಗ ನನ್ನ ಮನದಲ್ಲಿ ಎಷ್ಟೆಲ್ಲ ಬಯಕೆಗಳಿದ್ದವು, ರುಚಿಗಳಿದ್ದವು. ಆ ಬಡವ ಹಗಲಿರುಳೂ ಸಧರಾಂ, ಸಧರಾಂ ಎಂದು ಸುಳಿದಾಡುತ್ತಿದ್ದ. ಅವನಿಗೆ ರಾತ್ರಿಯ ಹಿಂದಿನ ಪ್ರಹರದ ಡ್ಯೂಟಿ ಇದ್ದಾಗ ನನ್ನನ್ನು ಒಬ್ಬಂಟಿಗಳಾಗಿ ಬಿಟ್ಟು ಹೊರಗೆ ಹೊರಡುತ್ತಿದ್ದಿಲ್ಲ. ಆತ ಅನ್ನುತ್ತಿದ್ದ, 'ಸಧರಾಂ ನೀ ಚಿಂತೆ ಮಾಡಬೇಡ. ನನ್ನ ಹತ್ತಿರವೇ ಕುಳಿತಿರು. ತಿಂಡಿ-ತೀರ್ಥಗಳ ವ್ಯವಸ್ಥೆ ನಾನು ಪೇಟೆಯಲ್ಲಿಯೇ ಮಾಡಿಕೊಳ್ಳುವೆ . . . ನಮ್ಮ ಸಂಬಳ ಕೈತುಂಬ ಇದೆ.—ನಮಗೆ ಯಾವ ತಂದೆ-ತಾಯಿ ಇದ್ದಾರೆ ನಾವು ಹಣ ಕಳುಹಿಸಿಕೊಡಲಿಕ್ಕೆ?"

"ಹೌದೆ, ಅದಕ್ಕೇ ಆಚೆ ಈಚೆ ನೆರೆಹೊರೆಯವರು ದಿನಾಲು ನನಗೆ ಮೂದಲಿಸಿ ಚೇಷ್ಟೆ ಮಾಡುತ್ತಿದ್ದರು . . . ಅತ್ತೆ ಇಲ್ಲ, ನಾದಿನಿ ಇಲ್ಲ. ಮದುಮಗಳೆ ಮನೆ ಯಜಮಾನಿ! ಅಂತೇ ದಿನವಿಡೀ ಅವನನ್ನು ಮೊಣಕಾಲ ಮುಂದೆ ಕುಳ್ಳಿರಿಸಿ ಕೊಳ್ಳುವಿ. ತುಸು ಕ್ವಾರ್ಟರಿನ ಹೊರಗೆ ಒಮ್ಮೆ ಬಿದ್ದು ನೋಡು—ಪ್ರಪಂಚ ಎಲ್ಲಿ ನೆಲೆಸಿದೆ ಎಂದು . . ."

"ಸಥರಾಂ ನೀ ನಿಶ್ಚಿಂತಳಾಗು. ಮಂದಿಯ ಮಾತಿಗೆ ಲಕ್ಷ್ಯ ಕೊಡಲೇ ಬಾರದು . . . ಮಂದಿ ಯಾರೂ ಉಂಡುಟ್ಟು ಸುಖವಾಗಿರುವದು ನೋಡಲಾರರು." . . . ಇಂಥ ಮಾತು ಜ್ಞಾಪಿಸಿ ಚಿಂತಿಸಿ ಸಥರಾಂ ಬಿಕ್ಕಿಬಿಟ್ಟಳು. ಮತ್ತು ಗಾಳಿಯ ರಭಸದ ಸೆಳಕಿನಿಂದ ಅವಳ ವಿಚಾರಗಳ ತುರಿ ಹರಿಯಿತು.

ವಿದ್ಯುದ್ದೀಪಗಳ ಬೆಳಕಿನಲ್ಲಿ ಅವಳ ಕಣ್ಣು ಕುಕ್ಕುತ್ತಿದ್ದವು. ಅವಳ ಕಾಲು ತಾವಾಗಿಯೆ ರೈಲು ಕಂಬಿ ಮತ್ತು ಮುಳ್ಳುಗಳನ್ನು ದಾಟಿ ನಡೆದಿದ್ದವು. ತಲೆಯ ಮೇಲೆ ಒಂದು ಕೈಯೂರಿ ಎಲ್ಲಕಡೆಗೆ ಇಣಕುತ್ತ, ಒಮ್ಮೊಮ್ಮೆ ಗಾಡಿಯ ಛಾಯೆ ಯಲ್ಲಿ ನಿಲ್ಲುತ್ತ ತನ್ನ ಹಿಂದೆ ಯಾರು ಬೆನ್ನಟ್ಟಿ ಬರುವರೋ ಎಂದು ನೋಡುತ್ತಿದ್ದಳು.

ಈಗ ಸಥರಾಂಳಿಗೆ ಕಚ್ಚಾ ಇದ್ದಲಿನ ರಾಶಿಗಳು ಕಣ್ಣಿಗೆ ಬಿದ್ದವು. ವಿದ್ಯು ದ್ದೀಪಗಳ ತೀಕ್ಷ್ಣ ಹೊಳಪಿನಲ್ಲಿ ಈ ಎತ್ತರ ಎತ್ತರ ರಾಶಿಗಳು ಅವಳಿಗೆ ಬೆಳ್ಳಿ ಬಂಗಾರದ ರಾಶಿಗಳಂತೆ ಕಂಡವು. ಅವುಗಳಲ್ಲಿಂದ ಎರಡು ದೊಡ್ಡ ತುಂಡುಗಳನ್ನು ಕದ್ದು ಅವಳು ಬೂದಸನಿಗಾಗಿ ಮದ್ದು, ಗಂಜಿಗಾಗಿ ಅಕ್ಕಿ ಮತ್ತು ಅತ್ತೆ-ಸೊಸೆ ಯರ ಹೊಟ್ಟೆತುಂಬಲು ಮಕ್ಕೆಯ ಹಿಟ್ಟು ಆಕೆ ತರುವಳು. ಅವಳು ಆಲೋಚಿಸಿದಳು, "ಈ ಹೊತ್ತು ಎಷ್ಟು ಒಳ್ಳೆಯ ಸಂಧಿ. ಚಳಿಯಿಂದ ಅವಳ ಎಲುಬು ಮೂಳೆಗಳು ಸಿಡಿದು ಹೋಗುತ್ತಿರಬಹುದು. ಆದರೂ ಇಂದು ಅವಳು ಯಾವದೇ ಯಾರದೇ ಅಡೆತಡೆ ಇಲ್ಲದೆ ಎರಡು ಸಾರಿಗೆ ಮಾಡಬಹುದು. ಇಂದು ಅವಳು ಕಚ್ಚಾ ಇದ್ದಲಿಯ ಎರಡು ಸಾರಿಗೆ ಮಾಡಿದರೆ ಚಳಿಯು ಈ ಎರಡು ಮೂರುದಿನ ಸುಲಭ ವಾಗಿ ಕಳೆಯಬಹುದು. ಇದರ ಸಂಗಡವೆ ಅವಳು ಮಧ್ಯಾಹ್ನದ ಹೊತ್ತಿಗೆ ಅರೆ ಉರಿದು ಆರಿದ ಇದ್ದಲನ್ನು ಹೆಕ್ಕಿಕೊಳ್ಳಬಲ್ಲಳು. ಬೂದಿಯ ರಾಶಿಗಳೊಳಗಿಂದ ಅವನ್ನು ಒಮ್ಮೆ ಆರಿಸಿ ಹೆಕ್ಕಿಕೊಂಡ ಮೇಲೆ ಅವಳನ್ನು ಯಾರು ತಡೆಯುತ್ತಾರೆ? ಈ ವಿಚಾರ ಬಂದೊಡನೆ ಅವಳಿಗೆ ಇನ್ನೊಂದು ತೋಚಿತು—ಬೂದಸನೇ ಬೂದಿಯ ರಾಶಿಯಲ್ಲಿಯೇ ಬೆಳೆದು ದೊಡ್ಡವನಾದ. ಅದೇರೀತಿ ಅವನ ಮಗನೂ ಇವೇ ರಾಶಿಗಳಲ್ಲಿ ಬೆಳೆಯುತ್ತಿದ್ದಾನೆ.

ಕಚ್ಚಾ ಇದ್ದಲಿಯ ಎರಡು ಸಾರಿಗೆ ಮನೆಯ ಎಲ್ಲ ಮಂದಿಗೆ ಎರಡು ದಿನದ ಕೂಳು. ಇಂದೇ ಸಮಯ, ಇಂಥ ಚಳಿಯ ರಾತ್ರಿಗೆ ಯಾರೂ ಹೊರಬೀಳಲಾರರು. ಈ ಹೊತ್ತು ಎರಡು—ಮೂರು ಸಾರಿಗೆ ಮಾಡಬಹುದು. ಈ ಹಿಂದುಗಳಿಗಿಂತ ಮುಸಲಮಾನರು ಲೇಸು. ಈ ಹಿಂದುಸ್ತಾನ ಪಾಕಿಸ್ತಾನಗಳಿಗೆ ಬೆಂಕಿ ಬೀಳಲಿ. ಬಡವರಿಗೆ ದುಃಖಕೊಟ್ಟಿದ್ದಾರೆ. ಮೊದಲೆಲ್ಲ ಹಿಂದೂ ಮುಸಲಮಾನರಲ್ಲಿ ಎಂಥ ಬಾಂಧವ್ಯವಿತ್ತು! ಒಬ್ಬರು ಇನ್ನೊಬ್ಬರ ಬಗ್ಗೆ ಪ್ರಾಣದ ಬಲಿ ಕೊಡುತ್ತಿದ್ದರು. . . . ಆದರೆ ಇಂದು ನಾಯಿಗೆ ನಾಯಿ ವೈರಿ . . . ಈ ಹೊತ್ತು ಕುರ್ಬಾನ ಅಲೀಶಾಹ ಇಲ್ಲಿಯೇ ಇದ್ದದ್ದಾದರೆ ನನ್ನ ದುರ್ದಶೆ ಇಷ್ಟಾಗುತ್ತಿತ್ತೇ? ಆತ ನನ್ನ ಮೇಲೆ ತನ್ನ

ಪ್ರಾಣವನ್ನೇ ನಿವಾಳಿಸಿ ಒಗೆಯುತ್ತಿದ್ದ. ಆತ ನನಗೆ ಎಂದೂ ಹಣದ ಅಡಚಣಿ ಆಗಲು ಬಿಡಲಿಲ್ಲ. ನತ್ಥಾಸಿಂಗ ಡ್ರೈವರನೂ ಅವನ ಸಂಗಡವೇ ಇರುತ್ತಿದ್ದ. ಆದರೂ ಶಾಹನ ಮುಂದೆ ನನಗೆ ಕೈಹಚ್ಚಲಿಕ್ಕಾದರೂ ನತ್ಥಾಸಿಂಗನಿಗೆ ಧೈರ್ಯವೆಲ್ಲಿ? 'ಅತ್ತಿಗೆ' 'ಅತ್ತಿಗೆ' ಎಂದು ಕರೆಯುತ್ತ ಅವನ ಗಂಟಲು ಒಣಗುತ್ತಿತ್ತು. ನತ್ಥಾಸಿಂಗ ಬಹಳ ಸಲ ಹೇಳಿದ್ದು, "ಅತ್ತಿಗೇ; ನಾ ಹೇಳುವದು ಒಪ್ಪು. ಕುರ್ಬಾನ ಅಲಿಯೊಂದಿಗೆ ನಿಕಾ ಮಾಡಿಕೋ. ಈಗಲೇ ಯೋಗ್ಯವೇಳೆ. ಈ ಪ್ರಾಯ ಈ ರೂಪ ಯಾವಾಗಲೂ ಉಳಿಯುವದಿಲ್ಲ... ನಿನ್ನ ಬೂದಸನ ಪಾಲನೆಯೂ ಆಗುವದು, ನೀನೂ ಬೇಗಮಳಾಗುವಿ... ಈಗ ಯಾವ ಮಾತಿನ ಪರಿವೆ ಉಳಿದಿದೆ... ಬಿಟ್ಟು ಬಿಡು ನಿನ್ನ ಬ್ರಾಹ್ಮಣಿಕೆ..."

"ಅಯ್ಯೋs ಅಯ್ಯೋss, ಲೇ ನತ್ಥಾಸಿಂಹಾ, ಸ್ವಲ್ಪ ನಾಚಿಕೆಪಡು. ಮುಸಲ ಮಾನನ ಸಂಗಡ ಮದುವೆ ಮಾಡಿಕೊಂಡು ನನ್ನ ಧರ್ಮ ಭ್ರಷ್ಟ ಮಾಡಿ ಕೊಳ್ಳುವದೇ?"

"... ಅಚ್ಛಾ ಅತ್ತಿಗೆ, ನಿನ್ನ ಮರ್ಜಿ. ಈಗ ನೀನು ಯಾವ ಗಂಗೆಯಲ್ಲಿ ಮೈ ತೊಳೆದುಕೊಳ್ಳುತ್ತಿರುವಿ? ದಿನಾಲೂ ಆತ ನಿನ್ನನ್ನು ಕರೆದುಕೊಂಡು ಗಾಡಿಯಲ್ಲಿ ಹೊಕ್ಕುಬಿದ್ದಿರುತ್ತಾನೆ... ಮತ್ತೆ ಈ ಲೋಕ ಲಜ್ಜೆಯ ಸುಳ್ಳುಬೇರೆ ಎಬ್ಬಿಸುತ್ತೀಯಾ?... ನಿನ್ನ ಸ್ವರೂಪ ಯಾರಿಗೆ ಗೊತ್ತಿಲ್ಲ? ಶಾಹನಿಗೆ ಹೆದರಿ ಮಂದಿ ಬಾಯಿಂದ ಶಬ್ದ ಹೊರಡಿಸುವದಿಲ್ಲ. ಇಲ್ಲವಾದರೆ ನಿನ್ನ ಹೆದರಿಕೆ ಯಾರಿಗೆ ಏನಿದೆ? ನೆನಪಿಟ್ಟುಕೋ ಅತ್ತಿಗೆ, ನನ್ನ ಈ ಮಾತು. ನೀ ಎಂದಾದರೂ ಒಮ್ಮೆ ಕೈ ಹಿಚುಕಿ ಕೊಂಡು ಈ ಸಮಯಕ್ಕಾಗಿ ಅಳುವಿ..."

"ಸಧರಾಂ ತಣ್ಣಗೆ ಶ್ವಾಸವೆಳೆಯುವಳು. ಹಳೆಯ ಸಂಗತಿಗಳನ್ನು ಹಂಬಲಿಸಿ ಕೊಳ್ಳುವಳು, ಕಣ್ಣು ಉಜ್ಜೀಉಜ್ಜಿಕೊಳ್ಳುವಳು. ಕಂಬಿಗಳನ್ನು ದಾಟುತ್ತ ನಡೆಯುವಳು. ವಾಶಿಂಗ ಲೈನ ದಾಟುತ್ತಿರುವಾಗ ಅವಳ ಕಾಲು ಹೊಂಡದಲ್ಲಿ ಜಾರಿ ಬಿತ್ತು. ಚಳಿಯಿಂದ ಕೊರಡಾದ ಸಧರಾಂ ಬೋರಲು ಬಿದ್ದಳು. ಅವಳ ಮೊಳಕಾಲಿನ ಎಲುಬು ಕಟ್ ಎಂದಿತು. ಕಬ್ಬಿಣದ ತಗಡು ಅವಳ ಅಂಗೈಯಲ್ಲಿ ಚುಚ್ಚಿಕೊಂಡಿತು. ಅದರೊಳಗಿಂದ ರಕ್ತ ಬಸಿಯುವದು ಕಂಡುಬಂತು. ನೋವಿನ ಜೋರಿಗೆ ಅವಳಿಗೆ ಎದ್ದು ನಿಲ್ಲಲು ಆಗಲಿಲ್ಲ. ದೊಡ್ಡ ದನಿ ಎತ್ತಿ ಅಳಬೇಕೆಂದು ಅವಳಿಗೆ ಅನಿಸಿತು. ಇಂಥ ಬಾಳಿಗಿಂತ ಸಾವು ಲೇಸು ಎಂದು ಅನಿಸಿತು. ಅಲ್ಲ, ಅವಳಿಲ್ಲದಿದ್ದರೆ ಈ ಪ್ರಪಂಚಕ್ಕೆ ಹಾನಿ ಏನು? ಇಂಥ ವಿಚಾರಗಳನ್ನು ಚಿಂತಿಸುತ್ತಲೇ ಅವಳು ಲೈನು ದಾಟುತ್ತಿದ್ದಾಗಲೇ ಝುಕ್ ಝುಕ್ ಎನ್ನುತ್ತ ಒಂದು ಎಂಜಿನು ಅವಳ ಬದಿಯಿಂದಲೇ ಹಾದು ಹೋಯಿತು. ಅವಳಿಗೆ ಅನಿಸಿತು, ಆ ಎಂಜಿನನಡಿಗೆ ಆಗಿ ಎಲ್ಲ ಮುಗಿದುಹೋಗಿದ್ದರೆ ಚೆನ್ನಾಗಿತ್ತು.

ಸಧರಾಮಳಿಗೆ ಏಳಲಿಕ್ಕೆ ಆಗುತ್ತಿದ್ದಿಲ್ಲ. ಮುಂದೆ ಉರಿಯುತ್ತಿದ್ದ ಇದ್ದಲಿನ

ಹತ್ತಿರ ಹೋಗಿ ಚಳಿ ಕಾಸಿಕೊಳ್ಳಬೇಕೆಂದು ಅವಳ ಆಸೆ. ಆದರೆ ಇದ್ದಲಿನ ಅಗಟ್ಟಿಗೆಯ ಹತ್ತಿರ ಕುಳಿತು ಕೆಮ್ಮುತ್ತಿದ್ದ ಮುದುಕನ ದನಿ ಅವಳು ಚೆನ್ನಾಗಿ ಗುರುತಿಸುತ್ತಿದ್ದಳು. ಅವಳಿಗೆ ಅನಿಸಿತು, ಚಳಿ ಕಾಸಲಿಕ್ಕೆ ತಾನು ಅಲ್ಲಿ ಹೋದರೆ, ಆ ಒರಟು ಮೂಳೆ ಮುದುಕ ಹಳೆಯ ಕತೆಗಳನ್ನೇ ಕೆದರುವನು . . . ಈ ಪಾಪಿಯ ಮೊಮ್ಮಕ್ಕಳು ದುಡಿಯಲಿಕ್ಕೆ ಬಂದಿದ್ದಾರೆ. ಸಾವಿನ ದಂಡೆಗೆ ಕೂತಿದ್ದಾನೆ. ಆದರೆ ಈಗಲೂ ತನ್ನ ಚಪ್ಪರಿಕೆ ಝಾಡಿಸಿಕೊಳ್ಳಲು ಬೇಸರವಿಲ್ಲ ಇವನಿಗೆ . . . ಸಧರಾಂ ನೋವಿನಿಂದ ಅಳುತ್ತಿದಳು. ತನ್ನ ಕಾಲು ಎಳೆದುಕೊಂಡು ಎದ್ದಳು. ಎಲ್ಲಕ್ಕೂ ಮೊದಲು ಇದ್ದಲು ಒಟ್ಟು ಹಾಕಿ ಹೊರುವ ನಿರ್ಣಯ ಮಾಡಿದಳು. ಎರಡಲ್ಲದಿದ್ದರೆ ಒಂದಾದರೂ ಸಾರಿಗೆ ತಾನು ಮಾಡಲೇಬೇಕು. ಅವಳು ತುಸು ಮುಂದೆ ಹೋದಳು. ಅಲ್ಲಿ ಏನೋ ಬೆಳಕು ಕಂಡಿತು. ಚೌಕೀದಾರರು ರುಮಾಲು ಸುತ್ತಿಕೊಳ್ಳುತ್ತ ಗಾಡಿಯಿಂದ ಹೊರಗೆ ಬೀಳುತ್ತಿದ್ದರು. ಇದನ್ನು ಕಂಡು ಅವಳ ಎದೆ ಕುಸಿದು ಕೂತುಬಿಟ್ಟಿತು. ಅವಳ ಎಲ್ಲ ನೋವು ಎಚ್ಚೆತ್ತು ಎದ್ದವು.

ಸಧರಾಂ ಬರಿಗೈಯಿಂದ ಒಂದದ್ದನ್ನು ಅವಳ ಸೊಸೆ ಜೋಮಾ ನೋಡಿದಳು. ಅವಳು ಅತ್ತೆಯ ಕೊರಳಿಗೆ ಬಿದ್ದಳು. " ಈ ಮುದಿ ಪಿಶಾಚಿ ಸಾಯೂದು ಇಲ್ಲ, ಬೆನ್ನಬಿಡೂದೂ ಇಲ್ಲ. ಭಾರೀ ನಾಚಿಕೆಗೆಟ್ಟವಳು. ಇಡೀ ಕುಟುಂಬಕ್ಕೇ ಶಾಪ ಕೊಟ್ಟಿದ್ದಾಳೆ. ಒಂದು ರೊಟ್ಟಿ ತಿನ್ನುವಂತಿಲ್ಲ. ಹೊರಗೆ ಹೋಗುವಂತಿಲ್ಲ. ನಸುಕಿಗೆ ಮನೆಬಿಟ್ಟು ಹೊರಟವಳು ಈಗ ತೀಡುತ್ತ ಬರಿಗೈಯಿಂದ ಮನೆ ಹೊಕ್ಕಿದ್ದಾಳೆ. ಮೋಸಗಾರ್ತಿ, ಠಕ್ಕಿ. ಮೂಳೆ ಮುರಿದುಹೋದರೆ ಸಾಕು. ಎಲ್ಲೋ ಉರಿಯುವ ಒಲೆಯ ಮುಂದೆ ಕೂತಿರಬೇಕು. ಈಗ ಮನೆಗೆ ತಿರುಗಿ ಬಂದಿದ್ದಾಳೆ . . . ಎಷ್ಟೋ ಸಲ ಹೇಳಿದೆ, ನೀನು ಹೋಗಿ ಸಾಯಬೇಡ ಎಂತ. ಈಗ ನಿನ್ನಿಂದ ಏನೂ ಆಗುವದಿಲ್ಲ. ನೀ ಮನೆಯಲ್ಲೇ ಕೂತು ರೊಟ್ಟಿ ಮುರಿ. ಆದರೆ ಈ ಬೀಬಿ ಹದಿನೇಳು ಮಡಿ ನಾಚಿಕೆಯುವಳು. ನನಗೆ ಮನೆ ಹೊರಗೆ ಹೊರಡಲು ಬಿಡುವದೇ ಇಲ್ಲ—ನಾನೊಂದು ಬತ್ತಾಸು! ಕಂಡವರಾರೋ ಬಾಯಲ್ಲಿ ಹಾಕಿಕೊಂಡು ಬಿಡುವರು! ಇಂದು ಸಾಯಲಿಕ್ಕೆ ಎಲ್ಲ ಮಂದಿಗೆ ಖಾಲಿ ಹೊಟ್ಟೆ. ಮನೆಯಲ್ಲಿ ಹಿಟ್ಟಿನ ಒಂದು ಚಿಮಟಿಗೆ ಇಲ್ಲ. ಈ ಮನೆಗೆ ಬಂದಂದಿನಿಂದ ಸತ್ತವರಿಗೆ ಅತ್ತ, ಗೋಳೇ ಕಂಡಿದ್ದು . . ."

ಮಾಯಿ ಸಧರಾಂ ಅಳುತ್ತಲೇ ಇದ್ದಳು. ಆದರೆ ಏನೂ ಉತ್ತರ ಕೊಡಲಾರಳು. ಅವಳು ಏನಾದರೂ ಆಡಲು ಹವಣಿಸಿದರೆ ಸೊಸೆ ಜೋಮಾ ಇನ್ನೂ ಗರ್ಜಿಸಿ ಅವಳ ಮೇಲೆ ಮುರಿದು ಬೀಳುತ್ತಿದ್ದಳು. "ನಾಳೆ ಮುಂಜಾನೆ ನಾನೇ ಹೋಗ್ತೇನೆ ಇದ್ದಲು ತರಲಿಕ್ಕೆ . . . ನೋಡಾರೆ ನೋಡು. ಚೀಲ ತುಂಬಿ ತರ್ತೇನೋ ಇಲ್ಲವೋ ಎಂತ . . . ಮನದಲ್ಲಿ ಹರಾಮಿ. ಜಗಳಾಟದ ಹೊರೆ. ರೊಟ್ಟಿ ನುಂಗುವದು ಸುಲಭ. . ."

ಇದೇ ರೀತಿ ಇಡಿಯ ದಿನ ಅತ್ತೆಸೊಸೆಯರ ಕಾಳಗದಲ್ಲಿಯೇ ಕಳೆಯಿತು. ಮಾಯಿ ಸಧರಾಂ ರಾತ್ರಿಯಿಡೀ ತನ್ನ ಹಿಂದಿನ ಬದುಕಿನ ಸಂಗತಿಗಳನ್ನು ಹಂಬಲಿಸುತ್ತ ಅಳುತ್ತ ಉಳಿದಳು. ಕೆಲವು ಅವಳಿಗೆ ಬಿದ್ದ ಪೆಟ್ಟಿನ ನೋವು, ಕೆಲವು ಜೋಮಾಳ ಮಾತಿನ ನೋವು. ಅವಳು ಹಚ್ಚಡ ಹೊದ್ದುಕೊಂಡು ಚಿಂತಿಸುತ್ತಿದ್ದಳು. " ಜೋಮಾ, ಹೇಗೆ ತಾಳಗೆಟ್ಟು ಬಿಟ್ಟಿದ್ದಾಳೆ. ಅವಳಿಗೆ ಗೊತ್ತಿಲ್ಲ. ಯಾರ್ಡಿನಿಂದ ಇದ್ದಿಲು ತರುವದೇನು ಸುಲಭ ಕೆಲಸವಲ್ಲ. ತನ್ನ ಸರ್ವಸ್ವ ಕಳೆದುಕೊಂಡಾಗಲೇ ಇದ್ದಲಿನ ಎರಡು ಚೂರು ಸಿಗುತ್ತವೆ . . . " ಹೀಗೆ ವಿಚಾರಮಾಡುತ್ತ ಸಧರಾಮಳಿಗೆ ಯಾವಾಗ ನಿದ್ದೆ ಹತ್ತಿತೋ ಗೊತ್ತೇ ಆಗಲಿಲ್ಲ.

ಅವಳು ನಿದ್ದೆ ತಿಳಿದಾಗ ಅವಳು ನೋಡಿದಳು—ಜೋಮಾ ಗುಡಿಸಲಿನಲ್ಲಿ ಇದ್ದಿಲ್ಲ. ಕಬ್ಬಿಣದ ತಗಡಿನ ಚೂರಾಗಲಿ ಖಾಲಿ ಚೀಲವಾಗಲಿ ಅಲ್ಲಿ ಬಿದ್ದಿದ್ದಿ ಇರಲಿಲ್ಲ. ಅವಳ ಎದೆ ಡವಡವ ಬಡಿದುಕೊಂಡಿತು. ಅವಳ ತಲೆಯ ಮೇಲೆ ತಣ್ಣನೆ ಬೆವರ ಹುಂಡುಗಳು ಮೂಡಿದವು ಮತ್ತು ಅವಳು ಹೊಸ್ತಿಲಲ್ಲಿ ನಿಂತು ಮಿಕಿಮಿಕಿ ಹೊರಗೆ ದಿಟ್ಟಿಸಿ ನೋಡ ಹತ್ತಿದಳು. ಹೊಸ್ತಿಲಲ್ಲಿ ನಿಂತಲ್ಲಿ ಅವಳಿಗೆ ಅನಿಸ ಹತ್ತಿತು, ಬಿರುಗಾಳಿ ಎದ್ದು ಗುಡಿಸಲು ನೆಲದಿಂದ ಕಿತ್ತು ಹಾಕಿದೆ. ಗುಡಿಸಲಿನ ಕಡ್ಡಿಕಡ್ಡಿ ಚೆದರಿ ತೂರಿ ಬಿದ್ದಿದೆ. ಮಾಯಿ ಸಧರಾಂ ಬಹಳ ಹೊತ್ತಿನ ತನಕ ಬಾಗಿಲಿಗೆ ಆನಿಸಿಕೊಂಡು ನಿಂತಳು—ಹೊರಗೆ ನೋಡುತ್ತ ಉಳಿದಳು. ದೂರದಿಂದ ಬರುವ ಪ್ರತಿಯೊಂದು ಆಕೃತಿಯೂ ಅವಳಿಗೆ ಜೋಮಾಳಾಗಿ ಕಾಣುತ್ತಿದ್ದಳು.

ದೀಪ ಹೊತ್ತಿದಾಗ ಜೋಮಾ ಇದ್ದಲಿನಿಂದ ತುಂಬಿದ ಚೀಲ ತಂದು ಗುಡಿಸಲ ಮುಂದೆ ಒಗೆದಳು. ಅತ್ತೆ-ಸೊಸೆ ಇಬ್ಬರೂ ಒಬ್ಬರೊಬ್ಬರ ಕಣ್ಣಲ್ಲಿ ಕಣ್ಣಿಟ್ಟು ನೋಡಿದರು. ಜೋಮಾಳ ಕಂಬನಿ ತುಳುಕಾಡುವ ಕಣ್ಣು ಮೇಲೆತ್ತುತ್ತಿದ್ದಿಲ್ಲ.—ಮಾಯಿ ಸಧರಾಂ ತನ್ನ ಸೊಸೆಯ ಕೆದರಿದ ಕೂದಲು ತುಂಬಿದ ಕಣ್ಣು ಮತ್ತು ಹರಿದ ನಿಲುವಂಗಿಯನ್ನು ಕಂಡಾಗ ಅವಳಿಗೆ ಬವಳಿಬಂದಂತೆ ಆಯಿತು. ಸಧರಾಮಳಿಗೆ ಅನಿಸಿತು,—ತನ್ನ ಸೊಸೆ ಇದ್ದಲು ಹೊತ್ತು ತರಲಿಲ್ಲ, ಒಂದು ಯುದ್ಧದಲ್ಲಿ ಹೋರಾಡಿ ಬಂದಿದ್ದಾಳೆ.

# ಅವರವರ ಸರಹದ್ದುಗಳು

ಹೊರಗಿನ ಗೇಟನ್ನು ತೆರೆದು ಹೂವಿನ ಗಿಡಗಳ ಹಾದಿಯಿಂದ ನಾನು ಮನೆಯ ಹಜಾರವನ್ನು ಮುಟ್ಟಿದಾಗ ದರ್ಶಿಯ ಗುಲಾಬೀ ಮುಖಚರ್ಯೆ ಒಂದು ಮುದ್ದಾದ ಕಿರುನಗೆಯಿಂದ ನನ್ನ ಸ್ವಾಗತ ಮಾಡುತ್ತದೆ. ಆ ಹೊತ್ತಿಗೆ ಅವಳು ಮನೆ ಚೊಕ್ಕಮಾಡುವದರಲ್ಲಿ ತೊಡಗಿರುತ್ತಾಳೆ. ಅಥವಾ ಕೆಲಸವಿಲ್ಲದಿದ್ದರೆ ಬಾಳು ಸಾರ್ಥಕವೇ ಅಲ್ಲ ಎಂಬಂತೆ, ಅವಳು ಹೊಲಿಗೆ ಕೆಲಸದಲ್ಲಿ ನಿರತಳಾಗಿರುತ್ತಾಳೆ. ಅವಳು ಏನೇ ಕೆಲಸಮಾಡುತ್ತಿರಲಿ, ನನ್ನನ್ನು ಕಂಡ ಕೂಡಲೇ, ಎಲ್ಲ ಕೆಲಸ ಮರೆತು ಬಿಟ್ಟು ಮುಂಜಾವಿನಿಂದಲೂ ಬರೇ ನನಗಾಗಿಯೇ ಕಾಯುತ್ತಿದ್ದಂತೆ ಕಾಣುತ್ತದೆ. ತನ್ನ ಬಾಳಿನ ಪ್ರತಿಯೊಂದು ಕ್ಷಣವನ್ನೂ ಅವಳು ನನಗಾಗಿ ಬಲಿಕೊಡಲು ಅಣಿಯಾಗಿ ಬಿಡುತ್ತಾಳೆ. ಅವಳು ತನ್ನ ಪ್ರೇಮಮಯವಾದ ಬೆರಳುಗಳಿಂದ ನನ್ನ ಮೈಯನ್ನು ಮುಟ್ಟಿದಾಗ, ನನ್ನ ಬಟ್ಟೆಗಳನ್ನು ಗೂಟಕ್ಕೆ ತೂಗುಹಾಕುವಾಗ ಅವಳು ಶಿವನ ರೂಪಧಾರಣಮಾಡಿ ಇಡೀ ದಿನದ ನನ್ನ ಅವಮಾನಗಳ ಪೀಡೆಯ ವಿಷವನ್ನು ತಾನೇ ಕುಡಿದುಬಿಡಲು ಇಚ್ಛಿಸುತ್ತಾಳೆ, ಎನ್ನುವಂತೆ ನನಗೆ ಅನಿಸುತ್ತದೆ. ಆ ಸಮಯ ನಾನು ಸತ್ಯಲೋಕದಲ್ಲಿಯೇ ಅಲೆಯುತ್ತಿದ್ದಂತೆ ಒಂದು ಅಲೌಕಿಕ ಉನ್ಮಾದದ ಲೋಕದಲ್ಲಿ ಹೋಗಿ ತಲುಪುತ್ತೇನೆ. ಸತ್ಯಲೋಕದಲ್ಲಿ ಇರುವ ಜನ ನನಗಿಂತ ಹೆಚ್ಚು ಸುಖಿಗಳೋ? . . . ಇದೊಂದು ನಾನೇ ಇಂದ್ರನಾಗಿರುವಂಥ ಸ್ವರ್ಗ. ಮತ್ತು ದರ್ಶೀ ನನ್ನ ಅಲಕಾ. ನಗುಮಹೂವು ಮತ್ತು ದರ್ಶೀ!- ನನ್ನ ಅಲಕಾ!

ಆದರೆ ಕಳೆದ ಕೆಲವು ಕಾಲದಿಂದ ದರ್ಶೀ ನನ್ನ ಈ ಸ್ವರ್ಗವನ್ನು ನನ್ನಿಂದ ಕಸಿದುಕೊಳ್ಳಲು ಇಚ್ಛಿಸುತ್ತಿದ್ದಾಳೆ.

ಸಂಜೆಯ ಚಹಾಪಾನ ಚಿಂತೆಯಲ್ಲಿಯೇ ಮುಗಿದು ಹೋಗುತ್ತದೆ. ನನ್ನ ಇಡಿ ದಿನದ ದಿನಚರಿಯ ಏನಾದರೂ ಸ್ವಾರಸ್ಯದ ಸಂಗತಿ ಹೇಳೋಣವೆಂದರೆ ಅದಕ್ಕೂ ಮೊದಲೇ ಅವಳು ತನ್ನ ಮಾತು ಆಡಲು ಸಿದ್ಧಳಾಗುತ್ತಾಳೆ—ಆಚೆಈಚೆಯ ಬಹಳಷ್ಟು ಮಾತುಗಳ ಪೀಠಿಕೆಯ ನಂತರ ಅವಳು ಅನ್ನುತ್ತಾಳೆ—"ಆಕೆ ಇದ್ದಾಳಲ್ಲ, ನಿಮ್ಮ ಮಿತ್ರ ಸಬ್ಬರವಾಲನ ವೈಫ ಕೀರ್ತಿ."

"ಹೂಂ, ಏನಾಯಿತು ಕೀರ್ತಿಗೆ?"

"ಅವಳಿಗೂ ಶಾಲೆಯಲ್ಲಿ ಸರ್ವಿಸ ಸಿಕ್ಕಿದೆ."

"ಅಚ್ಛಾ, ಬಹಳ ಕೆಟ್ಟದ್ದಾಯಿತು." ನಾನು ಕೆರಳಿದಂತೆ ಆಗುತ್ತೇನೆ.

"ಕೆಟ್ಟದ್ದೇನಾಯಿತು?" ಅವಳೂ ರೊಚ್ಚಿಗೇಳುತ್ತಾಳೆ- ಆದರೆ ವಾತಾವರಣದ

ಜುರುಕನ್ನು ಕಡಿಮೆಮಾಡಲಿಕ್ಕೆ ನಾನು ಏದುವಾಗಿ ಅಂದೆ, "ಸರಿ, ಅದನ್ನು ನೀನು ಕೆಟ್ಟದ್ದೆಂದೇ ತಿಳಿ." ಆ ಸಮಯ ನಾನು ಬಹಳಷ್ಟು ಹೇಳಲು ಬಯಸುತ್ತೇನೆ. ಆದರೆ ನನಗೆ ಹೇಳಲು ಯಾವ ಮಾತೂ ಸೂಚಿಸುವುದಿಲ್ಲ. ಆದ್ದರಿಂದ ನಾನು ಸುಮ್ಮನೆ ಅತ್ತಿತ್ತ ಹುತ್ತ ಬಡಿಯುತ್ತೇನೆ.—

"ಇದು ನೋಡು ದರ್ಶೀ, ಹೆಂಗಸರು ನೌಕರಿಮಾಡುವುದು ಬಹಳ ಗಂಡಾಂತರದ್ದು. ಇಂದು ನೌಕರಿಮಾಡುವ ಹೆಂಗಸರ ದೆಸೆ ಎಷ್ಟು ಕೆಟ್ಟದೆಯೋ ಅಷ್ಟು ಇನ್ನಾರದೂ ಇಲ್ಲ."

"ಅದು ಹೇಗೆ?"

"ನೀನೇ ನೋಡ್ತೀಯಾ. ಬಸ್ಸುಗಳಲ್ಲಿ ಹೆಂಗಸರಿಗೆ ಎಂಥ ಕೆಟ್ಟ ಪರಿಸ್ಥಿತಿ ಇರುತ್ತದೆ. ಅದೂ ಮಳೆಗಾಲವಿದ್ದರಂತೂ ಮುಗಿದೇ ಹೋಯಿತು."

"ಮಳೆಗಾಲವೇನು ಇಡೀ ವರ್ಷ ಇರುತ್ತದೋ?"

"ಇಡೀ ವರ್ಷವಿರಲಿಕ್ಕಿಲ್ಲ. ಆದರೆ ಇಡಿವರ್ಷ ಒಂದಲ್ಲ ಒಂದು ಸಂಕಟ ಮಳೆಯಂತೆಯೇ ಬರುತ್ತಲೇ ಇರುತ್ತದೆ ಮತ್ತೆ . . . ಮತ್ತೆ . . ."

ನನ್ನ ಈ ಅರ್ಥವಿಲ್ಲದ ಮಾತುಗಳ ಮುಂದೆ ಅವಳು ಶಸ್ತ್ರ ಕೆಳಗಿಡಲೇ ಬೇಕಾಗುತ್ತದೆ. ಅವಳ ಮುಖ-ಮುದ್ರೆ ಇಳಿದುಹೋಗುತ್ತದೆ. ಮತ್ತು ಕಣ್ಣಿನ ತುದಿಯಿಂದ ಉಪ್ಪು ನೀರಿನ ಹನಿ ತುಳುಕಾಡುತ್ತದೆ. ತಾನೂ ನೌಕರಿಮಾಡಬೇಕೆಂಬ ಅವಳ ಆಕಾಂಕ್ಷೆ ತ್ವರೆಯಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಿದೆ, ಎಂದು ಆ ಹೊತ್ತಿಗೆ ಅನಿಸುತ್ತದೆ. ನಾನೇನು ಅಂಥ ಬಲಾತ್ಕಾರಿಯೋ?—ಜುಲುಮೆಗಾರನೋ?—ಇಲ್ಲ.

ಆಗ ನಾನು ಅವಳ ಸಾಂತ್ವನೆಗಾಗಿ ಹೇಳುತ್ತೇನೆ—"ನನ್ನ ಚಿನ್ನಾ, ಹೆಂಗಸರು ಚಾಕರಿ ಮಾಡಬೇಕೆಂಬ ತತ್ವ ನನ್ನದಲ್ಲದಿದ್ದರೂ, ನಿನಗೆ ಒಂದು ಚಾಕರಿ ಸಿಗಬೇಕೆಂದು ನಾನು ಅಗತ್ಯ ಹುಡುಕಾಡುತ್ತ ಇದ್ದೇನೆ. ನನಗೆ ಗೊತ್ತು, ನೀನು ದಿನವಿಡೀ ಮನೆಯಲ್ಲಿ ಒಬ್ಬಂಟಿಗಳಾಗಿ ಉಳಿದು ಬೋರಾಗುತ್ತಿದ್ದೀ. ಚಾಕರಿ ಮಾಡಿದರೆ ನಿನ್ನ ವ್ಯಕ್ತಿತ್ವವೂ ವಿಕಾಸಗೊಳ್ಳಬಹುದು ಹೌದೋಲ್ಲ?"

ಮತ್ತೆ ನಾನು ಕಾಗದದ ಹೂವು ಅರಳಿಸುತ್ತಿದ್ದೇನೆ, ಅಂದರೆ ಅದೇ ಸಮಯ ಪ್ರೀತಿ ತುಂಬಿದ ಕಣ್ಣಿನಿಂದ ಅವಳ ಕಡೆಗೆ ನೋಡುತ್ತೇನೆ, ಮತ್ತು ಅವಳು ಖುಷಿಯಾಗಿಬಿಡುತ್ತಾಳೆ.

ಬಡಪಾಯಿ ಹೆಣ್ಣು!

ಯಾವ ದಿನ ಅವಳು ಎಂಬ್ರಾಯಡರಿ ಡಿಜಾಯಿನಿಂಗ್ ಟ್ರೇನಿಂಗ ಪಡೆದಳೋ ಅಂದಿನಿಂದ ಮುಗಿಯಿತು, ಚಾಕರಿಯು ಹೊರತು ಬೇರೆ ಯಾವದನ್ನೂ ಅವಳು ಚಿಂತಿಸುತ್ತಲೇ ಇರಲಿಲ್ಲ. ಚಾಕರಿ ಮಾಡುವ ಆಕಾಂಕ್ಷೆ ಅವಳ ನರನಾಡಿಗಳನ್ನು ವ್ಯಾಪಿಸಿತ್ತು.

ಕೆಲವುಸಲ ನಾವು ಲಾನಿನಮೇಲೆ* ಕೂತಿರುತ್ತೇವೆ. ಆಗ ಅಕಸ್ಮಾತ್ ನಮ್ಮ ಮನೆಯ ಮುಂದಿನಿಂದ ಹಿಗ್ಗಿ ನಲಿದಾಡುವ ಚಕ್ಕಂದದ ಚೆಲುವಾದ ಒಂದು ದಂಪತಿ ನಡೆದುಹೋಗುತ್ತದೆ. ಆಗ ದರ್ಶಿಯ ಕಣ್ಣು ಅದೇ ಬಿಂದುವಿನ ಮೇಲೆ ನಟ್ಟಿ ನಿಲ್ಲುತ್ತದೆ. ಆ ಹೆಣ್ಣು ತನ್ನ ಗಂಡನ ಹೆಜ್ಜೆಗೆ ಹೆಜ್ಜೆ ಜೋಡಿಸಿ ಭಾರಿ ಗರ್ವದಿಂದ ನಡೆಯುವಂತೆ ಕಾಣುತ್ತದೆ. ಹೆಜ್ಜೆ, ಗಂಡನ ಹೆಜ್ಜೆಗಿಂತ ಚಿಕ್ಕವು; ಆದರೂ ಗಂಡನಷ್ಟೇ ದೂರ ಬೀಳುವಂತೆ ಅನಿಸುತ್ತದೆ. ನಾನು ಏನಾದರೂ ಅನ್ನುವದಕ್ಕೆ ಮೊದಲೇ ದರ್ಶಿ ಆಡಿಬಿಡುತ್ತಾಳೆ, 'ಈ ಹೆಂಗಸು ಖಂಡಿತಾ ಚಾಕರಿ ಮಾಡುತ್ತಿರಬೇಕು.'

"ನಿನಗೆ ಹೇಗೆ ಗೊತ್ತು?"

"ಹೆಂಗಸು ಎಲ್ಲಿಯ ತನಕ ನೌಕರಿ ಮಾಡುವದಿಲ್ಲವೋ ಅಲ್ಲಿಯ ತನಕ ಅವಳಲ್ಲಿಯ ಸ್ವಾಭಿಮಾನದ ಭಾವನೆ ಉಬ್ಬಿ ಬರುವದಿಲ್ಲ."

ಅವಳು ಮತ್ತೆ ದೂರ ನಡೆದು ಹೋಗುತ್ತಿದ್ದ ಆ ದಂಪತಿಯನ್ನೇ ನೋಡುತ್ತಾಳೆ. ನಾನು ಕಲ್ಪನೆ ಮಾಡುತ್ತೇನೆ—ಆ ದೂರ ಸರಿಯುತ್ತಿರುವ ದಂಪತಿ ನಾನು ಮತ್ತು ದರ್ಶೀ. ಆಗ ನಾನು ಅಂದಾಜುಮಾಡಹತ್ತುತ್ತೇನೆ—ದರ್ಶಿಗೂ ಚಾಕರಿ ಸಿಕ್ಕರೆ ಅವಳಲ್ಲಿ ಎಷ್ಟರ ಮಟ್ಟಿಗೆ ಸ್ವಾಭಿಮಾನ ಉಬ್ಬಿ ನಿಲ್ಲಬಹುದು? ಯಾರಿಗೆ ಗೊತ್ತು, ಅವಳ ವ್ಯಕ್ತಿತ್ವ, ನನ್ನ ಬಾಳಿನ ಮೇಲೆ ವರ್ಚಸ್ವ ಬೀರೀತು ಮತ್ತು ನಾನು ಅದರಡಿಗೆ ಬತ್ತಿಹೋದೇನು . . . ಈ ಬಿಂದುವಿಗೆ ತಲುಪಿ ನನ್ನ ವಿಚಾರ ತತ್ತರಿಸುತ್ತದೆ. ಮತ್ತು ದರ್ಶಿಯ ಜತೆ ನಡೆಯುತ್ತ ನಡೆಯುತ್ತ ನನಗೆ ಅನಿಸುತ್ತದೆ—ನಾನೇ ಹೀನನಾಗಿ ಕಾಣುತ್ತೇನೆ—ಏನೋ ಒಂದು ಭಯಂಕರ ಕನಸು ಕಂಡಂತೆ. ಆ ಕನಸು ನಿಜವಾಗಬಹುದೇ?

ಈಗಲೂ ದೂರ ನಡೆದು ಹೋದ ಆ ಚಲುವ ದಂಪತಿಯ ನೆಳಲನ್ನು ನೋಡುತ್ತಲೇ ಇದ್ದಾಳೆ. ಬಗ್ಗಿದ ಕುತ್ತಿಗೆ ಕಡೆಗಣ್ಣು ನೋಟ ಮತ್ತು ಮುಖಚರ್ಯೆಯಲ್ಲಿ ನಡುಗುವ ದೀಪದ ಶಿಖೆಯಂತೆ ಆತ್ಮವಿಶ್ವಾಸ, ದರ್ಶಿ ಆ ಭಾವದ ಸಾಕಾರ ಮೂರ್ತಿಯಾಗಿ ಕಾಣುತ್ತಿದ್ದಳು. ವಿನೀತ ಮತ್ತು ಉದ್ಧತ . . .

ಈ ಮೂಡಿನಲ್ಲಿ ನನಗೆ ಅವಳು ಚೆನ್ನಾಗಿ ಕಂಡಳು. ಈ ನೋಟ ನನಗೆ ಎಷ್ಟು ಸಮಾಧಾನಕರವಿತ್ತು! ನನ್ನಿಂದ ಖುಶಿಯಾಗದೇ ಇರಲಾಗಲಿಲ್ಲ. ನಾನು ಮುಗುಳು ನಕ್ಕೆ—ನನ್ನ ತುಟಿಯಲ್ಲಿ ಒಂದು ಕ್ಷಣ ನಗು ಸೂಸಿತು. ನನ್ನ ಈ ರಹಸ್ಯಮಯ ಅವಸ್ಥೆ ಕಂಡು ದರ್ಶಿಯ ಸಮಾಧಿ ಹರಿಯಿತು. ಅವಳು ಗಡಬಡಿಸಿ ಅಂದಳು, "ನಿಮಗೆ ಏನಾಯಿತು?" ಅವಳ ದನಿ ನಡಗುತ್ತಿತ್ತು. ನಾನು ಖುಶಿಯಲ್ಲಿ

---

* ಮನೆಯ ಮುಂದೆ ಅಂದವಾಗಿ ಬೆಳೆಸಿರುವ ಹುಲ್ಲು.

ಸುಳ್ಳೇ ಅಂದುಬಿಟ್ಟೆ "ವಿಚಾರ ಮಾಡುತ್ತ ಇದ್ದೆ—ನಿನಗೂ ನೌಕರಿ ಸಿಕ್ಕಿಬಿಟ್ಟರೆ, ನಮ್ಮ ಬದುಕೂ ಆ ಸುಂದರ ದಂಪತಿಯಂತೆ ಆಗುವದು . . . ಮತ್ತು . . . ಮತ್ತು . . . ನೀನೂ . . . ನೀನೂ . . .".

ಅದಕ್ಕೂ ಮುಂದೆ ನಾನು ಏನೂ ಅನ್ನದಾದೆ. ಸುಳ್ಳು ಹೇಳುವದು ನನಗೆ ಕಠಿಣವಾಯಿತೋ ಎಂಬಂತೆ—ಘಾತಕ ನಂಜು ಅದು! ಆದರೆ ದರ್ಶಿಯ ಕಣ್ಣಿನಿಂದ ಆನಂದದ ಕಂಬನಿ ಸೂಸುತ್ತಿದ್ದವು. ಅವಳು ಮಿತಿಮೀರಿ ಖುಶಿಯಾಗಿ ನನಗಾಗಿ ಕಾಫಿ ಮಾಡಲು ಅಡುಗೆಯ ಕೋಣೆಗೆ ಹೋದಳು.

ಅನೇಕ ಸಲ ದಿನ ಪತ್ರಿಕೆ ಓದುತ್ತ ನನ್ನ ಕಣ್ಣು ಒಮ್ಮಿಂದೊಮ್ಮೆ ಚಿಕ್ಕದೊಂದು ಸುದ್ದಿಯನ್ನು ತಲುಪಿ ಅಲ್ಲಿಯೇ ತಡೆಯುತ್ತದೆ. ನಾನು ಬಹಳ ಹೊತ್ತಿನ ತನಕ ಆ ಸುದ್ದಿಯ ಬಗೆಗೆ ವಿಚಾರ ಮಾಡುತ್ತ ಉಳಿಯುತ್ತೇನೆ—ಆ ಸುದ್ದಿ ಒಬ್ಬ ಚಾಕರಿ ಮಾಡುವ ಹೆಂಗಸಿನದಿರುತ್ತದೆ. ಅವಳು ಚಾಕರಿ ಮಾಡುತ್ತಲೇ ತನ್ನ ಕಚೇರಿಯಲ್ಲಿ ಯಾವದೋ ಅಸಿಸ್ಟಂಟನೊಂದಿಗೆ ಪ್ರೇಮ ಪಾಶದಲ್ಲಿ ಸಿಕ್ಕಿಬಿದ್ದು ಬೇರೆ ಶಹರಕ್ಕೆ ಹೋಗಿಬಿಡುತ್ತಾಳೆ . . . ಈ ಸುದ್ದಿಯನ್ನು ನಾಲಿಗೆ ಚಪ್ಪರಿಸುತ್ತ ದರ್ಶಿಗೆ ಹೇಳಿದಾಗ ಅವಳ ಬಣ್ಣ ಬಿಳುಪಾಗುತ್ತದೆ. ಕೈಗಳು ಥರ ಥರ ನಡುಗುತ್ತವೆ. ಮತ್ತು ಅವಳು ತಾನೇ ಆ ಪತ್ರಿಕೆಯ ಪಂಕ್ತಿಗಳ ಮೇಲೆ ಕಣ್ಣು ಓಡಿಸುತ್ತಾಳೆ—ಅವಳ ಮೋರೆಯ ಬಣ್ಣ ಹಾರಿದಂತೆಲ್ಲ ನನಗೆ ಅಮಲೇರಿದಂತೆ ಆಗಿಬಿಡುತ್ತದೆ. ಅನಿಸುತ್ತದೆ, ದರ್ಶಿ ಅಸ್ಪಷ್ಟತೆಯ ಶೂಲಕ್ಕೆ ಏರಿಸಲ್ಪಟ್ಟು ನೇತಾಡುತ್ತಿದ್ದಾಳೆ. ಅವಳನ್ನು ಇನ್ನೂ ಇಷ್ಟು ಪೀಡಿಸಲಿಕ್ಕೆ ಭಾರಿ ಕಟುವಾದ ವ್ಯಂಗ್ಯದಿಂದ ಹೇಳುತ್ತೇನೆ—"ಒಪ್ಪಿದೆ, ವಿಜ್ಞಾನ ಬಹಳ ಅಭಿವೃದ್ಧಿ-ಪ್ರಗತಿಗೊಂಡಿದೆ. ಇಂದು ಚಂದ್ರಲೋಕದವರೆಗೆ ತಲುಪಲಿಕ್ಕೆ ಸ್ಪುತ್ನಿಕವೂ ಸಿದ್ಧವಾಗಿದೆ ಮತ್ತು ಹೆಂಗಸರಿಗೆ ಸಮಾನ ಹಕ್ಕುಗಳೂ ಸಿಕ್ಕಿವೆ. ಆದರೆ ಲಾಭವೇನು? ಎಲ್ಲಿಯ ತನಕ ಹೆಣ್ಣಿನ ಜೀವನದಲ್ಲಿ ಆಚರಣೆಯ ಪವಿತ್ರತೆ ಮತ್ತು ದೃಢತೆ ಇಲ್ಲವೋ ಅಲ್ಲಿಯತನಕ ಎಲ್ಲ ಮಾನವೀಯ ವಿಕಾಸ ವ್ಯರ್ಥ.

ಈ ಮಾತಿನಿಂದ ದರ್ಶೀ ನಿರಾಶ ಮನಸ್ಸಿನಿಂದ ಪಲ್ಲಂಗದ ಮೇಲೆ ಹೋಗಿ ಮಲಗುತ್ತಾಳೆ. ಮತ್ತು ಹಲವು ದಿನಗಳ ತನಕ ಅವಳ ಮುಖದ ಮೇಲೆ ಮಾಗಿಯ ಕಳೆಯಿರುತ್ತದೆ. ತೋಟದಲ್ಲಿ ಅರಳಿದ ಹೂವುಗಳು ನಿರರ್ಥಕವೆನಿಸುತ್ತವೆ. ಮತ್ತು ಮಳೆಯ ಹನಿಗಳೊಂದಿಗೆ ನಮ್ಮ ಬದುಕಿನಲ್ಲಿ ಏನೂ ಕಳೆ ಇರುವುದಿಲ್ಲ.

ಹಿಂದಿನ ಕೆಲವು ದಿನಗಳಲ್ಲಿ ನಾನು ದರ್ಶಿಯ ಬಾಳನ್ನು ಹತ್ತಿಕ್ಕಲಿಕ್ಕೆ ಒಂದು ಭಾರಿ ಹೇಸಿಗೆಯ ಉಪಾಯ ಹೂಡಿ ಕೂತಿದ್ದೇನೆ. ಮತ್ತು ನನ್ನ ಆತ್ಮವು ಗಾಯ ಗೊಂಡ ಹಕ್ಕಿಯಂತೆ ಗಾಬರಿಗೊಂಡು ಚಡಪಡಿಸುತ್ತ ಇರುತ್ತದೆ.

ಮತ್ತು ಒಂದು ದಿನ ಒಮ್ಮಿಂದೊಮ್ಮೆ ದರ್ಶಿ ಕೈಯಲ್ಲಿ ದಿನ ಪತ್ರಿಕೆ ಹಿಡಿದು ಕೊಂಡು ನನ್ನ ಇದುರಿಗೆ ಬಂದು ನಿಲ್ಲುತ್ತಾಳೆ. ತಮ್ಮ ಜೀವನದಲ್ಲಿ ಒಂದು ಭಯಾನಕ

ಆಕಸ್ಮಿಕ ಸಮೀಪಿಸುತ್ತಿರುವಂತೆ ಅವಳ ಮೋರೆಯ ಮೇಲೆ ಗಂಭೀರ ಶಾಂತತೆ ಇರುತ್ತದೆ . . . ಅವಳು ಅಂದಿನ ದಿನದ ಸುದ್ದಿಯ ಕೊನೆಯ ಭಾಗವನ್ನು ನಾನು ಓದಬೇಕೆಂದು ಇಚ್ಛಿಸುತ್ತಾಳೆ. ಓದಿದಾಗ ನನಗೆ ಗೊತ್ತಾಗುತ್ತದೆ. ಆ ದಿನ ಕಚೇರಿಯ ಅಸಿಸ್ಟಂಟಿನ ಸಂಗಡ ಓಡಿಹೋದ ಹೆಂಗಸು ಕುಲೀನ ಹೆಂಗಸಾಗಿದ್ದಿಲ್ಲ. ಅವಳೊಬ್ಬ ಪರಿತ್ಯಕ್ತೆ. ಆಕೆ ತನ್ನ ಕಲಂಕಿತ ಬದುಕನ್ನು ಸಾರ್ಥಕಗೊಳಿಸಲು ಬಯಸುತ್ತಿದ್ದಳು.— ನಾನು ತಬ್ಬಿಬ್ಬಾಗಿ ಉಸಿರಾಡಿಸಲು ಅಸ್ವಸ್ಥನಾಗುತ್ತೇನೆ. ಮತ್ತು ದರ್ಶಿಯ ಕಣ್ಣು ತಪ್ಪಿಸಿ ಬೇಗನೇ ಹೂಗಳತ್ತ ನೋಡುತ್ತ ಅನ್ನುತ್ತೇನೆ, " ದರ್ಶಿ, ಈ ಹೂವು ತೋಟದಲ್ಲಿ ಅರಳಿದರೇನೇ ನನಗೆ ಚೆಂದವಾಗಿ ತೋರುತ್ತವೆ . . . ಇವುಗಳ ಪರಿಮಳ ಇಲ್ಲಿಯೇ ಇರಲಿ . . . ದರ್ಶೀ, ನನ್ನ ಚಿನ್ನಾ ನೋಡಲ್ಲ! "

ಆದರೆ ಇದಕ್ಕೂ ಮುಂದೆ ನಾನು ಏನೂ ಹೇಳಲಾರೆ, ಏನೂ ಇಲ್ಲ.

ದರ್ಶೀ ಈ ತನಕವೂ ನನ್ನ ಇದುರಿಗೆ ನಿಂತಿದ್ದಾಳೆ. ಮತ್ತು ನನ್ನ ಮುಕ್ತಿವಾದದ ಎಲ್ಲ ಶಸ್ತ್ರಗಳನ್ನು ಮೊಂಡ ಮಾಡಲು ನೋಡುತ್ತಾಳೆ. ನಾನು ಮನಸ್ಸಿನ ಆಳದಲ್ಲಿಯೇ ಆಲೋಚಿಸುತ್ತೇನೆ. ಈ ಹೆಂಗಸು ಸ್ವತಂತ್ರಳಾಗಿ ಒಂದು ದಿನ ನನ್ನ ವಿರುದ್ಧ ನಿಂತುಬಿಡುವಳು. ತನ್ನನ್ನು ನನಗಿಂತ ಶ್ರೇಷ್ಠಳೆಂದು ತಿಳಿಯುವಳು.

ನಾನು ಮತ್ತೆ ಅವಳ ದೃಷ್ಟಿಯಿಂದ ದೂರವಿರಲು ಪ್ರಯತ್ನಿಸುತ್ತೇನೆ. ಆದರೆ ಅವಳು ಪ್ರತಿಸಲವೂ ನನ್ನ ಕಣ್ಣನ್ನು ತನ್ನ ಅಂಕೆಯಲ್ಲಿ ಇಡುತ್ತಾಳೆ.

" ನಿನ್ನೆ ನಾನು ಎಂಪ್ಲಾಯಿಮೆಂಟ ಎಕ್ಸ್ಚೇಂಜ್‌ಗೆ ಹೋಗಿದ್ದೆ."

" ನೀನು ? "—ನಾನು ನಡುಗಿಬಿಟ್ಟೆ.

" ಹೂಂ " ಅವಳ ದನಿ ಏರುತ್ತ ಏರುತ್ತ ಎತ್ತರವಾಯಿತು, " ಡೀಲಿಂಗ್ ಕ್ಲಾರ್ಕ ಅಂದ,' ಅಕ್ಕಾ, ಕಳೆದವಾರ ನಿಮಗೆ ಇಂಟರವ್ಯೂ ಕಾರ್ಡು ಕಳಿಸಿತ್ತು— ಕೇವಲ ಒಂದೇ ಕ್ಯಾಂಡಿಡೇಟು ' . . ಯಾವುದೇ ಇಂಟರವ್ಯೂ ಕಾರ್ಡು ಬಂದಿತ್ತೆ? "

" ಹೂಂ ಬಂದಿತ್ತು . . . ಆದರೆ ನಾನು ಹರಿದು ಒಗೆದುಬಿಟ್ಟೆ . . . ನಿಜವೆಂದರೆ ನಾನು . . . ನಾನು . . . "

ಮತ್ತು ನಾನು ಅವಳಿಗೆ ನಿಜ ಸಂಗತಿ ಹೇಳಿಬಿಟ್ಟೆ.—ಅವಳು ಚಾಕರಿ ಹಿಡಿಯುವದು ನನಗೇಕೆ ಸೇರುವದಿಲ್ಲವೆಂದು.

" ಇನ್ನೂರು ರೂಪಾಯಿಯ ಚಾಕರಿ ಹಿಡಿದು ಈ ಮನೆಯನ್ನು ಇನ್ನಿಷ್ಟು ಚೆಂದವಾಗಿ ಮಾಡುತ್ತಿದ್ದೆ. "

" ಆದರೆ . . . ಈಗೇನು ಮಾಡಲು ಬರುವಂತಿದೆ ? ಚಾಕರಿಯ ಹಂಬಲ ಬಿಟ್ಟುಬಿಡು . . . ಬಾಳಿನಲ್ಲಿ ಚಾಕರಿ ಅಂಥ ದೊಡ್ಡ ಸಂಗತಿಯೇನೂ ಅಲ್ಲ."

ನಾನು ಬಹಳ ಖುಶಿಯಲ್ಲಿ ಇದ್ದೆ. ನನ್ನ ಒಳಸಂಚಿನಲ್ಲಿ ನಾನು ಯಶಸ್ವಿಯಾಗಿದ್ದೆ. ಆದರೆ ಅವಳು ನನ್ನ ಮಾತು ಏನೂ ಲಕ್ಷಿಸದೆ ಅದೇ ಗಡಸುತನದಲ್ಲಿ ಹೇಳುತ್ತ ನಡೆದಳು.

"ಕಾರ್ಡು ಹರಿಯುವಾಗ ನೀವು ಇಂಟರವ್ಯೂದ ತಾರೀಖು ನೋಡಿದ್ದಿಲ್ಲವೇನೋ, ನನಗೆ ಇನ್ನೊಂದು ಇಂಟರವ್ಯೂ ಕಾರ್ಡು ಸಿಕ್ಕಿದೆ. ಇಂದು ನಾನು ಇಂಟರವ್ಯೂ ಕೊಟ್ಟು ಅಪಾಯಿಂಟ್ ಮೆಂಟ್ ಪತ್ರ ಪಡೆದೇ ಬಂದಿದ್ದೇನೆ."

# ನನ್ನ ಟಾಗೋರನಾಗಿ ಮಾಡಮ್ಮಾ

ಬಡವನ ಎದೆಶೂಲಿಯ ಚೀತ್ಕಾರದಂತೆ ಹೊಗೆನಳಿಕೆಗಳಿಂದ ಹೊಗೆ ಏಳುತಲಿತ್ತು.

ಭಟ್ಟಿಯ ತುದಿಯ ಮೂಲೆಯಲ್ಲಿ ಒಂಟಿಯಾಗಿ ಬೆಳೆದಿದ್ದ ಬೀಟಿಮರದ ಕೆಳಗೆ ಒರಗಿದ ಅವನು ಒಂದೇಸಮನೆ ಹೊಗೆಯ ಕಡೆಗೆ ನೋಡುತ್ತಲಿದ್ದ. ಮತ್ತೆ ಆತ ಧೂಳು ಮೆತ್ತಿದ ತನ್ನ ಕಾಲುಗಳನ್ನು ನೋಡಿದ; ತನ್ನ ಇಡಿ ದೇಹದ ಮೇಲಿಂದ ಕಣ್ಣು ಹಾಯಿಸಿದ. ಅವನಿಗೆ ಒಂದು ವಿಚಾರ ಭಾರಿ ಆಶ್ಚರ್ಯಕ್ಕೆ ಕಾರಣವಾಗಿತ್ತು. ಚಿಕ್ಕಂದಿನಲ್ಲಿ ಅವನ ದೇಹ ಎಷ್ಟು ತುಂಬಿ ಪುಷ್ಟವಾಗಿತ್ತು; ದುಂಡುದುಂಡಾಗಿ ಮುದ್ದಾಗಿತ್ತು.

ಆದರೆ ಈಗ ಆತ ಬರಿ ಒಣಗಿದ ಎಲುಬಿನ ಹಂದರವಾಗಿ ಉಳಿದಿದ್ದ.

ತಾನೂ ಒಂದು ಹೊಗೆ ನಳಿಕೆ ಎಂದು ಅವನಿಗೆ ಒಂದುಕ್ಷಣ ಅನಿಸಿತು—ಯಾವುದೋ ಮುಚ್ಚಿಬಿದ್ದ ಭಟ್ಟಿಯ ಕೆಲಸಕ್ಕೆ ಬಾರದ ಹೊಗೆ ನಳಿಕೆ. ಅದರ ಎಲ್ಲ ಹೊಗೆ ಹೊರಬಿದ್ದು ಹೋಗಿದೆ. ಅವನಿಗೆ ತನ್ನ ಮೇಲೆಯೇ ಸ್ವಲ್ಪ ಸಿಡುಕುತೋರಿತು. ಅದಕ್ಕೂ ಹೆಚ್ಚಿನ ಸಿಡುಕು ತನ್ನ ಸ್ಥಿತಿಯ ಮೇಲೆ. ಎಲ್ಲಕ್ಕೂ ಹೆಚ್ಚಿನ ಸಿಡುಕು ಆ ಭಟ್ಟಿಯ ಕಾರಕೂನನ ಬಗೆಗೆ ಆತ. 'ಇದೀಗ ಬಂದೆ' ಎಂದು ಎಲ್ಲಿಗೆ ಹೋಗಿಬಿಟ್ಟನೋ ಗೊತ್ತುಪತ್ತೆ ಇದ್ದಿಲ್ಲ. ಬೀಟಿ ಮರದಡಿಗೆ ಈತ ಅಡ್ಡಾಗಿ ಈಗ ಒಂದು ಗಂಟೆಕಾಲ ಪ್ರತೀಕ್ಷೆಮಾಡುತ್ತಿದ್ದ. ಹೋಗ ಹೋಗುತ್ತ ಆ ಕಾರಕೂನನೋ ಕರಣಿಕನೋ ತಪ್ಪಿಹೋಗಿದ್ದರೆ ಇಷ್ಟು ಹೊತ್ತಿಗೆ ಆತ ಅರ್ಧ ಹಾದಿ ದಾಟಿ ಹೋಗುತ್ತಿದ್ದ. 'ಹಾಳಾದವ ಬೆಂಕಿಯ ನಳಿಕೆ, ಕೇವಲ ಬೆಂಕಿಯ ನಳಿಕೆ!' ಎಂದು ಆತ ಒಳಬಳಗೆ ಕೆರಳಹತ್ತಿದ.

ತಿರುಗಿ ತನ್ನ ಕತ್ತೆಗಳತ್ತ ಆತ ಕಣ್ಣು ಓಡಿಸಿದ. ಇಟ್ಟಿಗೆಗಳು ತುಂಬಿದ ನೇಣುಗಳ ಭಾರಕ್ಕೆ ಬಗ್ಗಿದರೂ ಅವು ಏನೂ ಆಗಿಯೇ ಇಲ್ಲವೆಂಬಂತೆ ತೃಪ್ತಿಯಿಂದ ಹುಲ್ಲು ಮೇಯುತ್ತಿದ್ದುವು. ಹುಲ್ಲು ಮೇಯುವದರಲ್ಲಿ ಅವು ಇಷ್ಟು ಮಗ್ನವಾಗಿದ್ದುವು. ಅವಕ್ಕೆ ಭಾರವೆಂಬುದು ಅನಿಸುತ್ತಲೇ ಇದ್ದಿಲ್ಲ. ಭಾರವೇನು? ಹೊರಲೇ ಬೇಕಾದದ್ದು. ಹೆಚ್ಚೇನು ಕಡಿಮೆಯೇನು? ಅವಕ್ಕೇನು ಕಾರಕೂನ ಬರಲಿ ಬಿಡಲಿ.

"ಎಷ್ಟೇ ಆಗಲಿ ಹಾಳುಕತ್ತೆ ಕತ್ತೇನೆ"

ಅವು ಈ ರೀತಿ ನಿಶ್ಚಿಂತೆಯಿಂದ ಹುಲ್ಲು ಮೇಯುತ್ತಿರುವದನ್ನು ಕಂಡು ಆತ ನಗಹತ್ತಿದ. ಮನುಷ್ಯ ಮತ್ತು ಕತ್ತೆ ಇವರ ನಡುವೆ ಇಷ್ಟೇ ವ್ಯತ್ಯಾಸ. ಮನುಷ್ಯ ಅಮಾನುಷತೆಯ ವಿರುದ್ಧ ದನಿಯೆತ್ತುತ್ತಾನೆ. ಆದರೆ ಕತ್ತೆ . . . ? ಕತ್ತೆ ಬರೆ ಕತ್ತೆಯೇ.

ಮನುಷ್ಯ ತನಗಿಂತ ಕೀಳು ಕೆಲಸ ಮಾಡುವವನನ್ನು ಕತ್ತೆಯೆಂದೇ ತಿಳಿಯುತ್ತಾನೆ. ಅವನು ದನಿ ಎತ್ತಿದರೆ ಏನು? ಮತ್ತೆ ಯಾವ ದನಿಯನ್ನು ಕೇಳಿಯೂ ಕೇಳದಿದ್ದಂತೆ ಮಾಡುವರೋ ಆ ದನಿ ಎತ್ತಿದರೇನು ಪ್ರಯೋಜನ? ಅದಕ್ಕಿಂತ ಈ ಕತ್ತೆಗಳೇ ಲೇಸು. ಅವು ತಲೆ ತಗ್ಗಿಸಿ ಹಗಲೂ ಇರುಳೂ ಕೆಲಸ ಮಾಡುತ್ತಲೇ ಇರುತ್ತವೆ. ಆದರೆ . . . 'ಫಲ'ದ ಬಗೆಗೆ ಎಂದಿಗೂ ಆಲೋಚನೆ ಮಾಡುವದಿಲ್ಲ.

ಅವನ ಕತ್ತೆಗಳು ಈಗಲೂ ನಿಶ್ಚಿಂತೆಯಿಂದ ಹುಲ್ಲು ಮೇಯುತ್ತ ಇದ್ದವು.

ಅವನ್ನು ನೋಡಿ ಅವನು ಮತ್ತೆ ನಕ್ಕನು.

ಈ ಸಲ ಅವನ ನಗೆಯಲ್ಲಿ ಸಾಮಾನ್ಯವಾಗಿ ನಗೆಯಲ್ಲಿಯೇ ಇರಬೇಕಾದ ಆ ಬಿಚ್ಚುತನವಿರಲಿಲ್ಲ. ಅದರ ಬದಲು ಅವನ ಎದೆಯಲ್ಲಿ ಒಂದು ಶೂಲಿಯಂಥ ವಿಕಾರ ಎದ್ದಿತು. ಅವನ ಒಳಗೆ ಒಂದು ಹೀನಭಾವವು ಜಾಗೃತವಾಯಿತು. ಮರದ ಕೆಳಗೆ ಬಿದ್ದಲ್ಲಿಯೇ ಆತ ಮೈ ಮುದುಡಿಕೊಂಡು ಸಂಕೋಚದಿಂದ ಒಂದು ಗಂಟಿನಂತೆ ಆಗಿಬಿಟ್ಟ—ಇನ್ನೂ ಸಣ್ಣ, ಇನ್ನೂ ಸಣ್ಣ—ಕತ್ತೆಗಳಿಗಿಂತಲೂ ಕೀಳುಬೀಳು.

"ಹಾಳಾದವ, ಆ ಕತ್ತೆ ಇನ್ನೂ ಬರಲಿಲ್ಲ!" ಆತ ಮತ್ತೆ ಅಧೀರನಾದ.

—ಮನುಷ್ಯನೇ ಅಲ್ಲವೇ?

ನಸು-ನಸುಕಿಗೇ ಆತ ಮೂರುಸಾರಿಗೆ ಮಾಡಿದ್ದ. ಈ ನಾಲ್ಕನೆಯ ಸಾರಿಗೆಯ ನಂತರ ಬಿಡುವು ಮಾಡಿಕೊಳ್ಳುವವನಿದ್ದ. ಮತ್ತು ತನ್ನ ಧುರೀಣನ ಭಾಷಣವನ್ನು ಕೇಳಲಿಕ್ಕೆ ಹೋಗುವವನಿದ್ದ. ಆ ಧುರೀಣ ಅವನ ಊರಿನ ಸ್ಕೂಲಿನ ಶಂಕುಸ್ಥಾಪನೆಗಾಗಿ ಬರುವವನಿದ್ದ. ಆದರೆ ಈ ಮುನ್ಶೀ (ಕಾರಕೂನ) 'ಇದೀಗ ಬಂದೆ'ನೆಂದು ಎಲ್ಲಿ ಜಾರಿದನೋ ಪತ್ತೆಯೇ ಇಲ್ಲ!

ಕತ್ತೆಗಳು ಈಗಲೂ ನಿಶ್ಚಿಂತೆಯಿಂದ ಮೇಯುತ್ತಿದ್ದವು. ಆಕಾಶದಲ್ಲಿ ಚಿಕ್ಕಚಿಕ್ಕ ಮೋಡಗಳು ಒಟ್ಟಾಗಹತ್ತಿದ್ದುವು. ಗಾಳಿಯ ಎರಡು ತಂಪು ಸೆಳಕು ಅವನ ಕಣ್ಣಿಗೆ ತಂಪು ಸೋಂಕಿಸಿದ್ದವು. ಒಂದು ಕ್ಷಣಕಾಲ ಎಲ್ಲವೂ ಸ್ತಬ್ಧ—ಸಮಾಧಿಸ್ಥವಾಯಿತು. ಆತ ತೂರಾಡಿದ. ತೂರಾಟದ ತಲ್ಲೀನತೆಯಲ್ಲಿಯೇ ಆತ ಒಂದು ನುಡಿ ಅಂದ:

ಸೆರಗು ಬಡಿದು ದೀಪವಾರಿಸಿ
ಕಣ್ಣಜ್ಯೋತಿ, ಹೋದಳು ನಂದಿಸಿ.

ಆತ ಮತ್ತೊಮ್ಮೆ ಗಹಗಹಿಸಿ ನಕ್ಕುಬಿಟ್ಟ.

ಅವನಿಗೆ ದೊಡ್ಡ ಗಡ್ಡದ ಹಳೆಯ ಕವಿ ನೆನಪಿಗೆ ಬಂದನು. ಆತ ಜಾನಪದ ಹಾಡುಗಳನ್ನು ಸಂಗ್ರಹಿಸುತ್ತ ಅವನ ಕವಿ ಮೇಷ್ಟ್ರ ಬಳಿಗೆ ಬಂದು ತಲುಪಿದ್ದ. ಮಾತು ಮಾತಿನಲ್ಲಿಯೇ ಆ ಕೆದರಿದ ಕೂದಲ ಕವಿಯು ಹೇಳಿದ್ದ! ತಾನು ಈ ನುಡಿಯನ್ನು ಟಾಗೋರರಿಗೆ ಅಂದು ತೋರಿಸಿದ್ದೆ. ಆಗ ಅವರು ಹಿಗ್ಗಿ ತೂರಾಡಿದರು.

ಅವನು ಆ ಹಳೆಯ ಕವಿಯ ಎಷ್ಟೆಷ್ಟೋ ನುಡಿಗಳನ್ನು ಕೇಳಿದ್ದನು. ಅವು ಎಂದೂ ಮುಗಿಯುತ್ತಿದ್ದಿಲ್ಲ. ಅವನು ಖುಶಿಯಾಗಿಬಿಟ್ಟಿದ್ದ. ಆ ಹಳೆ ಕವಿ ಅವನ ಮೇಲೆ ತುಂಬ ಪ್ರೀತಿ ತೋರಿಸಿದ್ದ.

ಆ ಮೇಲೆ ಮೇಷ್ಟ್ರು ಕವಿ ಮತ್ತು ಹಳೆ ಮುದಿಕವಿ ತಮ್ಮ ತಮ್ಮ ಕವಿತೆಗಳನ್ನು ಒಬ್ಬರಿಗೊಬ್ಬರು ಹೇಳಿ ಕೇಳಿಸುತ್ತ ಕುಳಿತಿದ್ದರು.

ಇವನು ಹತ್ತಿರ ಕೂತು ಚಕಿತನಾಗಿ ಕೇಳುತ್ತಲಿದ್ದ. ಆ ದಿನವೇ ಆತ ಬಾಳಿನಲ್ಲಿ ಮೊದಲುಬಾರಿ ಗೊತ್ತುಮಾಡಿಕೊಂಡ—ಕವಿಗಳೂ ಕಳ್ಳರೂ ಇತರ ಮನುಷ್ಯ ರಂತೆಯೇ ಇರುತ್ತಾರೆ. ಸಾಮಾನ್ಯ ಮನುಷ್ಯರಂತೆಯೇ ಕೈಕಾಲು ಉಳ್ಳವರು. ಅದೇ ಸಾಮಾನ್ಯ ಮನುಷ್ಯರ ಚಟಗಳು ಅವರಲ್ಲಿಯೂ ಇರುತ್ತವೆ.

ಆದ್ದರಿಂದಲೇ ಆ ಹಳೆಕವಿ ನಗೆಚಾಟಿಕೆಯ ಮಾತಿಗೆ ನಗುತ್ತಿದ್ದ.

ಆದಿನ ಅವನಿಗೆ ತನ್ನ ಮೇಷ್ಟ್ರು ಪೂರ್ತಿ ಕವಿಯಾಗಿ ತೋರ ಹತ್ತಿದ. ಆ ಮೊದಲು ಅವನಿಗೆ ಆತ ಕವಿಯೆಂಬುದೇ ನಂಬಿಗೆಯಾಗುತ್ತಿದ್ದಿಲ್ಲ. ಅದೇಕೋ ಗೊತ್ತಿದ್ದಿಲ್ಲ— ಮೇಷ್ಟ್ರು ಕವಿ ಎಂಬ ಬಗೆಗೆ ಅವನಿಗೆ ಸಂಶಯ.

ಒಂದು ದಿನ ನಾಚುತ್ತ ನಾಚುತ್ತ ಅವನೂ ಒಂದು ಕವನ ಬರೆದ, ಬರೆಯಲಿಲ್ಲ. ಅದು ಬರೆದು ಹೋಯಿತು.

ಅದನ್ನು ಓದಿ ಕವಿ ಮೇಷ್ಟ್ರು ಅದೆಷ್ಟು ಸಂತೋಷಪಟ್ಟರು. "ಕೇವಲ ಟಾಗೋರರದೇ ಬಣ್ಣ. ಅಪ್ಪಟ ಅವರದೇ ಕಲ್ಪನೆ. ಮಗೂ, ನೀನು ಟಾಗೋರ ನಾಗುವಿ. ಸಾಹಸ ಬಿಡಬೇಡ." ಆ ದಿನವೇ ಅವನಿಗೆ ನಂಬಿಗೆ ಆಗಿಬಿಟ್ಟಿತು, ತಾನು ಟಾಗೋರನಾಗುವೆನೆಂದು.

ಟಾಗೋರರ ಗೀತಾಂಜಲಿಯ ಅನುವಾದವನ್ನು ತಂದು ನಾಲ್ಕುಸಲ ಓದಿದ. ಆದರೆ ಅದು ಅವನ ತಿಳುವಳಿಕೆಗೆ ನಿಲುಕಲಿಲ್ಲ. ಆಗ ತಾನು ಹೀನನೆಂಬ ಅನುಭವ ಅವನಿಗೆ ಆಗಹತ್ತಿತು.

ಆದರೆ ಕವಿಮೇಷ್ಟ್ರು ಅವನ ಸಾಹಸವನ್ನು ಹೆಚ್ಚಿಸುತ್ತಲೇ ಇದ್ದ. "ನೀನು ಅವಶ್ಯವಾಗಿ ಒಂದು ದಿನ ಟಾಗೋರನಾಗಿಬಿಡುವಿ. ನಿನ್ನ ಕವಿತೆಯಂತೆ ಆ ಬಾಬುವಿನ ಯಾವುದೇ ಕವಿತೆ ಇದ್ದಿಲ್ಲ." 'ಬಾಬೂ' ಎಂದಾಗ ಮೇಷ್ಟ್ರಿನ ಇಂಗಿತ ಆ ಹಳೆಯ ಕವಿ ಎಂದಿತ್ತು. ಈಗ ಅವನು ಪ್ರತಿಯೊಂದು ವಿಷಯದ ಮೇಲೂ ಉತ್ತಮೋತ್ತಮ ಕವನ ಬರೆಯಬಲ್ಲ.

ಆದರೆ ಕವಿಯೊಬ್ಬ ಕವಿಗಿಂತ ಹೆಚ್ಚು ಮೆಪ್ಪಾಗಿದ್ದನೋ ಅವನಿಗೆ ಕವಿತೆಯೇ ಮನ್ನಣೆ ಕೊಡುವದಿಲ್ಲ. ಬದರೂ ಕುಂಬಾರ ಚಕಿತನಾಗಿಬಿಟ್ಟ. ಅವನಿಗೆ ನೆರೆಯ ಊರಿನಲ್ಲಿ ಇನಾಮು ಹಂಚಲು ಬಂದಿದ್ದ ಆ ಧುರೀಣನ ನೆನಪಾಯಿತು. ಇನಾಮು ಗಳಿಂದ ಬದರೂನ ಜೋಳಿಗೆ ತುಂಬಿ ಹೋಗಿತ್ತು. ಕೆಲವು ಇನಾಮು ಆತ ತನ್ನ

ಒಬ್ಬ ಮಿತ್ರನಿಗೆ ಹಿಡಿಯಲು ಹೇಳಿದ್ದ. ಅವನು ಶಾಲೆಯಲ್ಲಿ ಮೊದಲು ನಂಬರು ಪಡೆದಿದ್ದ. ಓಟದಲ್ಲಿ ಮೊದಲು ಬಂದಿದ್ದ. ಕವನ ಸ್ಪರ್ಧೆಯಲ್ಲಿ ಮೊದಲು ಬಂದಿದ್ದ.

ಆ ದಿನ ಆತ ಹರ್ಷದಿಂದ ಹುಚ್ಚನಂತಾದ. ಆ ದಿನ ಕವಿ ಮೇಷ್ಟ್ರಿಗೂ ಅಮಿತ ಖುಶಿ. ಧುರೀಣ ತನ್ನ ಭಾಷಣದಲ್ಲಿ ಹೇಳಿದ್ದ:

"ನಿಮ್ಮೊಳಗಿಂದ ಮಹಾನಾಯಕರು ಹುಟ್ಟುವರು. ನಿಮ್ಮೊಳಗಿಂದ ಕೆಲವರು ಮಹಾತ್ಮಾಗಾಂಧಿ, ಕೆಲವರು ಮಹಾಕವಿ ಟಾಗೋರರಾಗುವರು—ಟಾಗೋರರನ್ನು ಅವರ ತಾಯಿ ಮಹಾಕವಿಯಾಗಿ ಮಾಡಿದರು."

ಆಗ ಅವನು ಓಡುತ್ತ ಓಡುತ್ತ ತನ್ನ ತಾಯಿಯ ಹತ್ತಿರ ಹೋದ. ತನ್ನ ಎಲ್ಲ ಪಾರಿತೋಷಕಗಳನ್ನು ತಾಯಿಯ ಉಡಿಯಲ್ಲಿ ಹಾಕಿದ. ಮತ್ತೆ ತನ್ನ ತೋಳುಗಳನ್ನು ತಾನೇ ತಾಯಿಯ ಕುತ್ತಿಗೆಯ ಸುತ್ತಲೂ ತೊಡರಿಸಿದನು. ಅವನು ಭಾರಿ ಮುದ್ದಿನಿಂದ ಅಂದ, "ಅಮ್ಮಾ, ಅಮ್ಮಾ, ನನ್ನ ಟಾಗೋರನಾಗಿ ಮಾಡಮ್ಮ!"

"ಏನಂದೆ?" ಅವನ ತಾಯಿಗೆ ಅರ್ಥವಾಗಲಿಲ್ಲ.

"ನನ್ನನ್ನು ಟಾಗೋರನಾಗಿ ಮಾಡಮ್ಮ" ಆತ ಮತ್ತೆ ಬಿನ್ನವಿಸಿಕೊಂಡ.

"ನವಿಲು"? ಅವನ ತಾಯಿ ಪೂರ್ತಿ ಅರ್ಥವಾದಂತೆ ಮಾತಾಡಿದಳು "ನಿನ್ನ ವೈರಿಯೂ ನವಿಲಾಗುವುದು ಬೇಡ, ಮಗಾ!"

ಅವನಿಗೆ ತಾಯಿ ಮೇಲೆ ಬಹಳ ಸಿಟ್ಟು ಬಂದಿತು.

ಅವನಿಗೆ ತನ್ನ ಕೋಲ್ದಂಡದ ಮೇಷ್ಟ್ರ ಮೇಲೆಯೂ ಸಿಟ್ಟು ಬಂತು. ಆತ ಅವನಿಗೆ ನವಿಲಶಿಕ್ಷೆ ಕೊಡುತ್ತಿದ್ದ—ಆತ ಕುತ್ತಿಗೆಯ ಹಿಂದೆ ಕೈಕಾಲು ಹೆಡಮುರಿಗೆ ಕಟ್ಟಿಸುತ್ತಿದ್ದ. "ನೋಡಿ ಈ ದಂಡ ಪೀರ. ಹಾದಿಗೆಟ್ಟ ಕಿಡಿಗೇಡಿ ಪೋರರೇ!"

ಹೀಗೆ ನವಿಲಾಗಿ ಆ ಪೋರರು ತಾಸುಗಟ್ಟಲೆ ಬಿಸಿಲಲ್ಲಿ ಕಾಯುತ್ತ ನಿಲ್ಲುತ್ತಿದ್ದರು.

ಮತ್ತು ಅವನಿಗೆ ಆ ದಿನ ನೆನಪಾಯಿತು. ಅಂದು ಅವನ ತಂದೆ ಒಮ್ಮಿಂದೊಮ್ಮೆ ಅರ್ಧ ದೇಹಕ್ಕೆ ವಾತವಿಕಾರವಾಗಿ ಬಿದ್ದಿದ್ದ. ಮತ್ತು ಅವನು ಎಂಟನೆಯ ವರ್ಗ ಬಿಟ್ಟು ತಂದೆಯ ಕೆಲಸ ನೋಡಿಕೊಳ್ಳಬೇಕಾಯಿತು.

ಬದರೂವನ್ನು ಹತ್ತನೆಯ ತರಗತಿಯವರೆಗಾದರೂ ಓದಿಸಿರೆಂದು ಕವಿಮೇಷ್ಟ್ರು ಬಂದು ಅವನ ತಂದೆಯನ್ನು ಕೇಳಿಕೊಂಡರು. ಆದರೆ ತಂದೆ ಒಂದೇ ಉತ್ತರದಿಂದ ಮೇಷ್ಟ್ರನ್ನು ನಿರುತ್ತರನಾಗಿ ಮಾಡಿದ. ಅವನ ತಂದೆ ಅಂದಿದ್ದ, "ಮೇಷ್ಟ್ರೇ, ಎಲ್ಲಿ ರೊಟ್ಟಿಗೂ ಚಿಂತೆಯೋ, ಅಲ್ಲಿ ಓದಿನ ಬಗೆಗೆ ವಿಚಾರ ಮಾಡಲು ಆಗುವದೇ ಇಲ್ಲ. ಮೊದಲು ಹೊಟ್ಟೆ ಆಮೇಲೆ ಪಾಠ."

ಮೇಷ್ಟ್ರು ನಿರಾಶರಾಗಿ ಅವನ ಮನೆಯಿಂದ ಹಿಂದಿರುಗಿದ್ದರು. ಆ ದಿನ ಕುಂಬಾರ ಹುಡುಗನಾದ ಬದರೂವಿನ ಒಳಗಿನ ಟಾಗೋರ ಅರ್ಧ ಸತ್ತುಹೋಗಿದ್ದ. ಮತ್ತು

ಈಹೊತ್ತು ಒಬ್ಬ ಧುರೀಣ ಊರಿನ ಹೊಸ ಶಾಲೆಯ ಶಂಕುಸ್ಥಾಪನೆಗಾಗಿ ಬರುವವನಿದ್ದ.

ಅವನು ಎದ್ದು ಕುಳಿತ. ಅವನ ಕತ್ತೆಗಳು ಈಗಲೂ ಚಕ್ಕಂದವಾಗಿ ಮೇಯುತ್ತಿದ್ದುವು. ಈಗಲೂ ಹೊಗೆ ನಳಿಕೆಗಳಿಂದ ಹೊಗೆ ಹೊರಡುತ್ತಿತ್ತು. ದೂರದಿಂದ ಸೈಕಲ್ ಏರಿ ಬರುತ್ತಿದ್ದ ಮುನ್ಶೀ ಕಂಡು ಬಂದ. ಅವನಿಗೆ ಅನಿಸಿತು, ಆತ ಬಂದೊಡನೆ ಆತನನ್ನು ಕೆಳಗೆ ನೂಕಿ ಕೆಡುಹಬೇಕು.

ಆದರೆ ಅವನ ಒಳಗಿನ ಹೀನತೆಯ ಭಾವನೆಯೋ ಅಥವಾ ಮಾನವತೆಯೋ ಹಾಗೆ ಮಾಡದಂತೆ ಅವನನ್ನು ತಡೆಯಿತು. ಆತ ಎದ್ದು ತನ್ನ ಮೈಯ ಧೂಳಿ ಉಡುಗಿದ. ಕೈಮೋರೆ ತೊಳೆದುಕೊಂಡ ಮತ್ತು ಸುಮ್ಮನೆ ಹೊರಡಲು ಸಿದ್ಧನಾದ. ನೆತ್ತಿಯ ಮೇಲೆ ಸೂರ್ಯ ಬೆಂಕಿಯ ಮಳೆಗರೆಯುತ್ತಿದ್ದ. ಅವನಿಗೆ ತನ್ನ ಬರಗಾಲಿನ ಮೇಲೆ ಮರುಕ ಬಂದಿತು. ನಡೆದು ನಡೆದು ಅವನ ಅಂಗಾಲು ಅಗಲವಾಗಿ ಹೋಗಿದ್ದುವು. ಶತಮಾನಗಳಿಂದಲೂ ಕಾಲ್ನಡಿಗೆಯಿಂದಲೇ ನಡೆದು ಬಂದಂತೆ ಅವನ ಕಾಲಿನ ಊದಿಹೋದ ನರಗಳು ಮಿಂಚಿನ ತಂತಿಗಳಂತೆ ಹಿಳಿಲಾಗಿಬಿಟ್ಟಿದ್ದುವು.

“ನಡೆ ಶೇರೋ ನಡೆ! ನೀಲೆ, ಹಾಳಾದ್ದೆ. ಇನ್ನು ರಸ್ತೆಯಲ್ಲಿ ಮತ್ತೆ ಬೀಳಬಾರದು. ನನ್ನ ಮರ್ಯಾದೆಗೇಡುಮಾಡಿಸಿಬಿಟ್ಟೀ. ಮನೆಗೆ ಹೋದಮೇಲೆ ನಿನಗೆ ಹೊಟ್ಟೆತುಂಬ ಮೇವು ಹಾಕುತ್ತೇನೆ.”

ನೀಲಾ ಕತ್ತೆ ಇತರ ಕತ್ತೆಗಳಿಗಿಂತ ದುರ್ಬಲವಿತ್ತು. ಅದು ರಸ್ತೆಯಲ್ಲಿ ಒಂದೆರಡು ಸಲ ಇಟ್ಟಿಗೆ ತುಂಬಿದ ಹೊರೆ ತಪ್ಪದೆ ಕೆಡುಹಿಬಿಡುತ್ತಿತ್ತು. ಈಗ ಅದು ಹುಲ್ಲುತಿಂದು, ಹಾರುತ್ತ ಜಿಗಿಯುತ್ತ ಎಲ್ಲಕ್ಕೂ ಮುಂದೆ ಓಡಿತು.

ಅವನು ರುಮಾಲಿನ ತುದಿಗೆ ಕಟ್ಟಿದ್ದ ಬೆಲ್ಲದ ಚೂರನ್ನು ತೆಗೆದು ಸ್ವಲ್ಪತಿಂದು ಮತ್ತೆ ಕಟ್ಟಿ ಇಟ್ಟ.

“ಊರು ಸೇರಿದ ಮೇಲೆ ಇದನ್ನು ತಿನ್ನುವೆ. ಮತ್ತೆ ಹೊಟ್ಟೆತುಂಬ ನೀರು ಕುಡಿಯುವೆ. ಆಮೇಲೆ ಬಾವಿಯ ಕಟ್ಟೆಯ ಮೇಲೆ ಕೂತು ಧುರೀಣನ ಭಾಷಣ ಕೇಳುವೆನು”—ಆತ ಯೋಚಿಸಿದ.

“ಅಮ್ಮಾ, ನಿನ್ನ ಈ ರಾಜವಸ್ತ್ರಗಳನ್ನೂ ರತ್ನಾಭರಣಗಳನ್ನೂ ತೊಟ್ಟುಕೊಂಡು ನಾನು ಮಾಡುವುದೇನು? ನೀನು ನನ್ನನ್ನು ಈ ವ್ಯರ್ಥದ ಬಂಧನಗಳಲ್ಲಿ ಬಂಧಿಸಬೇಡ. ನಾನು ಪ್ರಪಂಚದ ಜಾತ್ರೆಯ ಜೀವನದಾಯಿಯಾದ ಧೂಳಿಯಲ್ಲಿ ಆಡಲು ಬಯಸುತ್ತೇನೆ.”

ಅವನಿಗೆ ಟಾಗೋರರ ಈ ಪಂಕ್ತಿಗಳ ನೆನಪಾಯಿತು. ಅವನ್ನು ಕವಿಮೇಷ್ಟ್ರು ಶಾಲೆಯ ಗೋಡೆಯ ಮೇಲೆ ಬರೆದಿದ್ದರು.

"ನಾನಂತೂ ಧೂಳಿಯಲ್ಲಿಯೇ ಹುಟ್ಟಿದೆ, ಆಡಿದೆ, ಬೆಳೆದೆ. ಆದರೆ ಟಾಗೋರ ನಾಗದೇ ಹೋದೆ.''—ಅವನು ಗಹಗಹಿಸಿ ದೊಡ್ಡದನಿಯಲ್ಲಿ ನಗಲು ಆರಂಭಿಸಿದ.

ಬಿಸಿಮಳಲಲ್ಲಿ ಅವನ ಕಾಲು ಸುಡಲು ಹತ್ತಿದವು. ಸೆಕೆಹಬ್ಬಿತು—ಯಾರೋ ದೈತ್ಯನು ಎಲ್ಲ ಹವೆಯನ್ನೇ ಕುಡಿದು ಬಿಟ್ಟಂತೆ.

ಅವನಿಗೆ ತನ್ನ ತಾಯಿಯ ನೆನವು ಬಂತು. ಆಕೆ ಸೆಕೆ ವಿಪರೀತವಾದಾಗ ಕಚ್ಚಾ ಮಣ್ಣಿನ ಮೆತ್ತಿನ ಮೇಲೆ ಅಡ್ಡಾಗಿ ಏಳೂ ಪುರಗಳ ಹೆಸರು ಹೇಳುತ್ತಿದ್ದಳು . . .

"ಮಹೇರಪುರ, ಅಧಮಪುರ, . . . ಜೈನಪುರ" ಆದರೆ ಹೀಗೆ ಮಾಡಿದ್ದರಿಂದ ಹವೆ ಎಂದಿಗೂ ಮತ್ತೆ ಆಡಿದ್ದಿಲ್ಲ.

"ಚಲಿಸು, ವೈರಿಣೀ ಚಲಿಸು !" ಆತ ಹವೆಗೆ ಆವ್ಹಾನಿಸಿ ಕೂಗಿದ. ಸೂರ್ಯನ ಕೆಂಪುಗೋಲ ಉರಿಯುತ್ತಿತ್ತು.

"ಓಯ್ ಸೂರ್ಯ, ನೀನೂ ಇಂದೇ ಹೀಗೆ ಹೊಳೆಯಬೇಕಿತ್ತೇ ? ಈ ಹೊತ್ತು ನನ್ನ ಕಾಲು ಬರಿದಾಗಿವೆಯಂತಲೇ ? ತಾನೂ ಉರಿಯುವಿ. ಜೊತೆಗೆ ಬೇರೆಯವರನ್ನೂ ಉರಿಸುವಿ !" ಆತ ಸೂರ್ಯನಲ್ಲಿ ದೂರಿಕೊಂಡ.

"ಓಯ್, ಮೋಡಗಳೇ, ತುಪ್ಪದ ಗೆಳೆಯರೇ, ಎಲ್ಲಿ ಹೋಗಿ ಸತ್ತಿರಿ ನೀವು ?" ಆತ ಹಲ್ಲುಕಿರಿದು ಕೇಳಿದ.

ದೂರದಿಂದ ಒಂದು ಪುಟ್ಟ ಮೋಡ ಬರುತ್ತಿರುವಂತೆ ಕಂಡಿತು. ಆತ ಖುಶಿಯಾದ. ಆದರೆ ಆ ಮೇಲೆ ಆ ಮೋಡ ಎಲ್ಲಿ ಮಾಯವಾಯಿತೋ ! ಬಡವನೊಬ್ಬ ಅಭಾವಗಳಿಂದಾಗಿ ನಾಶವಾಗುತ್ತಾನೆ. ಆದರೆ ನಲಿದು ನೆಲಸಿದ ಪ್ರಪಂಚಕ್ಕೆ ಅದರ ಪತ್ತೆಯೇ ಇರುವದಿಲ್ಲ. ಅದೇರೀತಿ ಈ ಪುಟ್ಟಮೋಡದ ಸಾವು ಲೆಕ್ಕಿಸದೆ ನಿಶ್ಚಿಂತೆಯಿಂದ ಸೂರ್ಯ ಉರಿಯುತ್ತಿದ್ದ. ಕತ್ತೆಗಳ ಗತಿ ಮಂದವಾಯಿತು.

"ಓಯ್, ನೀವೆಲ್ಲ ಹಗೆಯಾಗಿಬಿಟ್ಟಿದ್ದೀರಿ. ನನ್ನ ಜೀವಕ್ಕೆ !" ಸಿಟ್ಟಿನ ಭರದಲ್ಲಿ ಆತನು ಕತ್ತೆಗಳನ್ನು ಬಡಿಯಲು ಶುರುಮಾಡಿದನು. ಕತ್ತೆಗಳು ಒದರುತ್ತ, ಲತ್ತೆ ಝಾಡಿಸುತ್ತ ಓಡಹತ್ತಿದವು. ಒಂದು ಕತ್ತೆಯ ಬೆನ್ನೇರಿ ಕುಳಿತುಕೊಳ್ಳಬೇಕೆಂದು ಅವನಿಗೆ ಆಸೆಯಾಯಿತು. ಆದರೆ ತನ್ನ ಒಜ್ಜೆಯಡಿಗೆ ಕತ್ತೆ ಕುಸಿದು ಕೂತು ಬಿಟ್ಟರೆ—ಎಂಬ ಹೆದರಿಕೆಯಿಂದ ಅವನು ನಡೆಯಹತ್ತಿದ.

ಇದುರಿಗೆ ಆಲದ ಮರವಿದ್ದ ಬಾವಿ ಬಂದಿತು. ಅವನು ಖುಶಿಯಾದ. ಆತ ಹೊಟ್ಟೆತುಂಬ ನೀರು ಕುಡಿದ. ರುಮಾಲಿನ ತುದಿಯಲ್ಲಿ ಕಟ್ಟಿದ ಬೆಲ್ಲವನ್ನು ಆಸೆಬುರುಕ ದೃಷ್ಟಿಯಿಂದ ನೋಡಿದ. "ಇದನ್ನು ಇನ್ನು ಊರು ಸೇರಿದ ಮೇಲೆಯೇ ತಿನ್ನುವೆ. ಜತೆಗೆ ಧುರೀಣನ ಮಾತನ್ನೂ ಕೇಳುವೆ."

ಅವನು ಆಲದಮರದ ಕೆಳಗೆ ನಿಂತು ಆಲೋಚಿಸತೊಡಗಿದ, "ಅಲ್ಲ, ಧುರೀಣ ಬಂದು ತಿರುಗಿ ಹೋಗಿಯೂ ಇದ್ದರೆ ?" ಹೀಗೆ ಯೋಚಿಸಿ ಆತ ಮತ್ತೆ ಹೊರಟ.

ನೀರಿನಲ್ಲಿ ಒದ್ದೆಯಾದ ಅವನ ಪಾದ ಕೆಲ ನಿಮಿಷಗಳಲ್ಲಿಯೇ ಒಣಗಿಬಿಟ್ಟವು. ಬಿಸಿ ಬಿಸಿ ಉಸುಕು ಅವನ ಅಂಗಾಲನ್ನು ಸುಡಹತ್ತಿತು. ಆಗ ಆತ ಒಂದು ನೆಗೆತ ಜಿಗಿದ. ಅವನಿಗೆ ಒಂದು ಉಪಾಯ ತೋಚಿತ್ತು. ಓಡಿ ಓಡಿ ಅವನು ಒಂದು ಮುತ್ತುಗದ ಮರದ ಹತ್ತಿರ ಹೋದ. ಅದರ ಎಲೆಗಳನ್ನು ಕಿತ್ತ. ರುಮಾಲಿನ ಒಂದು ಪಟ್ಟಿ ಹರಿದುಕೊಂಡು ಅದರಿಂದ ಆ ಎಲೆಗಳನ್ನು ತನ್ನ ಅಂಗಾಲಿಗೆ ಕಟ್ಟಿಕೊಂಡ.

ಈಗ ಅವನಿಗೆ ಉಸುಕಿನ ಕಾವು ಕಡಿಮೆ ಅನಿಸಹತ್ತಿತು. ಅವ ಖುಶಿಯಾದ. ಎಡಗೈಯ ಅಂಗೈಯನ್ನು ಬೋರಲುಮಾಡಿ ತುಟಿಗಳ ಮೇಲೆ ಇಟ್ಟು ಆತ ಕೇಕೆ ಹಾಕಿದ. ಇಡಿಯ ಬಯಲು ಪ್ರತಿಧ್ವನಿಕೊಟ್ಟಿತು. ಇನ್ನೂ ಅವನಿಗೆ ಸಮಾಧಾನ ಎದ್ದಿಲ್ಲ. ಅವನು ಮತ್ತೆ ನುಡಿಯನ್ನು ಹಾಡಿದ:

"ಕೂಗಿ ಕರೆ ಕುರಿಕಾಯುವ ಪೋರ
ಹಾಲು ಕುಡಿದು ಹೋಗೆಲೆ ದೂರ."

ಇದುರಿಗೆ ಊರು ಕಾಣುತ್ತಿತ್ತು. ಅವನು ಹಿಗ್ಗಿ ಊರಿನಲ್ಲಿ ಕಾಲಿಟ್ಟ. ಶಾಲೆಯ ಇದುರಿಗೆ ಬಾಳೆ ಮತ್ತು ಮಾವಿನ ಎಲೆಗಳಿಂದ ಸಜ್ಜಾದ ಸ್ವಾಗತ ತೋರಣ ಕಂಗೊಳಿಸುತ್ತಿತ್ತು. ಆಚೆಈಚೆ ಬಣ್ಣಬಣ್ಣದ ಟೊಂಗೆಗಳು ತೂಗುತ್ತಿದ್ದವು. ನಾಲ್ಕೂ ಕಡೆಗೆ ಗಲಾಟೆ ಇತ್ತು. ಶಾಲೆಯ ಮೇಷ್ಟ್ರು ಎಲ್ಲ ಓಡಾಡಿ ಕೆಲಸಮಾಡುತ್ತಿದ್ದರು.

ಅವನು ಖುಶಿಯಿಂದ ಮತ್ತನಾಗಿ ನೋಡುತ್ತ ನಿಂತ.

ಅವನಿಗೆ ತಿರುಗಿ ತನ್ನ ಚಿಕ್ಕಂದಿನ ನೆನಪಾಯಿತು.

ಆ ಹಳೆಯ ಕವಿಯ ನೆನಪಾಯಿತು—ಆತ ಊರುಊರು ಅಲೆದು ಜಾನಪದ ಹಾಡುಗಳನ್ನು ಕಲೆ ಹಾಕುತ್ತಿದ್ದ. ಅವನಿಗೆ ಈತ ನೂರಾರು ಹಾಡುಗಳನ್ನು ಕೇಳಿಸಿದ್ದ. ಆತ ತಿರುಗಿಬರುವ ಮಾತುಕೊಟ್ಟು ತಿರುಗಿ ಬಂದಿದ್ದೇ ಇಲ್ಲ.

ಆಹ! ಒಂದೊಮ್ಮೆ ಆ ಹಳಬ ಮತ್ತೆ ಸಿಕ್ಕರೆ! ಅವನಿಗೆ ತನ್ನ ಹೊಸ ಕವಿತೆಗಳನ್ನು ಅವಶ್ಯ ಓದಿ ಕೇಳಿಸಬಹುದು. ಈಗ ಅವನು ಪ್ರತಿಯೊಂದು ವಿಷಯ ಕುರಿತು ಒಳ್ಳೆಯ ಕವಿತೆ ಮಾಡಬಲ್ಲ.

ಆದರೆ ಆ ಹಳೆಯ ಕವಿ ಬಹುಶಃ ಅವನನ್ನು ಸದಾಕಾಲವೂ ಧೂಳಿಯಲ್ಲಿ ಉಳಿಯುವ ಒಬ್ಬ ಹರಗೇಡಿ ಕುಂಬಾರನೆಂದೇ ತಿಳಿಯುತ್ತಾನೆ. ಆದ್ದರಿಂದಲೇ ಆತ ದೂರ ಕೂತು ತನ್ನ ಕವಿತೆಗಳನ್ನು ಕವಿತೆಗಳೆಂದು ಒಪ್ಪುವದಿಲ್ಲ. ಏಕೆಂದರೆ ತಾನು ಯಾವಾಗಲೂ ಧೂಳು ಬಳಿದುಕೊಂಡಿರುತ್ತೇನೆ—ಯಾತರಲ್ಲಿ ಟಾಗೋರರು ಆಡಲಿಕ್ಕೆ ತವಕಪಡುತ್ತ ಚಟಪಟಿಸುತ್ತ ತಳಮಳದಲ್ಲಿ ಇರುತ್ತಿದ್ದರೋ ಅದೇ ಧೂಳಿನಲ್ಲಿ ಅವನು ಬದುಕಿದ್ದ, ಬಾಳುತ್ತಿದ್ದ, ಬೆಳೆಯುತ್ತಿದ್ದ. ಅಲ್ಲಿ ನಿಂತಲ್ಲಿಯೇ ಆತ ಎಲ್ಲಿ ಮಾಯವಾಗಿ ಬಿಟ್ಟಿದ್ದನೋ . . . ಅವನ ತುಟಿ, ಅವನ ಕಣ್ಣು, ಅವನ ಕೈಕಾಲು . . . ಅವನೇ ಸ್ವಯಂ ಒಂದು ಗೀತವಾಗಿ ಎರಕಹೊಯ್ದಂತೆ ಇತ್ತು.

ಅಲ್ಲಿ ಒಂದು ಗೀತೆ ಕಂಪಿಸುತ್ತಿತ್ತು. ಅದನ್ನು ಯಾರೂ ಎಂದೂ ತಮ್ಮ ತುಟಿಯಿಂದ ಮುಟ್ಟಿರಲಿಕ್ಕಿಲ್ಲ. ಆಗ ಆತ ಕಂಪಿಸಿದಂತೆ ಆದ.

ಒಂದು ಗೀತೆ ಚೆಲ್ಲಿ ಹಬ್ಬಿಹೋಯಿತು. "ಒಂದು ಏಟು, ಎರಡೇಟು. ಒಂದು ಗುದ್ದು, ಇನ್ನೂ ಒಂದು ಗುದ್ದು."

"ಎಲಾ, ಹಾಳಾದವನೆ, ಕುಂಬಾರ ಮಗನೇ, ನೀನಿಲ್ಲಿ ತಮಾಶೆ ನೋಡುತ್ತ ನಿಂತಿದ್ದಿಯಾ? ನಿನ್ನ ಕತ್ತೆಗಳು ನನ್ನ ಗದ್ದೆ ಸತ್ಯಾನಾಶಮಾಡಿಬಿಟ್ಟವು. ನಾಯಿ ಜಾತಿಯ . . ."

ಒಬ್ಬ ಹೆಂಡಕುಡುಕ ಹುಂಬ ಜಾಟ ಕೆಂಪುಕೆಂಪು ಕಣ್ಣು ಕೆಕ್ಕರಿಸಿ ಅವನಿಗೆ ಬಯ್ಯುತ್ತಿದ್ದ. ಅವನು ಅಲ್ಲಿ ಕಂಗೆಟ್ಟು ನಿಂತುಬಿಟ್ಟಿದ್ದ.

ಜಾಟನು ಹತ್ತಿರವೇ ನಿಂತ ಎತ್ತಿನ ಬಂಡಿಯೊಳಗಿಂದ ಬೆತ್ತ ತೆಗೆದುಕೊಂಡು ಅವನ ಕಡೆಗೆ ನುಗ್ಗಿದ.

ಅವನು ಗೊಡ್ಡುತನದ ಭರದಲ್ಲಿ ಕತ್ತೆಗಳ ಮೇಲೆ ಪೆಟ್ಟಿನ ಸುರಿಮಳೆಗರೆಯುತ್ತ ಧೂಳಿಯಲ್ಲಿ ಒಂದು ಹನಿಯಂತೆ ಮುದುಡಿ ಹೋದ . . .

ರುಮಾಲಿನ ತುದಿಗೆ ಕಟ್ಟಿದ ಬೆಲ್ಲದ ಚೂರು ಅಲ್ಲಾಡುತ್ತ ಅವನ ಹೆಗಲಿಗೆ ನೋವು ಉಂಟುಮಾಡುತ್ತಿತ್ತು.

## ಲೇಖಕರ ಪರಿಚಯ

### ನಾನಕ ಸಿಂಗ್

ಜನನ : 1897

ಉದ್ಯಮ : ಲೇಖನ.

ಕಥಾಸಂಗ್ರಹ : ಹಂಝುಆಂ ದೇ ಹಾರ್, ಸದ್ಧರಾದೆ ಹಾರ್ ಮಿದ್ಧಿಹೊಯೆ ಫುಲ್, ಚಂಡಿಯಾಂ ಭಾವಾಂ, ಸುನಹರಿ ಜಿಲ್ದ, ಸುಫನಿಯಾಂ ದಿ ಕಬರ್.

ವಿಳಾಸ : ಪ್ರೀತ್‌ನಗರ್, ಅಮೃತಸರ.

ನಾನಕಸಿಂಗ್ ಪಂಜಾಬಿಯ ಶಿರೋಧಾರ್ಯ ಕತೆಗಾರರು. ಅವರ ಅಭಿರುಚಿ ಹೆಚ್ಚಾಗಿ ಕಾದಂಬರಿ ಬರೆಯುವದರತ್ತ. ಪಟ್ಟಣದಲ್ಲಿನ ಮಧ್ಯಮವರ್ಗದವರ ಬಡತನದ ಕರುಣಾಜನಕ ಚಿತ್ರಗಳನ್ನು ಸಾದರಪಡಿಸುವದು ಅವರ ವಿಶೇಷತೆ. ಘಟನೆಗಳ ಸಾಂದ್ರ ವಿನ್ಯಾಸ ಇವರ ಕಥನಶಿಲ್ಪದ ವಿಶೇಷಗುಣ. ಕಥೆಗಳಲ್ಲಿ ಘಟನೆಗಳ ನೆಯ್ಗೆ ತುಸು ಶಿಥಿಲ ವಾಗುತ್ತದೆ. ಇದಕ್ಕಾಗಿಯೇ ನಾನಕಸಿಂಗರು ಕಥೆಗಳನ್ನು ಬರೆದದ್ದು ಕಡಿಮೆ. 'ಶಾಶಕೀಆದತ್' (ಇಸ್ಪೀಟಿನ ಚಟ) ಶೀರ್ಷಿಕೆಯ ಕಥೆ ಮಧ್ಯಮವರ್ಗದ ಚಾರಿತ್ರ್ಯದ ವ್ಯಂಗವನ್ನು ಸಮಗ್ರ ಕಥಾ ವಿನ್ಯಾಸದ ಮಾಧ್ಯಮದಿಂದಲೇ ವಿವರಿಸುತ್ತದೆ.

### ಗುರುಬಕ್ಷ ಸಿಂಗ್ ಪ್ರೀತಲಡೀ

ಜನನ : 1895

ಶಿಕ್ಷಣ : B.Sc., C.E. (ಮಿಚಿಗನ್ U.S.A.)

ಉದ್ಯಮ : ಪತ್ರಿಕೋದ್ಯಮ.

ಕಥಾಸಂಗ್ರಹ : ಪ್ರೀತಕಹಾನಿಯಾ, ನಾಗ್ ಪ್ರೀತ ದಾ ಜಾದೂ, ಅನೋಖೆ ತೆ ಇಕಲ್ಲೆ, ವೀನಾ ವಿನೋದ, ಶಬನಮ್ ಭಾಭೀ ಮೈನಾ ತೆ ಹೋರ್ ಕಹಾನಿಯಾ, ಆಖರೀ ಸಬಕ್ ತೆ ಹೋರ್ ಕಹಾನಿಯಾ, ಪ್ರೀತಾಂ ದೆ ಪಹರೆದಾರ್. ಇಶ್ಕ್ ಜಿನಾಂ ದೀ ಹಡ್ಡೀ ರಚ್ಯಾ, ಜಿಂದಗೀ ವಾರಸಹ್ಕೆ.

ವಿಳಾಸ : ಪ್ರೀತನಗರ್, ಅಮೃತಸರ.

ಗುರುಭಕ್ಷಸಿಂಗ್ ಪಟ್ಟಣಿಗ ಸಂವೇದನೆಯ ಕಲಾವಿದ. ಇವರು ಮೊತ್ತಮೊದಲು ಪಂಜಾಬೀಕಥೆಗೆ ಖಚಿತವಾದ ಜೀವನ ದರ್ಶನ ನೀಡಲು ಪ್ರಯತ್ನ ಮಾಡಿದ್ದಾರೆ. ಬಹಳಸಲ ಇವರ ಕಥೆ ದಾರ್ಶನಿಕ ವಿಚಾರಗಳ ಚಿತ್ರಣ ಮಾಡುತ್ತದೆ. ಮತ್ತು

ಒಮ್ಮೊಮ್ಮೆ ದಾರ್ಶನಿಕ ವಿಚಾರಕ್ಕೆ ಗಹನತೆಯನ್ನು ಇವರು ನೀಡುತ್ತಾರೆ. 'ಸಹಜ ಪ್ರೀತಿ'ಯ ಅಧ್ಯಾತ್ಮಿಕ ದರ್ಶನದಿಂದ ಮಾರ್ಕ್ಸವಾದದ ಭೌತಿಕವಾದಿ ದರ್ಶನದವರೆಗೂ ಇವರ ಗತಿ ಇದೆ. ಒಟ್ಟಾರೆ ಇವರ ಭಾವಾತ್ಮಕ ಒಲವು ಸಹಜ ಪ್ರೀತಿಯ ಕಡೆಗೆ ಇದೆ. ಪರಿಣಾಮತಃ ಇವರ ಲೇಖನಗಳಂತೆ ಕಥೆಗಳಲ್ಲಿಯೂ ಒಮ್ಮುಖ್ಯಯ ಚಿತ್ರಣವಿದೆ. ಅದರಲ್ಲಿ ದ್ವಂದ್ವ ಅಥವಾ ನಾಟಕೀಯ ವಿರೋಧಾಭಾಸಗಳಿಗೆ ತಮ್ಮ ಸ್ವರವೇರಿಸಲಿಕ್ಕೆ ಇಂಬು ಸಿಕ್ಕಿಲ್ಲ. ಇವರ ಬೌದ್ಧಿಕ ಆಸಕ್ತಿ ಮಾರ್ಕ್ಸವಾದ ದತ್ತ ಇದೆ. ಪ್ರೀತಿ ಮತ್ತು ದ್ವಂದ್ವ ಕಲಾತ್ಮಕ ಬಿಗಿತದಲ್ಲಿ ಎಂದಾದರೊಮ್ಮೆಯೆ ವ್ಯಕ್ತವಾಗುತ್ತವೆ.

"ಭಾಭೀ ಮೈನಾ" (ಮೈನಾ ಅತ್ತಿಗೆ) ದಲ್ಲಿ ಸಹಜ ಪ್ರೀತಿ ಒಬ್ಬ ಹುಡುಗನ ಮಾಧ್ಯಮದೊಳಗಿಂದ ಸಾದರಪಡಿಸಲಾಗಿದೆ. ಪ್ರೌಢವಯಸ್ಸಿನ ಪ್ರೇಮವನ್ನು ಚಿಕ್ಕಂದಿನ ಸಂಬಂಧದ ಮುಖಾಂತರ ಚಿತ್ರಣ ಮಾಡುವದು ಗುರುಭಕ್ಷಸಿಂಗರ ಕಲೆಯ ವಿಶೇಷ ಟೆಕ್‌ನಿಕ್. ಕೆಲವು ಕಥೆಗಳಲ್ಲಿ ಈ ಟೆಕ್‌ನಿಕ್‌ನ ಮುಖಾಂತರ ಪ್ರೇಮಕ್ಕೆ ಪವಿತ್ರವಾಗಿ ಉಳಿಯುವ ಸಂಧಿ ಸಿಗುತ್ತದೆ.

## ಸಂತ್‌ಸಿಂಗ್ ಸೇಖೋಂ

ಜನನ : 1908

ಶಿಕ್ಷಣ : M.A. (ಇಂಗ್ಲೀಷ ಮತ್ತು ಅರ್ಥಶಾಸ್ತ್ರ)

ಉದ್ಯಮ : ಅಧ್ಯಾಪನ

ಕಥಾಸಂಗ್ರಹ : ಸಮಾಚಾರ, ಕಾಮೆ ತೆ ಯೋದ್ಧೆ, ಬಾರಾದರೀ, ಅಧೀವಾಟ ತೀಜಾಪಹರ್

ವಿಳಾಸ : ಪ್ರಿನ್ಸಿಪಾಲ್, ಗುರುಗೋವಿಂದಸಿಂಗ್ ರಿಪಬ್ಲಿಕ್ ಕಾಲೇಜ, ಜಂಡಿಯಾಲಾ, ಜಲಂಧರ್ ಜಿಲ್ಲೆ.

ಸಂತಸಿಂಗ್ ಸೇಖೋಂ ಪಂಜಾಬೀಭಾಷೆಯ ಬಹುಮುಖಿ ಸಾಹಿತ್ಯಕಾರರು. ಇವರು ಹೆಚ್ಚುಕಡಿಮೆ ಎಲ್ಲ ಸಾಹಿತ್ಯ-ಪ್ರಕಾರಗಳನ್ನೂ ಪ್ರಯೋಗಿಸಿದ್ದಾರೆ. ಒಂದು ಕಾದಂಬರಿ, ಒಂದು ಕಾವ್ಯಸಂಗ್ರಹ, ಹಲವು ನಾಟಕಗಳು, ಏಕಾಂಕ ಸಂಗ್ರಹ, ಮತ್ತು ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ. ಇವರಿಗೆ ಎಲ್ಲಕ್ಕೂ ಹೆಚ್ಚಿನ ಪ್ರಸಿದ್ಧಿ ದೊರೆತದ್ದು ವಿಮರ್ಶಾತ್ಮಕ ಪ್ರಬಂಧಗಳಿಂದ. ಪಂಜಾಬಿಯಲ್ಲಿ ಸಾಹಿತ್ಯದ ಸಮಾಜಶಾಸ್ತ್ರೀಯ ವ್ಯಾಖ್ಯೆಯ ಅಡಿಗಲ್ಲು ಸೇಖೋಂ ಅವರೇ ಇಟ್ಟರು. ಇವರ ಕೆಲವು ಕಥೆಗಳು ಭಾವುಕವಾಗದೆ, ಭಾವನಾತ್ಮಕ ವಾತಾವರಣ ವನ್ನು ಸೃಷ್ಟಿಸುತ್ತವೆ. 'ಪೇಮೀಕೆ ಬಚ್ಚೆ' ಪೇಮಿಯ ಮಕ್ಕಳು ಇಂಥವುಗಳಲ್ಲಿ ಒಂದು ರಚನೆ.

## ಗುರುಮುಖಸಿಂಗ್ ಮುಸಾಫಿರ್

ಜನನ : 1899

ಶಿಕ್ಷಣ : ಮ್ಯಾಟ್ರಿಕ್ಯುಲೇಶನ್, ಜ್ಞಾನೀ.

ಕಥಾಸಂಗ್ರಹ : ಸಸ್ತಾ ತಮಾಶಾ, ಸಬ್ ಅಚ್ಛಾ, ವಖರಿ ದುನಿಯಾ, ಆಲನೇ ದೆ ಬೋಟ್ ಗುಟಾರ, ಕಂದಾ, ಬೋಲ್ ಪಯಿಯಾಂ.

ವಿಳಾಸ : 21, ಫಿರೋಜಶಾಹ ರೋಡ, ನ್ಯೂ ದಿಲ್ಲಿ.

ಗುರುಮುಖ್‌ಸಿಂಗ್ ಮುಸಾಫಿರ್ ಪಂಜಾಬದ ರಾಜಕೀಯ ಧುರೀಣರೂ ಅಹುದು. ಸಾಹಿತ್ಯಿಕರೂ ಅಹುದು. ಅವರು ಕವಿಗಳೂ ಆಗಿದ್ದಾರೆ. ನಾಟಕಕಾರರೂ ಆಗಿದ್ದಾರೆ. ತಮ್ಮ ಜೀವನಕ್ಕೆ ಸಂಬಂಧಿಸಿದ ಕೆಲವು ಕಥಾಂಶಗಳನ್ನೂ ಅವರು ಬರೆದಿದ್ದಾರೆ. ಅವರ ಹೆಚ್ಚಿನ ಕಥೆಗಳು ಅವರ ರಾಜಕೀಯ ಅನುಭವಗಳನ್ನು ಪ್ರತಿಬಿಂಬಿಸುತ್ತವೆ. ಅವುಗಳಲ್ಲಿ ರಾಜನೈತಿಕ ಜೀವನದ ಸರಲ ಸತ್ಯಗಳು ಸಿಗುತ್ತವೆ, ಆದರೆ ಅವುಗಳ ಜಟಿಲ ಸತ್ಯ ಸಾಮಾನ್ಯವಾಗಿ ಕಣ್ಮರೆಯಾಗಿ ಉಳಿಯುತ್ತವೆ. ಇದಕ್ಕೆ ಕಾರಣ? ಮುಸಾಫಿರರು ಮೂಲತಃ ಕವಿಗಳು. ಮತ್ತು ಅವರು ತಮ್ಮ ಅನುಭವ ಸಂಪತ್ತಿನ ಪ್ರಯೋಗವನ್ನು ಸಹೃದಯತೆಯಿಂದ ಮಾಡಿದ್ದಾರೆ.

'ಖಸಮಾಖಾನೆ' (. . .) 1947 ರ ಭಯಾನಕ ಪರ್ವವನ್ನು ಕುರಿತದ್ದಾಗಿದೆ. ಆದರೆ ಈ ಕೃತಿಯ ಕಟುತೆ ಸಾಂಪ್ರದಾಯಿಕ ಕೊಲೆಕಡಿತಗಳನ್ನು ಕುರಿತದ್ದಲ್ಲ. ಅದು ತನ್ನ ನಿಕಟ ವರ್ತಮಾನವನ್ನು ಕುರಿತದ್ದಾಗಿದೆ. ಪಂಜಾಬಿಯ ಸಾಹಿತ್ಯಿಕ ಸ್ವಭಾವವೇ ಇದು—ಅದು ಕಳೆದುಹೋದ ಕಷ್ಟಗಳನ್ನು ಮರೆತು ವರ್ತಮಾನದ ಕಷ್ಟಗಳ ಚುಚ್ಚು ಮೊನೆಗಳನ್ನು ಅನುಭವಿಸುತ್ತದೆ.

## ಸುಖಾನ ಸಿಂಗ್

ಜನನ : 1909

ಶಿಕ್ಷಣ : M.A. (ಪಂಜಾಬೀ)

ಉದ್ಯಮ : ಅಧ್ಯಾಪನ.

ಕಥಾಸಂಗ್ರಹ : ಸುಖದುಃಖ, ದುಃಖ ಸುಖೋಂ ತೊ ಪಿಚ್ಛೋ, ಸಬ್ ರಂಗ್, ನರಕಾಂ ದೆ ದೇವತೆ, ಮನುಖ್ಖ ತೆ ಪಶು, ನವಾಂ ರಂಗ್.

ವಿಳಾಸ : ಪ್ರಿನ್ಸಿಪಾಲ, ಲಾಜಪತರಾಯ ಮೆಮೋರಿಯಲ್ ಕಾಲೇಜ್, ಢುಡೀಕೆ, ಫಿರೋಜಪುರ ಜಿಲ್ಲೆ.

ಸುಜಾನಸಿಂಗ್ ಪಂಜಾಬಿಯಲ್ಲಿ ಅಗ್ರಗಣ್ಯ ಪ್ರಗತಿಶೀಲ ಲೇಖಕರು. ಅವರ ಪ್ರಥಮ ಕಥಾ ಸಂಗ್ರಹ 'ಸುಖ ದುಃಖ' ಅವರ ಕಲಾತ್ಮಕ ವೃತ್ತಿಗೆ ಸಾಕ್ಷಿ. ಆಮೇಲೆ ಅವರು ಪ್ರಗತಿಶೀಲ ಸಾಹಿತ್ಯಿಕ ಧಾರೆಯನ್ನು ಅನುಸರಿಸುವ ಪ್ರಜ್ಞಾಪೂರ್ವಕ ನಿರ್ಣಯ ಮಾಡಿದರು. ಮತ್ತು ಅವರ ಸಮಗ್ರ ಕಲಾರಾಧನೆ ಮಾರ್ಕ್ಸವಾದೀ ದರ್ಶನಕ್ಕೆ ಒಳಪಟ್ಟು ಕೆಲಸಮಾಡುತ್ತಿದೆ. ಈಗ ಕೆಲವು ವರ್ಷಗಳಿಂದ ಅವರು ಮೌನವಾಗಿದ್ದಾರೆ. ಅವರ ಹೆಚ್ಚಿನ ಕಥೆಗಳು ಘಟನಾಪ್ರಧಾನವಿರುತ್ತವೆ. ಮತ್ತು ಕೆಳವರ್ಗಗಳ ಬಗೆಗೆ ತಮ್ಮ ಸಹಾನುಭೂತಿಯನ್ನು ಸ್ಪಷ್ಟ ಹಾಗೂ ಪ್ರತ್ಯಕ್ಷ ರೀತಿಯಲ್ಲಿ ವ್ಯಕ್ತಮಾಡುತ್ತವೆ. 'ರಾಸ್‌ಲೀಲಾ' (ರಾಸಲೀಲೆ) ಅವರ ಪ್ರಥಮ ಕಥಾ ಸಂಗ್ರಹಕ್ಕೆ ಒಳಪಟ್ಟಿದ್ದು.

## ಕರತಾರ್‌ಸಿಂಗ್ ದುಗ್ಗಲ್

ಜನನ : 1917

ಶಿಕ್ಷಣ : M.A. (ಇಂಗ್ಲೀಷ್)

ಉದ್ಯಮ : ಡೈರೆಕ್ಟರ್, ನ್ಯಾಶನಲ್ ಬುಕ್ ಟ್ರಸ್ಟ್.

ಕಥಾಸಂಗ್ರಹ : ಸವೇರ್‌ಸಾರ್, ಪಿಪ್ಪ ಪತ್ತಿಯಾಂ, ಕುಥೀ ಕಹಾನೀ ಕರ ದೀಗಯೀ, ಡಂಗರ್, ಅಗ್ಗಖಾನೆವಾಲೆ, ನವಾಂ ಘರ, ನವಾಂ ಆದಮಿ, ಕಚ್ಚಾದುದ್ಧ, ಫುಲ್ಲ ತೋಡನಾ ಮನಾ ಹೈ, ಲಧಾಯೀ ನಹೀಂ, ಕರಾಮಾತ್, ಗೋರಜ, ಪಾರೇಮ್ಯೆರೆ, ಎಕ ಛಿಟ್ಟ ಚಾನನ ದೀ, ಸಂಭೆ ಸಾಂಝೀವಾಲ, ಸದಾಯನ.

ವಿಳಾಸ : ಡೈರೆಕ್ಟರ್, ನ್ಯಾಷನಲ್ ಬುಕ್ ಟ್ರಸ್ಟ್, A-5, ಗ್ರೀನ ಪಾರ್ಕ್, ಹೊಸ ದೆಹಲಿ.

ಕರತಾರಸಿಂಗ್ ದುಗ್ಗಲ್ ಪಂಜಾಬೀ ಭಾಷೆಯ ಬಹುಮುಖಿ ಪ್ರತಿಭೆಯ ಸಾಹಿತ್ಯಕಾರರು. ಅವರು ಕವಿತೆಗಳನ್ನೂ ವಿಮರ್ಶಾತ್ಮಕ ನಿಬಂಧಗಳನ್ನೂ ಬರೆದಿದ್ದಾರೆ. ಅನೇಕ ನಾಟಕ-ಕಾದಂಬರಿಗಳನ್ನೂ ಅವರ ಲೆಕ್ಕಣಿಕೆಯು ಸೃಷ್ಟಿಸಿದೆ. ಅವರ ನಾಟಕ ಹಾಗೂ ಕಾದಂಬರಿಗಳಿಗೆ ಸಾಕಷ್ಟು ಪ್ರಸಿದ್ಧಿ ದೊರೆತಿದೆ. ಆದರೂ ಎಲ್ಲಕ್ಕೂ ಹೆಚ್ಚಾಗಿ ಅವರ ವರ್ಣನೆ ಕಥೆಗಾರನೆಂಬ ರೂಪದಲ್ಲಿಯೇ ಆಗಿದೆ. ಅವರ ಕಥೆಗಾರಿಕೆಯ ಸಾಧನೆಯು ಒಂದು ಅವಿಚ್ಛಿನ್ನ ಪ್ರವಾಹದಂತೆ ಗತಿಮಯವಾಗಿ ಇರುತ್ತದೆ. ಕಳೆದ ಮೂರು ದಶಕಗಳ ಪಂಜಾಬೀ ಭಾವನೆಗಳ ಇತಿಹಾಸವು ಅವರ ಕಥೆಗಳಲ್ಲಿ ಪ್ರತಿಬಿಂಬಿತವಾಗಿದೆ.

ಕರಾಮತ (ಚಮತ್ಕಾರ) ಪಂಜಾಬೀ ಭಾಷೆಯಲ್ಲಿ ಕೆಲವೇ ಉದ್ದ ಕಥೆಗಳಲ್ಲಿ ಒಂದಾಗಿದೆ. ಅದು ಪಂಜಾಬೀ 'ಮಿಥ' ಮತ್ತು ಇತಿಹಾಸವನ್ನು ಬೌದ್ಧಿಕ ಸ್ವರೂಪದಲ್ಲಿ ಸಾದರಪಡಿಸುತ್ತದೆ.

## ದೇವೇಂದ್ರ ಸತ್ಯಾರ್ಥಿ

ಜನನ : 1908

ಉದ್ಯಮ : ಲೇಖನ.

ಕಥಾ ಸಂಗ್ರಹ : ಕುಂಗಪೋಶ, ಸೋನಾ ಗಾಚೀ, ತಿನ, ಬು ಹೇಯಾಂ ವಾ ಲಾ ಘರ್, ಪೈರಿಸ ದಾ ಆದಮೀ.

ವಿಳಾಸ : ' ಕಲ್ಪನಾ ' ನ್ಯೂ ರೋಹತಕ್‌ರೋಡ್, ಹೊಸ ದೆಹಲಿ-5

ದೇವೇಂದ್ರ ಸತ್ಯಾರ್ಥಿ ಬಹುಭಾಷೀ ಬಹುರೂಪೀ ಸಾಹಿತ್ಯಕಾರರು. ಇವರಿಗೆ ಎಲ್ಲಕ್ಕೂ ಹೆಚ್ಚಿನ ಪ್ರಸಿದ್ಧಿ ಸಿಕ್ಕಿದ್ದು ಜಾನಪದ ಗೀತಗಳ ಸಂಗ್ರಹಕಾರ ಮತ್ತು ವ್ಯಾಖ್ಯಾನಕಾರನೆಂದು. ಕಳೆದ ಕೆಲವು ವರ್ಷಗಳಲ್ಲಿ ಸತ್ಯಾರ್ಥಿಗಳು ಕಾವ್ಯ ಮತ್ತು ಕಥಾ ಲೇಖನದ ಸಾಧನೆಯನ್ನು ಒಂದು ಅವಿಚ್ಛಿನ್ನ ನಿಯಮದಂತೆ ನಡೆಯಿಸಿಕೊಂಡು ಬಂದಿದ್ದಾರೆ. ತಮ್ಮ ವಿಲಕ್ಷಣ ಶೈಲಿಯಿಂದಾಗಿ ಸತ್ಯಾರ್ಥಿಗಳ ಸಾಹಿತ್ಯ ಅವರ ವಾಚಕರ ಮನೋಸ್ಥೈರ್ಯಕ್ಕೆ ಆಘಾತವನ್ನುಂಟುಮಾಡುವುದಿಲ್ಲ. ಸತ್ಯಾಥಿಗಳ ಸಂಗಡ ನಿಶ್ಚಿತ ಭಾವನಾತ್ಮಕ ಸಹಯೋಗ ಸ್ಥಾಪಿಸಿಕೊಳ್ಳಲಿಕ್ಕೆ ಕಠೋರ ಸಾಧನೆಯ ಅವಶ್ಯಕತೆಯಿರುತ್ತದೆ. ನಿರಂತರ ಪ್ರಯೋಗವು ದೇವೇಂದ್ರ ಸತ್ಯಾರ್ಥಿಗಳ ಸಾಹಿತ್ಯದ ಸಿದ್ಧಾಂತ.

' ದಸೌಂಧಾಸಿಂಗ್ ' ಅವರ ಆಯ್ದ ಕಥೆಗಳಲ್ಲಿ ಒಂದು. ಈ ಕಥೆಯಲ್ಲಿ ಭೂಮಿ ಮತ್ತು ಋತುಮಾನವನ್ನು ಒಂದು ಮಾನವೀ ಪಾತ್ರದಂತೆ ಕಥಾಸೂತ್ರದಲ್ಲಿ ಭಾಗವಹಿಸಲು ಅನುವು ದೊರೆತಿದೆ. ಇಲ್ಲಿ ನೆನಪಿಡಬೇಕಾದದ್ದೇನೆಂದರೆ ಈ ಪಂಜಾಬೀ ಕಥೆಯಲ್ಲಿಯ ಭೂಮಿ ಮತ್ತು ಋತುಮಾನ ಪಂಜಾಬದ ಹೊರಗಿನದಾಗಿದೆ.

## ಕುಲವಂತಸಿಂಗ್ ವಿರ್ಕ

ಜನನ : 1921

ಶಿಕ್ಷಣ : M.A. (ಇಂಗ್ಲೀಷ) LL.B.

ಉದ್ಯಮ : ಸರಕಾರಿ ಚಾಕರಿ. (ಸೂಚನಾ ಅಧಿಕಾರಿ, ಭಾರತ ಸರಕಾರ).

ಕಥಾಸಂಗ್ರಹ : ಛಾಹವೇಲಾ, ಧರತೀತೆ ಆಕಾಶ, ತೂಡೀ ದೀ ಪಂಡ, ಏಕಸ ಕೆ ಹಮ ಬಾರಕ, ದುದ್ಧ ಯಾ ವಪ್ಪಡ, ಗೋಲಾಂ, ನವೇಲೋಗ.

ವಿಳಾಸ : 148, ಸೆಕ್ಟರ 11-A ಚಂಡಿಗಢ.

ಕುಲವಂತಸಿಂಗ್ ವಿರ್ಕರು ಕೇವಲ ಕಥೆಗಳನ್ನು ಬರೆದಿದ್ದಾರೆ. ಗ್ರಾಮೀಣ ಪಂಜಾಬ ಮತ್ತು ರೈತರ ಜೀವನದೊಂದಿಗೆ ಕಥೆಗಾರ ವಿರ್ಕರ ಸಂಪರ್ಕ ಹೆಚ್ಚಾಗಿ ಕಥೆಯ

ಕೊನೆಯಲ್ಲಿ ಒಂದು ಚಮತ್ಕಾರಪೂರ್ಣ ಉಕ್ತಿ ಅಥವಾ ವಿಸ್ಮಯಕರ ಘಟನೆಯ ಮುಖಾಂತರ ಹೊಸದೊಂದು ಸಾರ್ಥಕತೆಯನ್ನು ಪ್ರಕಟಿಸುವದು ವಿರ್ಕರ ವಿಶಿಷ್ಟಕಲೆ.

ಖಬ್ಬಲ (ಗರಿಕೆ ಹುಲ್ಲು) ಪಂಜಾಬೀ ಜಾಟರ ಜೀವನದ ಪ್ರಾಮಾಣಿಕ ಪ್ರತಿಬಿಂಬ. ಈ ಕಥೆಯ ನಾಯಿಕೆ ಜಾಟಳು. ಇದರ ಸಮಗ್ರ ಹಿನ್ನೆಲೆ ಮತ್ತು ವಾತಾವರಣ ಜಾಟ-ಜೀವನದೊಂದಿಗೆ ಸಂಬಂಧಿತವಾಗಿದೆ. ಇದರ ಪ್ರಮುಖ ಪ್ರತೀಕವಾದ ಗರಿಕೆ ಹುಲ್ಲೂ ಸಹ ಜೀವನದೊಂದಿಗೆ ಸಂಬಂಧಪಟ್ಟಿದ್ದು. ಕಷ್ಟವನ್ನು ಸಹಿಸಿದನಂತರವೂ ಯಾವಾಗಲೂ ಭೂಮಿಯೊಂದಿಗೇ ಅಂಟಿಕೊಂಡು ಬರಬೇಕೆಂಬ ಇಚ್ಛೆ ಈ ಕಥೆಯ ಚರಿತ್ರ ಬಿಂದು.

## ಅಮೃತಾ ಪ್ರೀತಮ್

ಜನನ : 1919

ಉದ್ಯಮ : ಲೇಖನ.

ಕಥಾಸಂಗ್ರಹ : 26 ಬರಸ್ ಬಾದ್, ಆಖರೀ ಖತ್, ಗೋಜರ ದಿಯಾಂ ಪರಿಯಾಂ ಚೌನನದಾ ಹೌಕಾ, ಜಂಗಲೀ ಬೂಟೀ.

ವಿಳಾಸ : K-25 ಹೌಸ್, ಖಾಸ್, ಹೊಸ ದೆಹಲಿ-16.

ಅಮೃತಾ ಪ್ರೀತಮ್ ಪಂಜಾಬದ ಶಿರೋಧಾರ್ಯ ಕವಿ, ಕಥೆಗಾರ್ತಿ ಹಾಗೂ ಕಾದಂಬರಿಕಾರ್ತಿಯೂ ಆಗಿದ್ದಾರೆ. ಇವರ ಕೆಲವು ಸರಳ ನಿಬಂಧಗಳೂ, ಪ್ರಭಾವ ಶಾಲೀ ಸಮೀಕ್ಷಾತ್ಮಕ ಲೇಖಗಳೂ, ಪ್ರವಾಸ ವರ್ಣನೆಗಳೂ ಅಚ್ಚಾಗಿವೆ. 'ನಾಗಮಣಿ' ಮಾಸಪತ್ರಿಕೆಯ ಮಾಧ್ಯಮದಿಂದ ಇವರು ಒಂದು ಹೊಸ ಬಗೆಯ ಪತ್ರಿಕಾಶೈಲಿಯ ಅಸ್ಥಿಭಾರ ಹಾಕಿದ್ದಾರೆ. ಸಂಪೂರ್ಣ ಮುಚ್ಚುಮರೆಯಿಲ್ಲದ ಕಥನ ಮತ್ತು ಭಾವುಕ ಅಭಿವ್ಯಕ್ತಿ ಇವರ ಕವಿತೆಯ ಮತ್ತು ಕಥೆಯ ಗುಣಗಳಾಗಿವೆ. ತರುಣ ಸ್ತ್ರೀಪಾತ್ರಗಳ ಉದ್ಗಾರಗಳ ಸಹಜ ಅಭಿವ್ಯಂಜನೆ ಅಮೃತಾ ಅವರ ಕಥೆಗಳ ವಿಲಕ್ಷಣ ಗುಣ.

'ಆಹ' (ಉದ್ಗಾರ) ಕಥೆಯು ಒಬ್ಬ ತರುಣಿಯ ಸಮಾಜ ಬಾಹಿರ ಹೆಜ್ಜೆಯ ಸಂಪೂರ್ಣ ಸ್ವೀಕೃತಿಯೊಂದಿಗೆ ಸಂಬಂಧಪಟ್ಟಿದೆ.

## ಸಂತೋಖಸಿಂಗ್ ಧೀರ್

ಜನನ : 1920

ಶಿಕ್ಷಣ : ಮ್ಯಾಟ್ರಿಕ್ಯುಲೇಶನ.

ಉದ್ಯಮ : ಲೇಖನ.

ಕಥಾಸಂಗ್ರಹ : ಮಿಟ್ಟಿಯಾಂ ಧೀ ಛಾಂ, ಸಾಂಝೀ ಕಂಧ್, ಸವೇರ ಹೋನ್ ತಕ್.

ವಿಳಾಸ : ಮಂಡೀ, ಗೋಬಿಂದ್ ಗಢ, ಪಂಜಾಬ್.

ಸಂತೋಖಸಿಂಗ್ ಧೀರ್ ಪಂಜಾಬಿ ಸಾಹಿತ್ಯದ ಪ್ರಗತಿಶೀಲ ಆಂದೋಲನದ ಸಂತತಿ. ಕವಿತೆ, ಕಥೆ ಎರಡರಲ್ಲಿಯೂ ವಿಶೇಷ ಖ್ಯಾತಿಗಳಿಸಿದ್ದಾರೆ. ಒಂದು ಕಾದಂಬರಿಯನ್ನೂ ಬರೆದಿದ್ದಾರೆ. ಈಗ ಕೆಲವು ವರ್ಷಗಳಿಂದ ಮೌನವಾಗಿದ್ದಾರೆ. ಇವರ ಕಥೆಗಳ ಸಂಖ್ಯೆ ಬಹಳವಿಲ್ಲ. ಆದರೆ ಅವುಗಳಲ್ಲಿ ಐದಾರು ಕಥೆಗಳು ಯಾವುದೇ ಉತ್ತಮ ಕಥೆಗಳ ಸಂಕಲನದಲ್ಲಾದರೂ ಸ್ಥಾನ ಪಡೆಯಲು ಅರ್ಹವಾಗಿವೆ. ಇವರ ಕಥೆಗಳು ಗ್ರಾಮೀಣ ಸುಖ ದುಃಖದೊಂದಿಗೆ ಸಂಬಂಧಪಟ್ಟವು. ಪ್ರಾಮಾಣಿಕ ಸಂಭಾಷಣೆಗಳ ಮಾಧ್ಯಮದೊಳಗಿಂದಲೇ ಸ್ವೈಜ ವಾತಾವರಣದ ಸೃಷ್ಟಿಮಾಡುವದು ಧೀರರ ಕಥೆಗಳ ಒಂದು ಅಭಿನ್ನ ಲಕ್ಷಣವಾಗಿದೆ.

'ಸುಬಹ ಹೋನೇತಕ್' (ಬೆಳಗಾಗುವ ತನಕ) ಘಟನೆಗಿಂತ ಮಿಗಿಲಾಗಿ ಸಂಭಾವ್ಯದೊಂದಿಗೆ ಸಂಬಂಧವುಳ್ಳದ್ದು. ವ್ಯಕ್ತಿಯ ಚಾರಿತ್ರ್ಯಕ್ಕಿಂತ ಹೆಚ್ಚಾಗಿ ಪರಿಸ್ಥಿತಿಯ ಚಿತ್ರಣವಾಗಿದೆ. ಅದು ಕಷ್ಟಮಯ ಜೀವನವನ್ನು ಹಾಸ್ಯಪೂರ್ಣ ರೀತಿಯಲ್ಲಿ ಸಾದರಪಡಿಸುತ್ತದೆ.

## ಮಹಿಂದರ್ ಸಿಂಗ್ ಸರ್ನಾ

ಜನನ : 1924

ಶಿಕ್ಷಣ : B.A.

ಉದ್ಯಮ : ಸರಕಾರಿ ಚಾಕರಿ (ಡೈರೆಕ್ಟರ ಆಫ ಆಡಿಟ ಎಂಡ್ ಅಕೌಂಟ್ಸ)

ಕಥಾಸಂಗ್ರಹ : ಪತ್ಥರ್ ದೇ ಆದಮಿ, ಸಗನಾ ಭರೀ ಸವೇರ, ಸುಪನೇಯಾಂ ದೀ ಸೀಮಾ ಪಂಜಲೀ ತೆ ವಿಲಕನೀ, ಛವಿಯಾಂದೀ ರುತ್, ಕಾಲಿಂಗಾ.

ವಿಳಾಸ : S-6, ಗ್ರೇಟರ್ ಕೈಲಾಶ್, ಹೊಸ ದೆಹಲಿ-48

ಮಹಿಂದರ್ ಸಿಂಗ್ ಸರ್ನಾ ಕಥೆಗಾರರು ಹಾಗೂ ಕಾದಂಬರಿಕಾರರು. ಇತ್ತೀಚೆಗೆ ಮಹಾಕಾವ್ಯದ ಶೈಲಿಯಲ್ಲಿ ಒಂದು ದೀರ್ಘಕಾವ್ಯರಚನೆ ಆರಂಭಿಸಿದ್ದಾರೆ. ಮನೋವಿಜ್ಞಾನವು ಸರ್ನಾರ ಕಥೆಗಳ ಪ್ರಮುಖ ಆಧಾರ. ಮತ್ತು ಕೆತ್ತಿ ಕಡೆದ ವಾಕ್ಯವಿನ್ಯಾಸ ಅವರ ಕಥಾ ಶಿಲ್ಪದ ಮುಖ್ಯ ಅಂಗವಾಗಿದೆ. 1947 ರ ಭಯಾನಕ ಪರ್ವವು ಸರ್ನಾರ ಕಥೆಗಳಲ್ಲಿ ಮತ್ತೆ ಮತ್ತೆ ಪ್ರತಿಬಿಂಬಿತವಾಗುತ್ತದೆ. ಸಾಂದ್ರವಾದ ಭಾವಸಂಪತ್ತು ಕೆಲವೊಮ್ಮೆ ಭಾವುಕತೆಯ ಗಡಿಯನ್ನು ಮುಟ್ಟುವಂತೆ ಅನಿಸುತ್ತದೆ. ತೀಕ್ಷ್ಣವಾದ ವ್ಯಂಗ್ಯವು ಭಾವುಕತೆಯನ್ನು ತುಸು ಶಿಥಿಲಗೊಳಿಸುತ್ತದೆ. ಕಟುವಾದ

ವ್ಯಂಗ್ಯ ಮತ್ತು ಮಧುರ ಮಾನವತೆ ಇವುಗಳ ಸುಂದರ ಸಾಮಂಜಸ್ಯವು ಇವರ ಕಥೆಗಳ ವಿಶಿಷ್ಟತೆ ಆಗಿವೆ.

"ಛವಿಯೊಂಕಾ ಮೌಸಮ್" (ಕೊಡಲಿಯ ಹಂಗಾಮು) ದೇಶ ವಿಭಜನೆಯ ಸಮಯದ ರಕ್ತಪಾತದ ಕಥೆ. ಸಾಂಪ್ರದಾಯಿಕ ಧುರೀಣರ ನಿರ್ದಯತೆ, ಪುರಾತನ ಜೀವನ ಮೂಲ್ಯಗಳನ್ನು ಮನ್ನಿಸುವವರ ಸಹಜ ಕೋಮಲತೆ ಮತ್ತು ಇವೆರಡರ ನಡುವೆಯೇ ಸಿಲುಕಿ ಬಿದ್ದ ತಮ್ಮ ಇಚ್ಛಾಶಕ್ತಿಯನ್ನೇ ಕಳೆದುಕೊಂಡ ಜನರ ವಿವಶತೆಯ ಚಿತ್ರ ಈ ಕಥೆಯಲ್ಲಿ ಅಂಕಿತವಾಗಿದೆ. ಆದ್ದರಿಂದ ಈ ಕಥೆ ಕವಿತೆಯಂತೆ ಪ್ರಭಾವ ಬೀರುತ್ತದೆ.

## ನವತೇಜ ಸಿಂಗ್

ಜನನ : 1925

ಶಿಕ್ಷಣ : M.A. (ಮನೋವಿಜ್ಞಾನ)

ಉದ್ಯಮ : ಪತ್ರಿಕೋದ್ಯಮ (ಸಂಪಾದಕ : 'ಪ್ರೀತಲಡೀ')

ಕಥಾಸಂಗ್ರಹ : ದೇಶವಾಪಿಸೀ, ನವೀಂರುತ, ಬಾಸಮತೀ ದೀ ಮಹಕ, ಚಾನನ ದೇ ಬೀಜ್.

ವಿಳಾಸ : ಪ್ರೀತನಗರ, ಅಮೃತಸರ.

ಮನೋವಿಜ್ಞಾನದ ವಿದ್ಯಾರ್ಥಿಯಾದ ನವತೇಜಸಿಂಗರ ಪ್ರಥಮ ಆಸಕ್ತಿ ಮಾರ್ಕ್ಸ್‌ವಾದವನ್ನು ಕುರಿತದ್ದಾಗಿದೆ. ರಾಜನೈತಿಕ ಪತ್ರಿಕೋದ್ಯಮದಲ್ಲಿಯೂ ಇವರಿಗೆ ಸೂಕ್ಷ್ಮ ಕಾವ್ಯಕಲ್ಪನೆಯ ಮೋಹವಿದೆ.

ನವತೇಜರ ಕಥೆಗಳಲ್ಲಿ ಗ್ರಾಮೀಣ ಸಮಸ್ಯೆಗಳನ್ನು ನಾಗರಿಕ ಸೂಕ್ಷ್ಮತೆಯಿಂದ ಸಾದರ ಪಡಿಸಲಾಗುತ್ತದೆ. ದೈನಿಕ ಜೀವನದ ಕಠೋರ ಯಥಾರ್ಥತೆಯನ್ನು ಕೋಮಲ ಕಲ್ಪನಾ ಚಿತ್ರಗಳ ಪ್ರತೀಕಗಳ ಮುಖಾಂತರ ಪ್ರಸ್ತುತ ಪಡಿಸುವದರಲ್ಲಿ ನವತೇಜರಿಗೆ ವಿಶೇಷ ಅಭಿರುಚಿ. ಇದರ ಪರಿಣಾಮವಾಗಿ ಅವರ ಕಥೆಗಳ ಪ್ರಭಾವ ಯಾವದೊಂದು ನಿಶ್ಚಿತಬಿಂದುವಿನಲ್ಲೂ ಕೇಂದ್ರಿತವಾಗದೆ ಕಥೆಯ ಇಡಿ ವಾತಾವರಣದಲ್ಲಿ ಹರಡಿ ನಿಲ್ಲುತ್ತದೆ. ಮತ್ತು ಕಥೆಯ ಪ್ರಭಾವ ಕವಿತೆಯಂತೆ ಆಗುತ್ತದೆ.

'ಕಿಸ್ಮತ ಕೀ ಡೋರ್' (ಭಾಗ್ಯದ ಹಗ್ಗ) ಗ್ರಾಮೀಣ ಮೂಢ ನಂಬಿಗೆಗಳ ನಾಗರಿಕವ್ಯಾಖ್ಯೆ. ಇಂಥ ನಂಬಿಗೆ ಶುದ್ಧ ಬೌದ್ಧಿಕ ಸ್ಥಿತಿಯಲ್ಲಿ ಉಂಟಾದ ಮಾನಸಪುತ್ರ. ಅದರ ಒಂದು ಅಂಶು ದಿನನಿತ್ಯದ ಬದುಕಿನ ಅಗತ್ಯಗಳೊಂದಿಗೆ ಕಟ್ಟಿದೆ ಮತ್ತು ಇನ್ನೊಂದು ಅಂಶು ಮನುಷ್ಯನ ಅಜಾಗ್ರತ ಮನಸ್ಸಿನಲ್ಲಿ ನೆಲೆಸಿದ ಮಾನಸಿಕ ಶಕ್ತಿಯೊಂದಿಗೆ ಭೌತಿಕ ಮತ್ತು ಮಾನಸಿಕ ಇವೆರಡರ ಸಾಮಂಜಸ್ಯ ನವತೇಜರ ಕಥೆಯ ಸ್ವಂತಿಕೆಯ ವೈಶಿಷ್ಟ್ಯ.

## ಮಹಿಂದರ್ ಸಿಂಗ್ ಜೋಶೀ

ಜನನ : 1919

ಶಿಕ್ಷಣ : M.A. (ಪಂಜಾಬೀ) LL.B.

ಉದ್ಯಮ : ಸರಕಾರಿ ಚಾಕರಿ (ಮೆಂಬರ್, ಅಫಿಶಿಯಲ್ ಲ್ಯಾಂಗ್ವೇಜ್ ಲೆಜಿಸ್ಲೇಟಿವ್ ಕಮಿಶನ್)

ಕಥಾಸಂಗ್ರಹ : ಪ್ರೀತಾಂ ದೆ ಪರಛಾಂವೆ, ತೋಟಾ ತೆ ತೃಪ್ತಿಯಾಂ, ದಿಲ್ ತೊ ದೂರ್, ಕಿರನಾ ದೀ ರಾಖಿ, ಸೌಂ ಮ್ಯೆಂನೂ ಆಪಣೀ.

ವಿಳಾಸ : 4-2 ಮಲ್ಟಿ ಸ್ಟೋರಿ ಬಿಲ್ಡಿಂಗ್, ಶಾಹಜಹಾಂ ರೋಡ್, ಹೊಸ ದೆಹಲಿ-11.

1947 ರ ನಂತರ ಪಂಜಾಬದ ಮಾಳ್ವ ಪ್ರದೇಶಕ್ಕೆ ತನ್ನ ದನಿಯನ್ನು ಮೊಳಗಿಸಲು ಇಂಬು ದೊರೆಯಿತು. ಆ ಮೂಲಕ ಪಂಜಾಬೀ ಸಾಹಿತ್ಯಿಕ ಭಾಷೆಯ ವಿನ್ಯಾಸ ಮತ್ತು ಭಾವಮುದ್ರೆಗಳಲ್ಲಿ ಅಭಿವೃದ್ಧಿ ಆಯಿತು. ಇದನ್ನು ಸುಲಭವಾಗಿ ಗುರುತಿಸಬಹುದು. ಈ ಬೆಳವಣಿಗೆ ಹೆಚ್ಚಾಗಿ ಕಥಾಕ್ಷೇತ್ರದಲ್ಲಿಯೇ ನಡೆದಿದೆ. ತನ್ನ ಮಾಳ್ವ ಅನುಭವ ಮತ್ತು ಭಾಷೆಗೆ ತನ್ನ ಸಾಹಿತ್ಯಿಕ ಸಾಮರ್ಥ್ಯದ ಪರಿಚಯ ಕೊಟ್ಟ ಮಾಲವೀಯ ಲೇಖಕರಲ್ಲಿ ಜೋಶಿಯವರು ಒಬ್ಬರು. ಇವರ ಹೆಚ್ಚಿನ ಕಥೆಗಳು ಇದೇ ಪ್ರದೇಶಕ್ಕೆ ಸಂಬಂಧಿಸಿದುವು. ಗತಕಾಲದತ್ತ ಮುಖ ತಿರುವಿದ ಚೇತನಾ ಪ್ರವಾಹವೂ, ಸಾಂದ್ರವಾದ ವಾಕ್ಯವಿನ್ಯಾಸವೂ ಆ ಕಥೆಗಳ ವಿಶೇಷ ಗುಣ. ಈ ಕಾರಣದಿಂದಲೇ ಅವರ ಕಥೆಗಳ ದನಿ ವಿಚಿತ್ರವಾಗಿ ಅನುಭವಕ್ಕೆ ಬರುತ್ತದೆ. ಮತ್ತು ಅವರ ಕೃತಿಗಳನ್ನು ವಿಶೇಷ ಏಕಾಗ್ರತೆಯಿಂದ ಓದಬೇಕಾಗುತ್ತದೆ.

'ಮೋತೀ' 1947 ರ ಭಯಾನಕ ಪರ್ವಕ್ಕೆ ಸಂಬಂಧಿಸಿದ ಒಂದು ಕಥೆ. ಅದರಲ್ಲಿ ಮೂರು ಪ್ರಜ್ಞಾಪ್ರವಾಹಗಳು ಕೂಡಿಬಂದು ಭಾವುಕ ಪರಿವೇಶವನ್ನು ಸೃಷ್ಟಿಸುತ್ತವೆ.

## ಲೋಚನ ಬಕ್ಷೀ

ಜನನ : 1923

ಶಿಕ್ಷಣ : B.A.

ಉದ್ಯಮ : ಸರಕಾರೀ ಚಾಕರಿ (ಪ್ರೋಗ್ರಾಮ್ ಅಧಿಕಾರಿ, ಆಕಾಶವಾಣಿ).

ಕಥಾಸಂಗ್ರಹ : 'ಪಾಪ-ಪುನ್ನ ತೊ ಪರೆ, ವರ ತೆ ಸ್ರಾಪ್, ಘರೆಮೋಲೆ ವಿಚ್, ಮೇರೀ ಖುಶೀ ಮೋಡ ದೆ.

ವಿಳಾಸ : ಪ್ರೋಗ್ರಾಮ ಅಧಿಕಾರಿ, ಆಕಾಶವಾಣೀ, ಹೊಸ ದೆಹಲಿ.

ಲೋಚನಬಕ್ಷ್ಶೀ ಬಹಳ ಕಾಲದಿಂದ ಕಥೆಗಳನ್ನು ಬರೆಯುತ್ತಿದ್ದಾರೆ. ಆದರೆ ಅವರ ಲೇಖನ ಗತಿ ಕಡಿಮೆ. ಪೊರೋಹಾರದ ರಮಣೀಯ ಭೂಮಿಯ ಬಗೆಗೆ ಅವರಿಗೆ ವಿಶೇಷ ಮೋಹ. ಮತ್ತು ವಿವರಣೆಯನ್ನು ಪ್ರತೀಕಗಳ ಮಾಧ್ಯಮ ದೊಳಗಿಂದ ವ್ಯಕ್ತಪಡಿಸುವದರಲ್ಲಿ ಅವರಿಗೆ ವಿಶೇಷ ಅಭಿರುಚಿ. ಇದರ ಪರಿಣಾಮ ವಾಗಿ ಕಥೆಯ ಪ್ರಭಾವ ಪ್ರಚ್ಛನ್ನರೂಪದಿಂದ ಬೀಳುತ್ತದೆ. ಕಥಾರಸದ ಸಂಗಡವೇ ಕಾವ್ಯರಸವೂ ಸಹಜವಾಗಿ ಹೊಂದಿಕೊಳ್ಳುತ್ತದೆ. ಮತ್ತು ಯಥಾರ್ಥತೆಯ ಮೇಲೆ 'ರೋಮ್ಯಾಂಟಿಕ'ದ ಬಣ್ಣವೇರುತ್ತದೆ. ಲೋಚನ ಬಕ್ಷಿಯವರ ಪ್ರಸಿದ್ಧಿ ಹೆಚ್ಚಾಗಿ ಅವರ ನೀಳ್ಗತೆಗಳಿಂದಲೇ ಆಗಿದೆ.

'ಬಾಜಾರಕಾ ಮಾತಮ' (ಬಾಜಾರಿನ ಪ್ರೇತಯಾತ್ರೆ) ಲೋಚನ ಬಕ್ಷಿಯವರ ಪ್ರತೀಕಾತ್ಮಕ ಕಥೆಯಾಗಿದೆ. ಜೀವನವನ್ನು ಬಾಜಾರಿನ ಅರ್ಥಮಾನವೀಯ ಮಾಧ್ಯಮದಿಂದ ಪ್ರಸ್ತುತಪಡಿಸಲಾಗಿದೆ. ಇದರ ಮುಖ್ಯ ಪಾತ್ರ ಬಾಜಾರದ ಪೇಟಿಯ ಬೆಲೆ.

## ಗುರುದಯಾಲ ಸಿಂಗ್

ಜನನ : 1933

ಶಿಕ್ಷಣ : M.A. (ಪಂಜಾಬಿ)

ಉದ್ಯಮ : ಅಧ್ಯಾಪನ

ಕಥಾಸಂಗ್ರಹ : ಬಕಲಮುಖುದ್, ಸಗ್ಗೀ ಫುಲ್ಲ, ಓಪರಾ ಘರ್.

ವಿಳಾಸ : ಜೈತೊ, ಪಂಜಾಬ್.

ಗುರುದಯಾಲಸಿಂಹ ಮಾಳ್ವ ಇಲಾಖೆಯ ಕಥೆಗಾರರೂ ಕಾದಂಬರಿಕಾರರೂ ಆಗಿದ್ದಾರೆ 'ಮಢೀಕಾ ದೀವಾ' ಎಂಬ ಅವರ ಕಾದಂಬರಿಯಿಂದ ಅವರು ವಿಶೇಷ ಪ್ರಾಮುಖ್ಯತೆಗೆ ಬಂದರು. ಅದು ಮಾಳ್ವ ಪ್ರದೇಶದ ಭೌಗೋಲಿಕ ಲಕ್ಷ್ಯಕ್ಕೆ ಭಾವನಾತ್ಮಕ ಅಭಿವ್ಯಕ್ತಿಯನ್ನು ಕೊಟ್ಟಿತು. ಇವರ ಬಹುತೇಕ ಕೃತಿಗಳು ಮಾಳ್ವದ ಭೂಮಿಹೀನ ಜನವರ್ಗದೊಂದಿಗೆ ಸಂಬಂಧಿತವಾಗಿವೆ. ಭೂಮಿಹೀನ ರೈತರ ಚಿರ ಸಂಗಾತಿಯಾದ ದುಃಖದ ನಿಷ್ಕಪಟ ಅಭಿವ್ಯಕ್ತಿ ಗುರುದಯಾಲ ಸಿಂಗರ ಕಲೆಯ ವಿಶಿಷ್ಟತೆಯಾಗಿದೆ. ಇಂಥ ಭೂಮಿಹೀನರಿಗಾಗಿ ಗುರುದಯಾಲರು ಹಾಕಿಟ್ಟ ಹೆಸರು 'ಅನಹೋಯೆ' (ಹುಟ್ಟಿದಿದ್ದವರು). ಅಸ್ತಿತ್ವದಿಂದ ವ್ಯಕ್ತಿತ್ವದವರೆಗಿನ ವಿಫಲ ಯಾತ್ರೆಗೆ ಗುರುದಯಾಲಸಿಂಗರು ಮೊಟ್ಟಮೊದಲ ಸಲವಾಗಿ ಕಥೆಯಲ್ಲಿ ಪ್ರಮುಖ ಸ್ಥಾನ ನೀಡಿದ್ದಾರೆ. ಮಾಳ್ವ ಭಾಷೆಯ ಶೈಲಿಯಿಂದಾಗಿ ಇವರು ಪಂಜಾಬದ ಏಕ ಮಾತ್ರ 'ಅಂಚಿಸ' (ಸೀಮಾಪರ) ಕಥೆಗಾರರೆಂದು ಕರೆಯಿಸಿಕೊಳ್ಳುವ ಅಧಿಕಾರ

ವನ್ನು ಪಡೆದಿದ್ದಾರೆ. ಭಾವುಕರಾಗದೆಯೂ ಭಾವನೆಗಳನ್ನು ಮಿಡಿಯುವುದು ಗುರುದಯಾಲಸಿಂಗರ ವಿಶೇಷ ಉಪಲಬ್ಧಿಯಾಗಿದೆ.

'ಕರೀಲ ಕೀ ಟಹನೀ' (ಮುಳ್ಳು ಬಿದಿರಿನ ಟೊಂಗೆ)ಯೂ ಇಂಥ ಒಂದು 'ಅಸಹೋಯಿ' ಅಸ್ತಿತ್ವದ ಕಥೆಯಾಗಿದೆ.

## ಅಜಿತ ಕೌರ್

ಜನನ : 1934

ಶಿಕ್ಷಣ : M.A. (ಅರ್ಥಶಾಸ್ತ್ರ)

ಉದ್ಯಮ : ಪತ್ರಿಕೋದ್ಯಮ.

ಕಥಾಸಂಗ್ರಹ : ಗುಲ್‌ಬಾನೋ, ಮಹಕ ದಿ ಮೌತ್, ಬುತ್‌ಶಿಕನ್.

ವಿಳಾಸ : 16/6 ಈಸ್ಟ ಪಟೇಲ್ ನಗರ, ಹೊಸ ದೆಹಲಿ-8

ಅಜಿತಕೌರ ಪಟ್ಟಣಿಗ ಹೆಣ್ಣಿನ ಮಾನಸಿಕ ಕ್ಲೇಶದ ಕಥೆಯನ್ನು ಸಾದರ ಪಡಿಸುತ್ತಾರೆ. ಆರ್ಥಿಕ, ಸಾಮಾಜಿಕ ಅಥವಾ ಭಾವನಾತ್ಮಕ ಕಷ್ಟವು ಸಮಗ್ರ ಜನತೆ ಅನುಭವಿಸುತ್ತಲೇ ಇರುತ್ತದೆ. ಆದರೆ ಕೆಲವು ದುಃಖಗಳನ್ನು ಹೆಂಗಸು ಹೆಂಗಸಾಗಿ ಹುಟ್ಟಿದ ಕಾರಣ ಅನುಭವಿಸುತ್ತಾಳೆ. ಪಟ್ಟಣದ ಸ್ತ್ರೀ ಅನುಭವಿಸುವ ಕೆಲವು ದುಃಖಗಳನ್ನು ಹಣ ಸಂಪಾದನೆ, ಸಮಾಜದಲ್ಲಿ ಪಡೆಯಬಹುದಾದ ಸ್ವಾತಂತ್ರ್ಯ ಅಥವ ಅಹಂಭಾವಗಳು ಪರಿಹರಿಸಲಾರವು.

ಅಜಿತಕೌರರ ಕಥೆಗಳು ಈ ದುಃಖಗಳಿಗೆ ಸಹಜವಾದ ಅಭಿವ್ಯಕ್ತಿಯನ್ನು ನೀಡುತ್ತವೆ. ಈ ಕಥೆಗಳನ್ನು ಓದುವುದರಿಂದ ಪಟ್ಟಣದ ಸ್ತ್ರೀಯ ಬಗ್ಗೆ ಸಹಾನುಭೂತಿ ಬೆಳೆಯದಿದ್ದರೂ ಅವಳ ಚಾರಿತ್ರ್ಯ ಹಾಗೂ ಪರಿಸ್ಥಿತಿಗಳಬಗ್ಗೆ ಖಂಡಿತವಾಗಿಯೂ ಮನವರಿಕೆಯಾಗುತ್ತದೆ.

'ಸೂಲೀಪರ್ ಲಟಕೆ ಕ್ಷಣ್' (ಶೂಲದ ಮೇಲೆ ತೂಗಿದ ಕ್ಷಣ) ಕಥೆಯು ಆತ್ಮಸಂಪನ್ನೆ, ಸ್ವತಂತ್ರ ಮತ್ತು ಪ್ರಬಲ ಅಹಂಭಾವದ ಪಟ್ಟಣದ ಸ್ತ್ರೀಯ ಕಷ್ಟ ಕಥೆಯಾಗಿದೆ.

## ಗುಲ್‌ಜಾರ್‌ಸಿಂಗ್ ಸಂಧೂ

ಜನನ : 1934

ಶಿಕ್ಷಣ : M.A. (ಇಂಗ್ಲೀಷ)

ಉದ್ಯಮ : ಸರಕಾರಿ ಚಾಕರಿ (ಸಂಪಾದಕ, ಕೃಷಿ ಮಂತ್ರಿಮಂಡಲ, ಭಾರತ ಸರಕಾರ)

ಕಥಾಸಂಗ್ರಹ : ಹುಸ್ನ್ ದೆ ಹಾಣೀ, ಇಕ ಸಾಂಝ್ ಪುರಾಣೀ, ಸೋನೇ ದೀ ಇಟ್ಟ.

ವಿಳಾಸ : A-246. ಪಂಡಾರಾರೋಡ್, ಹೊಸ ದೆಹಲಿ-11

ಪ್ರಾಯದಲ್ಲಿ ಹೊಸ ಪೀಳಿಗೆಯ ಕಥೆಗಾರರೊಂದಿಗೆ ಸಂಬಂಧವಿದ್ದರೂ ಗುಲ್‌ಜಾರಸಿಂಗ್ ಸಂಧೂ ಶೈಲಿ ಮತ್ತು ಭಾವಗಳಲ್ಲಿ ಹಳೆಯ ಸೇಖೋಂ-ಕಥೆಯನ್ನು ಅನುಸರಿಸುತ್ತಾರೆ. ಅವರು ತಮ್ಮ ವಯಸ್ಸಿನ ಹೆಚ್ಚು ಕಾಲ ನಗರಗಳಲ್ಲಿ ಕಳೆದ ಪರಿಣಾಮವಾಗಿ ಅವರ ಭಾವನಾತ್ಮಕ ನಂಟು ಪಂಜಾಬದ ಗ್ರಾಮೀಣ ಜೀವನದೊಂದಿಗೇ ಇದೆ. ಅವರು ಗ್ರಾಮೀಣ ಜೀವನದ ಸಮಸ್ಯೆಗಳಿಗಿಂತಲೂ ಹೆಚ್ಚು ಅಲ್ಲಿನ ಜೀವನದ ಅನುಭವಗಳ ಕಥೆಗಾರರಾಗಿದ್ದಾರೆ. ಪಂಜಾಬದ ಹಳ್ಳಿಗಳು ತಮ್ಮ ಬಹುತೇಕ ಸಮಸ್ಯೆಗಳನ್ನು ಒಗೆಹರಿಸಿಕೊಂಡಿವೆ. ಆದರೆ ಹಳ್ಳಿಯವನೊಬ್ಬನನ್ನು ಒಬ್ಬ ವ್ಯಕ್ತಿಯಾಗಿ ಅಧ್ಯಯನಮಾಡುವುದನ್ನು ನಮ್ಮ ಕತೆಗಾರರು ಇನ್ನೂ ಆರಂಭಿಸಿಲ್ಲ. ನಮ್ಮ ಅಧಿಕಾಂಶ ಗ್ರಾಮೀಣ ಕಥೆಗಳು ಗ್ರಾಮೀಣ ಅಜಾಗ್ರತ ಮನಸ್ಸಿನ ಭಾವಬೋಧದೊಂದಿಗೆ ಸಂಬಂಧಿಸಿರುತ್ತವೆ. 'ಠಗೀ' (ವಂಚನೆ) ಹೊಸ ಸೃಜನಶೀಲ ಪಂಜಾಬದ ಸ್ವರವನ್ನು ಮೊಳಗುವ ಅವಕಾಶ ಸಿಕ್ಕ ಕೆಲವೇ ಆಯ್ದ ಕಥೆಗಳಲ್ಲಿ ಒಂದಾಗಿದೆ. ಹೊಸ ಭಾಖಡಾ ಅಣೆಕಟ್ಟಿನೊಂದಿಗೆ ಹಳೆಯ ಭಾವಬೋಧವನ್ನು ಜೋಡಿಸಲಾಗಿದೆ. ಸಿರಾಶ ಮುದುಕಿ ಅಜ್ಜಿಯ ಇಡಿಯ ಅವಸ್ಥೆ ಯಾವುದೇ ಘಟನೆ ಅಥವಾ ಸಮಸ್ಯೆಯೊಂದಿಗೆ ಹೊಂದಿಕೊಂಡಿರದೆ ನಿಶ್ಚಿತ ಭಾವಬೋಧದೊಂದಿಗೆ ಜೋಡಿಸಿದೆ. ಈ ಭಾವಬೋಧ ವ್ಯಕ್ತಿಗತವಲ್ಲ. ಪಂಜಾಬದ ಸಮಗ್ರ ರೈತವರ್ಗದ ಭಾವಬೋಧದ ಪ್ರತೀಕವಾಗಿದೆ.

## ದಲೀಪ್‌ಕೌರ್ ಟಿವಾನ

ಜನನ : 1934

ಶಿಕ್ಷಣ : M.A. (ಪಂಜಾಬಿ) Ph.D.

ಉದ್ಯಮ : ಅಧ್ಯಾಪಕಿ (ಲೆಕ್ಚರರ್, ಪಂಜಾಬ ಯುನಿವರ್ಸಿಟಿ, ಪಾಟಿಯಾಲಾ).

ಕಥಾಸಂಗ್ರಹ : ತ್ರಾಟಾಂ, ಕಿಸೆ ದೀಘೀ, ವಿಗಾನೆ ಸ್ವೈಣ, ವೇದನಾ, ಯಾತ್ರಾ, ತೂಂ ಭರೀ ಹುಂಗಾರಾ.

ವಿಳಾಸ : ಸಂಪೂರ್ಣ ಲಾಡ್ಜ್, ಪಾಟಿಯಾಲಾ.

ದಲೀಪ ಕೌರ್ ಟಿವಾನಾರು ಬಹಳಷ್ಟು ಕಥೆಗಳನ್ನು ಬರೆದಿದ್ದಾರೆ. ಎರಡು ಕಾದಂಬರಿಗಳನ್ನೂ ಬರೆದಿದ್ದಾರೆ. 'ಏ ಹಮಾರಾ ಜೀವನ' ಎಂಬ ಕಾದಂಬರಿ ಅವರ ಪ್ರಸಿದ್ಧಿಯ ನಿಶ್ಚಿತ ಆಧಾರ. ಪಂಜಾಬದ ಇತರ ಇಬ್ಬರು ಪ್ರಮುಖ ಕಥೆಗಾರ್ತಿಯರಂತೆ (ಅಮೃತಾ ಪ್ರೀತಂ ಮತ್ತು ಅಜೀತ ಕೌರ್) ದಲೀಪ್ ಕೌರರ ಕಥೆಗಳೂ ತರುಣಿಯರ ಪ್ರೇಮಾನುಭವಗಳೊಂದಿಗೆ ಸಂಬಂಧಿಸಿರುತ್ತವೆ. ಪ್ರೇಮದ ಸ್ಥಾಪಿತ ರೀತಿ ನೀತಿಗಳಿಂದ ತುಸು ಬೇರೆಯಾಗಿ ಬರೆಯುವ ಪ್ರವೃತ್ತಿ ಈ ಮೂರೂ

ಕಥೆಗಾರ್ತಿಯರ ಸಾಮಾನ್ಯ ವಿಶೇಷತೆ. ಆದರೆ ಅಮೃತಾ ಮತ್ತು ಅಜೀತರ ಕಥೆಗಳ ಅಂತ್ಯ ನಿಃಶೇಷತೆಯಲ್ಲಿ ಆಗುತ್ತದೆ. ದಲೀಪಕೌರಳ ಕಥೆಗಳು ಸಂಯಮದಲ್ಲಿ ಕೊನೆಗಾಣುತ್ತವೆ.

'ಮರಣ ಋತು'ವೂ ತಾರುಣ್ಯದ ಪ್ರೇಮಾನುಭವದ ಕಥೆಯಾಗಿದೆ. ಪ್ರೇಮ ಮತ್ತು ಕಾಮಗಳ ಮಿಲನ ಬಿಂದು ಒಂದೇ ಆಗದಿದ್ದಲ್ಲಿ ಬಿಗಿತ-ಬಿಕ್ಕಟ್ಟು ಉಂಟಾಗುತ್ತದೆ. ಆದರೆ ಈ ಬಿಂದುವಿನ ಅಭಾವದ ಪರಿಚಯದ ಮುಖಾಂತರ ಈ ಬಿಗಿತ-ಬಿಗಿಕಟ್ಟಿನ ಮೇಲೆ ಅಂಕೆ ಪಡೆಯಲಾಗುತ್ತದೆ.

## ಬೂಟಾಸಿಂಗ್

ಜನನ : 1919

ಶಿಕ್ಷಣ : M.A. (ಪಂಜಾಬಿ)

ಉದ್ಯಮ : ಸರಕಾರಿ ಚಾಕರಿ (ಟ್ರೈನ್ ಎಗ್ಸಾಮಿನರ್, ರೇಲ್ವೆ ಸ್ಟೇಷನ್, ದೆಹಲಿ).

ಕಥಾಸಂಗ್ರಹ : ಲೊ ಚುಬಾರೆ ದೀ.

ವಿಳಾಸ : 75|3 ನ್ಯೂ ರೇಲ್ವೆ ಕ್ವಾರ್ಟರ್ಸ, ಸಬ್ಜಿಮಂಡಿ, ದೆಹಲಿ-6.

ಬೂಟಾ ಸಿಂಗರ ಒಂದೇ ಕಥಾಸಂಗ್ರಹ ಪ್ರಕಟವಾಗಿದೆ. ಆದರೆ ಕಳೆದ ಕೆಲವು ವರ್ಷಗಳಿಂದ ಇವರ ಕಥೆಗಳು ಪಂಜಾಬೀ ಪತ್ರಿಕೆಗಳಲ್ಲಿ ಅನುಕ್ರಮವಾಗಿ ಅಚ್ಚಾಗುತ್ತಲೇ ಇವೆ. ಈಚೆಗೆ ಅವರು ಒಂದು ಕಾದಂಬರಿಯನ್ನು ಪ್ರಕಟಿಸುವುದರಲ್ಲಿ ತೊಡಗಿದ್ದಾರೆ. ಅವರ ಬಹಳಷ್ಟು ಕಥೆಗಳು ನಗರದ ಮಧ್ಯಮವರ್ಗಕ್ಕೆ ಸಂಬಂಧಪಟ್ಟಿರುತ್ತವೆ. ವಿಲಕ್ಷಣ ಜೀವನ ಖಂಡವನ್ನು ತಮ್ಮ ಕಥೆಯ ವಿಷಯವಾಗಿ ಆರಿಸಿಕೊಳ್ಳುವುದು ಇವರಿಗೆ ಬಹುಹಿತ. ನಿಷಿದ್ಧ ಕಾಮುಕತೆ ಇವರ ಕಥೆಗಳಲ್ಲಿ ಒಂದಲ್ಲ ಒಂದು ರೂಪದಲ್ಲಿ ಪ್ರವೇಶ ಪಡೆದಿರುತ್ತದೆ.

'ಮಾಯಿ ಸುಧರಾಂ' ಇವರ ಆರಂಭದ ಕಥೆಗಳಲ್ಲಿ ಒಂದು. ಮೊತ್ತಮೊದಲು ಇದೇ ಕಥೆಯ ಮೂಲಕ ಬೂಟಾಸಿಂಗರಿಗೆ ಖ್ಯಾತಿಯು ಲಭಿಸಿತು. ತಾನೂ ರೇಲ್ವೆ ಶಂಟಿಂಗ್ ಲೈನಿನೊಂದಿಗೆ ಸಂಬಂಧಪಟ್ಟವರಾದ್ದರಿಂದ ಬುಟಾಸಿಂಗರಿಗೆ ಈ ಬದುಕಿನ ನಿಕಟ ಅನುಭವವಿದ್ದು ಅದು ಈ ಕಥೆಯಲ್ಲಿ ಸಹಜವಾಗಿ ಪ್ರಾಮಾಣಿಕ ಅಭಿವ್ಯಕ್ತಿ ಪಡೆದಿದೆ.

## ಜಸವಂತ್ ಸಿಂಗ್ ವಿರದೀ

ಜನನ : 1934

ಶಿಕ್ಷಣ : M.A. (ಹಿಂದಿ)

ಉದ್ಯಮ : ಸರಕಾರಿ ಚಾಕರಿ (ಸಂಪಾದಕ, ಹಿಂದೀ ಶಿಕ್ಷಾ ವಿಭಾಗ, ಪಂಜಾಬ ಸರಕಾರ)

ಕಥಾಸಂಗ್ರಹ : ಪೀಡ ಪರಾಯೀ, ಅಪನೀ ಅಪನೀ ಸೀಮಾ.

ವಿಳಾಸ : ಸಂಪಾದಕ, ಹಿಂದೀ ಶಿಕ್ಷಾ ವಿಭಾಗ, ಪಂಜಾಬ ಸರಕಾರ, ಚಂಡೀಗಢ.

ಜಸವಂತ್ ಸಿಂಗ್ ವಿರದೀ ಹೊಸ ತಲೆಮಾರಿನ ಪ್ರಮುಖ ಕಥೆಗಾರರು—ಅನುಭವದ ಬಗ್ಗೆ ಯಥಾರ್ಥವಾದಿ, ಅಭಿವ್ಯಕ್ತಿಯ ಬಗ್ಗೆ ಜಾಗ್ರತೆ. ಇವರ ವಿಕಾಸ ಯಾತ್ರೆ ನಿರಂತರ ಪ್ರಯೋಗದ ಭರವಸೆ ತುಂಬುತ್ತದೆ. ಅವರ ಪ್ರತೀಕಾತ್ಮಕ ಕಥೆಯಾದ ತಾರೆ ತೋಡನಾ ಅವರ ಪ್ರಸಿದ್ಧಿಗೆ ಆಧಾರವಾಯಿತು. ಕ್ರಮೇಣ ವಿರದೀ ತಮ್ಮ ಕಥೆಯನ್ನು ಘಟನೆ ಮತ್ತು ಚರಿತ್ರದ ಬಂಧನದಿಂದ ಮುಕ್ತ ಮಾಡಿದ್ದಾರೆ. ವಿರಿದೀಯ ಕೃತಿಗಳಲ್ಲಿ ಘಟನೆ ಅಥವಾ ಚಾರಿತ್ರ ಸ್ವತಂತ್ರ ಕಲಾ ತತ್ವದ ರೂಪದಲ್ಲಿ ಅಲ್ಲ, ಸಮಗ್ರ ಬದುಕನ್ನು ವಸ್ತುನ್ಮುಖಿಯಾಗಿ ಭಾವುಕತಾರಹಿತ ದೃಷ್ಟಿಯಿಂದ ರೂಪಿಸಲಾಗಿದೆ. ಮತ್ತು ಇದೇ ವಿರಿದೀಯ ಕಥೆಗಳ ವಿಶೇಷತೆಯಾಗಿದೆ.

ಅಪನೀ ಅಪನೀ ಸೀಮಾ (ಅವರವರ ಗಡಿಗಳು) ಈ ಕಥೆಯಲ್ಲಿ ಸಂಕ್ರಮಣ ಕಾಲದ ಜೀವನದ ಸಹಜ ವಸ್ತುನ್ಮುಖಿಯಾದ ಚಿತ್ರಣವಿದೆ. ಇದು ಶುದ್ಧ ಹೆಣ್ಣಿನ ಕಥೆಯೂ ಅಲ್ಲ, ಗಂಡಿನ ಕಥೆಯೂ ಅಲ್ಲ, ಸಮಸ್ಯೆಯನ್ನು ಶುದ್ಧ ಹೆಣ್ಣಿನ ಅಥವಾ ಶುದ್ಧ ಗಂಡಿನ ದೃಷ್ಟಿಯಿಂದ ನೋಡಿಲ್ಲ. ಎರಡೂ ದೃಷ್ಟಿಕೋನಗಳಲ್ಲಿ ಒಡಂಬಡಿಕೆ ಮಾಡಿಸುವ ಪ್ರಯತ್ನವೂ ಇಲ್ಲ. ಇದು ಕೇವಲ ವ್ಯಕ್ತಿ—ಮಾನವ ತನ್ನ ತನ್ನ ಮಿತಿಯಲ್ಲಿ ಕಾಣಿಸಿಕೊಳ್ಳುವಂತಹ ಆಧುನಿಕ ವಿಚಾರವಾಗಿದೆ.

## ಮೋಹನ ಭಂಡಾರೀ

ಜನನ : 1937

ಶಿಕ್ಷಣ : B.A.,LL.B.

ಉದ್ಯಮ : ಸರಕಾರಿ ಚಾಕರಿ (ಶಿಕ್ಷಾ ವಿಭಾಗ, ಪಂಜಾಬ್)

ಕಥಾಸಂಗ್ರಹ : ತಿಲಚಾಲೀ, ಮನುಜ್ ದೀ ಪೈಡ.

ವಿಳಾಸ : 1385 A/20-B ಬಿ. ಸೆಕ್ಟರ್, ಚಂಡೀಗಢ.

ಮೋಹನ ಭಂಡಾರೀ ಹೊಸ ತಲೆಮಾರಿನ ಪ್ರಮುಖ ಲೇಖಕರಲ್ಲಿ ಒಬ್ಬರು. ಅವರ ಶೈಲಿ ಹಳೆಯ ಮತ್ತು ಹೊಸತರ ನಡುವೆ ಸಂಕ್ರಮಣದ ರೇಖೆಯ ಮೇಲೆ ನಿಂತಂತೆ ಅನಿಸುತ್ತದೆ. ಮಾಳ್ವ ಪ್ರದೇಶದ ಭೂಮಿಹೀನ ಹಳ್ಳಿಗಾಡು ಜನವರ್ಗ ಇವರ ಕಥೆಗಳ ಪ್ರಮುಖ ವಿಷಯ. ಈ ಜನಗಳ ಕಷ್ಟಮಯವಾದ ಬದುಕನ್ನು ಅವರು ಸಹಾನುಭೂತಿ ಮತ್ತು ವ್ಯಂಗ್ಯ ಮಿಶ್ರಿತ ಧ್ವನಿಯಲ್ಲಿ ನಿರೂಪಿಸುತ್ತಾರೆ. ಪ್ರಚಲಿತ ಪ್ರವಾಹಿಯಾದ ಭಾಷೆ ಅವರ ಕಥಾ ಶಿಲ್ಪದ ಪ್ರಮುಖ ವಿಶೇಷತೆ.

'ಮುಝೆ ಟಾಗೋರ ಬನಾದೇ ಮಾಂ . . .' (ನನ್ನನ್ನು ಟಾಗೋರನಾಗಿ ಮಾಡಮ್ಮಾ) ಕಥೆಯಲ್ಲಿ ಹಳ್ಳಿಯ ಕುಂಬಾರನ ಸಾಧಾರಣ ಸ್ಥಿತಿ ಮತ್ತು ಅವನ ವ್ಯಕ್ತಿ ಚಿತ್ರಣವನ್ನು ಭಾರಿ ಸಾಮಂಜಸ್ಯದ ರೀತಿಯಲ್ಲಿ ಪ್ರಸ್ತುತಪಡಿಸಲಾಗಿದೆ. ಕಥೆಯ ಕೊನೆ ಹಳೆಯ ಪ್ರಭಾವವನ್ನೇ ಬೀರಿದರೂ ಹೊಸ ಅನುಭವದ ಮನವರಿಕೆಯಾಗುತ್ತದೆ.

Printed at Decent Offset, Naraina Indl. Area Ph. I, New Delhi-110 028.